ಜಯತು ಭಗವಾನ್

ಬಾಲಸರಸ್ವತೀ ಗ್ರಂಥಮಾಲಾ

---

# ಚಿತ್ರಗುಪ್ತನ ೨ನೆಯ ದಪ್ತರ

## ೨

# ಬೆನ್ನ ಹತ್ತಿದ ಬೇತಾಳ



ವಿದ್ವಾನ್

**ವಿದ್ಯಾಭೂಷಣ ಬಾಲಸರಸ್ವತಿಯವರಿಂದ**

ವಿರಚಿತವಾದುದು

---


ಬೆಂಗಳೂರು

ವಿ. ಸೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

Price 12 As.] 1931 [ಬೆಲೆ ೧೨ ಆಣೆ.

Publisher,
**G. Siddappa, Photographer,**
BANGALORE CITY.

ಸೋಲ್ ಏಜಂಟರು,
**ಕೆ. ಎ. ಚೌರಪ್ಪ ಅಂಡ್ ಸನ್ಸ್,**
**ಪುಸ್ತಕ ವ್ಯಾಪಾರಿಗಳು,**
ಅವೆನ್ಯೂ ರೋಡ್, ಬೆಂಗಳೂರು ಸಿಟಿ.



ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

*

ಜಯತು ಭಗವಾನ್

ಬಾಲಸರಸ್ವತೀ ಗ್ರಂಥಮಾಲಾ

---

# ಚಿತ್ರಗುಪ್ತನ ೨ನೆಯ ದಪ್ತರ

## ೨

# ಬೆನ್ನ ಹತ್ತಿದ ಬೇತಾಳ

(ಪತ್ತೇದಾರನ ಸಾಹಸ ಕಥೆ)

## ಪ್ರಥಮಾವತಾರ

---

### ಮುನ್ನುಡಿ

ತಾಂತಿಯಾ ಭಿಲ್ಲ ನೆಂಬುವನು ಇಂದಿಗೆ ಸ್ವಲ್ಪ ಕಾಲಕ್ಕೆ ಹಿಂದೆ ನಮ್ಮ ಭಾರತ ಭೂಮಿಯಲ್ಲಿ ಅದ್ವಿತೀಯನೆಂದು ಸುಪ್ರಸಿದ್ಧನಾದ ಒಬ್ಬ ಚೋರಾಗ್ರೇಸರ ಚಕ್ರವರ್ತಿಯಾಗಿದ್ದನು ಈತನನ್ನು ಪ್ರತ್ಯಕ್ಷವಾಗಿ ನೋಡಿದವರು ಈಗಲೂ ಅನೇಕಮಂದಿಯಿರುವರು. ಭಾರತ ಖಂಡದಲ್ಲಿಯೇ ಆಗಲಿ, ಭಾರತೇತರ ಖಂಡದಲ್ಲಿಯೇ ಆಗಲಿ, ಈ ಕಳ್ಳನ ಪ್ರಭಾವವನ್ನು ಅರಿಯದವರೇ ಇಲ್ಲ. ಚರಿತ್ರಕಾರರೂ ಈತನ ವಿಷಯವಾಗಿ ಅನೇಕಾನೇಕವಾದ ಉಲ್ಲೇಖಗಳನ್ನು ಭಾರತೀಯರ ತಿಳಿವಿಗಾಗಿ ಮುಂದಿಟ್ಟಿರುವರು. ಆದರೆ, ತಾಂತಿಯಾ ಭಿಲ್ಲಿನ ಅಸಮಸಾಹಸ ಕಾರ್ಯಗಳೆಲ್ಲವೂ ಚರಿತ್ರಕಾರರಿಂದ ಹೊರಬಿದ್ದಿರುವುವೆಂದು ಮಟ್ಟಿಗೆ ದೃಢವಾಗಿ ಹೇಳುವುದಕ್ಕೆ ಸಾಗದು. ಕಾರಣವೇನೆಂದರೆ—ಚರಿತ್ರಕಾರರ ಗೋಚರಕ್ಕೆ ಬೀಳದೇ ಇರತಕ್ಕ ಈ ಕಳ್ಳನ ಇನ್ನೂ ಅನೇಕ ಸಾಹಸ ಕಥೆಗಳು ಜನಜನಿತವಾಗಿ ಪ್ರಚಾರದಲ್ಲಿರುವುವು. ಚರಿತ್ರೆಗಳಲ್ಲಿ ಉಲ್ಲೇಖಿಸ

---

ವಿದ್ವಾನ್ ವಿದ್ಯಾಭೂಷಣ ಬಾಲಸರಸ್ವತಿಯವರಿಂದ ವಿರಚಿತವಾದುದು.

ಲ್ಪಟ್ಟಿಲ್ಲವಾದುದರಿಂದ, ಇಂತಹ ಐತಿಹ್ಯಗಳೆಲ್ಲವೂ ಸುಳ್ಳೆಂದು ಸಿದ್ಧಾಂತ ಪಡಿಸ ಲಾಗುವುದಿಲ್ಲ. ಜನಜನಿತವಾಗಿ ಬಂದ ಐತಿಹ್ಯಗಳಲ್ಲಿಯೂ ಸತ್ಯ ಘಟನಾಮೂಲಕ ವಾದ ಅನೇಕ ತತ್ತ್ವಗಳು ಅಡಗಿರುವುವೆಂದು ಅನೇಕರು ಅರಿತುಕೊಳ್ಳ ತಕ್ಕು ದಾಗಿದೆ.

ಹೇಳುವುದಕ್ಕೆ ಬಂದುದೇನೆಂದರೆ—ತಾಂತಿಯಾ ಭಿಲ್ಲನ ರೋಮಹರ್ಷಣ ಕೃತ್ಯಗಳನ್ನು ಕಣ್ಣಾರೆ ನೋಡಿದವರೂ ಕಿವಿಯಾರೆ ಕೇಳಿದವರೂ ಆತನ ಅದ್ಭುತ ಸಾಹಸಗಳನ್ನು ಶ್ರೋತೃಗಳ ಮನೋವಿನೋದನಕ್ಕಾಗಿ ಕಂಡಕಂಡೆಡೆಗಳಲ್ಲಿ ಬಿತ್ತರಿಸಿರುವರು. ಇಷ್ಟಾದರೂ ತಾಂತಿಯಾ ಭಿಲ್ಲನ ಅನೇಕ ಸಂಗತಿಗಳು ಅನೇಕರ ಕಿವಿಗೆ ಇನ್ನೂ ಬಿದ್ದಿಲ್ಲವಾದುದರಿಂದ, ನಾವು ಸಾಧ್ಯವಾದಷ್ಟು ಆತನ ವಿಷಯವಾಗಿ ಕಂಡ ಕೇಳಿದ ಘಟನಾ ಚಮತ್ಕಾರಗಳನ್ನು ಕ್ರಮವರಿತು ಕಾವ್ಯ ಮಾರ್ಗಾವಲಂಬನದಿಂದ ಉಲ್ಲೇಖಿಸುವುದಕ್ಕೆ ಸಿದ್ಧರಾಗಿರುವೆವು.

ನಮ್ಮ ಪ್ರಿಯ ಪಾಠಕ ಮಹಾಶಯರು ಈ ಕಥಾ ವಿಶೇಷವನ್ನು ಸತ್ಯ ವೆಂದಾದರೂ ತಿಳಿಯಲಿ, ಅಸತ್ಯವೆಂದಾದರೂ ತಿಳಿಯಲಿ. ಇದರಿಂದ ಗ್ರಂಥ ಕಾರರಿಗೆ ಆವ ಕೊರತೆಯೂ ಇರುವುದಿಲ್ಲ. ಹೇಗಾದರೂ ಆಗಲಿ, ಈ ಗ್ರಂಥ ವನ್ನು ಓದುವುದಕ್ಕೆ ಕುಳಿತರೆ, ಕಥೆಯನ್ನು ಮುಗಿಸುವ ವರೆಗೂ ಮನಸ್ಸು ಸಮಾಧಾನದ ಸ್ಥಿತಿಗೆ ಬರುವುದಿಲ್ಲವಾದುದರಿಂದ, ಇದರ ಸತ್ಯಾ ಸತ್ಯತ್ವವನ್ನು ಕುರಿತು ನಾವಿಲ್ಲಿ ವಿಶೇಷವಾಗಿ ಬರೆಯಬೇಕಾದುದೇನೂ ಇರುವುದಿಲ್ಲ. ಪತ್ತೇ ದಾರರ ಸಾಹಸ ಕಥೆಗಳನ್ನು ಓದುವುದರಲ್ಲಿ ಅತ್ಯಾಸಕ್ತಿಯಿರತಕ್ಕವರೆಲ್ಲರೂ ತಾಂತಿಯಾ ಭಿಲ್ಲನ ಚಾತುರ್ಯಗಳಿಂದ ತುಂಬಿ ತುಳುಕಾಡುತ್ತಿರುವ ಈ "**ಬೆನ್ನ ಹತ್ತಿದ ಬೇತಾಳ**" ಎಂಬ ಚೇತಶ್ಚಮತ್ಕಾರಕವಾದ ಕಥಾವಿಶೇಷವನ್ನು ಅವಶ್ಯ ವಾಗಿಯೂ ಅವಧರಿಪುದು. ಲೋಕೋತ್ತರವಾದ ಕೆಲಸಗಳನ್ನು ಮಾಡಿದವರಿಗೆ ಜನರು ಕಾರ್ಯಾನುಗುಣವಾದ ಬಿರುದಗಳನ್ನು ಕೊಡುವ ವಾಡಿಕೆಯಂತೆ, ತಾಂತಿಯಾ ಭಿಲ್ಲನಿಗೂ ಅನೇಕ ಬಿರುದಗಳು ಸಂದಿದ್ದುವು. ಕೆಲವರು ತಾಂತಿಯಾ ಭಿಲ್ಲನನ್ನು ಕಲಿಭೀಮನೆಂದೂ, ಕೆಲವರು ಮತ್ತ ಮಾತಂಗನೆಂದೂ, ಕೆಲವರು ಭಿಲ್ಲ ಭಲ್ಲೂಕನೆಂದೂ, ಕೆಲವರು ಭೂತಾವತಾರನೆಂದೂ, ಕೆಲವರು ತಾಳಬೇತಾಳ ನೆಂದೂ, ಕೆಲವರು ಪ್ರೇತರಾಜನೆಂದೂ, ಮತ್ತೆ ಕೆಲವರು ಮತ್ತಾವಾವುದೋ ಬಿರುದಾವಳಿಯನ್ನು ದಯೆಪಾಲಿಸಿರುವರು.

ಇಂತಹ ಜಸವಡೆದ ತಾಂತಿಯಾ ಭಿಲ್ಲನ ಚರಿತ್ರೆಯಲ್ಲಿ ಅನೇಕ ಘಟನಾ ವಿಶೇಷಗಳನ್ನು ಅವಲಂಬಿಸಿದ ಕೆಲವು ನವನ್ಯಾಸಗಳನ್ನು ಚಿತ್ರಗುಪ್ತನ ಎರಡ ನೆಯ ದಪ್ತರದಲ್ಲಿ ಮುದ್ರಿಸುವವರಾಗಿರುವೆವು. ಆದುದರಿಂದ ನಮ್ಮ ಪ್ರಿಯ

ಪಾಠಕ ಮಹಾಶಯರ ಅಭಿಮಾನದ ಬಲದಿಂದ ನಮ್ಮ ಉದ್ದೇಶವು ನೆರವೇರ ಬೇಕಾಗಿರುವುದೆಂಬುದನ್ನು ನಾವಿಲ್ಲಿ ಉಲ್ಲೇಖಿಸಿ ತಿಳಿಸಬೇಕಾದುದೇನೂ ಇರುವುದಿಲ್ಲ.

---

## ಮೊದಲನೆಯ ವಿಲಾಸ

### ಅತಿಥಿ ಸತ್ಕಾರ

ಧನುರ್ಮಾಸವು ಕಳೆದು ಹೋಗುವುದರಲ್ಲಿರುವುದು. ಉತ್ತರಾಯಣವು ಬರುವುದೆಂದು ಜನರು ಆನಂದಸಾಗರದಲ್ಲಿ ತೇಲಿ ಮುಳುಗುತ್ತಿರುವರು. ಇಷ್ಟ ಮಿತ್ರರಲ್ಲಿಯೂ ಬಂಧುಬಾಂಧವರಲ್ಲಿಯೂ ಎಳ್ಳು ಸಕ್ಕರೆಯನ್ನು ಬೀರಬೇಕೆನ್ನು ವುದರಲ್ಲಿ ಸಣ್ಣ ಸಣ್ಣ ಮಕ್ಕಳ ತಾಯಿಯರ ಸಡಗರವನ್ನು ಹೇಳಿ ತೀರದು. ಬಡವ ಮೊದಲ್ಗೊಂಡು ಬಲ್ಲಿದರ ವರೆಗೂ ಎಲ್ಲರೂ ತಮ್ಮ ತಮ್ಮ ಯೋಗ್ಯತೆಗೆ ತಕ್ಕಹಾಗೆ ವ ನೆಮಟಗಳನ್ನು ಸಿಂಗರಿಸುವುದರಲ್ಲಿ ಮಗ್ನರಾಗಿರುವರು. ಹಬ್ಬದ ಪರುಟವಣೆ ಯಿಂದ ಅಕ್ಕಪಕ್ಕದ ಗೆಳತಿಯರನ್ನು ಮೀರಿ ಶೋಭಿಸಬೇಕೆಂದು ಹೆಂಗುಸರು ಬಗೆ ಬಗೆಯ ಆಹಾರಸಾಮಗ್ರಿಗಳನ್ನು ಸಜ್ಜುಗೊಳಿಸುತ್ತಿರುವರು. ಈ ಸೊಬಗನ್ನು ನೋಡುವುದೇ ಅದೊಂದು ಮಹತ್ತರವಾದ ನೇತ್ರೋತ್ಸವವೆಂದು ನಾವು ವರ್ಣಿ ಸುವುದಾದರೂ, ಅದೆಂದಿಗೂ ಸುಳ್ಳಿನ ಸುದ್ದಿಯಾಗಲಾರದು.

ಹೀಗಿರಲೊಂದು ದಿನದ ಸಂಧ್ಯಾಕಾಲದಲ್ಲಿ ದಾರಿಗನೊಬ್ಬನು ರಾಜನಗರಕ್ಕೆ ಐವತ್ತು ಮೈಲಿಗಳ ದೂರದಲ್ಲಿರುವ ಅದೊಂದು ತುಂಬಿದ ಗ್ರಾಮದ ಬಳಿಯ ದಾರಿ ಯಲ್ಲಿ ಒಂದು ಗಿಡದ ಬುಡದಲ್ಲಿ ಕುಳಿತುಕೊಂಡು ಎಂದೂ ಇಲ್ಲದ ಅಂದಿನ ಅಪರಿ ಮಿತವಾದ ಚಳಿಯಿಂದ ಗದಗದನೆ ನಡುಗುತ್ತಿದ್ದನು. ಆದರೂ ಆತನು ವರ್ಣಿಸ ಲಸದಳವೆನಿಸಿದ ಗಂಭೀರವಾದದೊಂದು ಚಿಂತೆಯಲ್ಲಿ ಮೈಮರೆತು ತನ್ನ ಕಾಲ ದೇಶಾವಸ್ಥೆಗಳೆಲ್ಲವನ್ನೂ ಒಂದೇ ತಡವೆಗೆ ದೂರಮಾಡಿಬಿಟ್ಟಿದ್ದನು. ಆತನು ಎಷ್ಟೋ ಹೊತ್ತು ಈ ಯವಸ್ಥೆಯಲ್ಲಿದ್ದ ಬಳಿಕ ತಟ್ಟನೆ ಹಿಂದಿರುಗಿ ನೋಡುವಲ್ಲಿ, ಅಸ್ತೋನ್ಮುಖನಾದ ಸೂರ್ಯದೇವನ ಆರಕ್ತಮಯವಾದ ಒಂದೆರಡು ಕಿರಣಗಳು ಆತನ ಚಿಂತಾಕುಲವಾದ ಮುಖಮಂಡಲದ ಮೇಲೆ ಬಿದ್ದು ನಲಿದಾಡಿದುವು. ಇದನ್ನು ನೋಡಿ ದಾರಿಗನು ತನ್ನ ಅಂಗಾಂಗಗಳನ್ನೂ ನೋಡಿದನು. ಆತನು ತೊಟ್ಟಿದ್ದ ಕವಚವು ನೂರಾರು ತೇಪೆಗಳಿಂದ ವಿಚಿತ್ರವಾಗಿ ತೋರಿಕೊಳ್ಳುತ್ತಿದ್ದಿತು. ಉಟ್ಟಿದ್ದ ವಸ್ತ್ರವು ಶತಚ್ಛಿದ್ರವಾಗಿ, ಅಲ್ಲಲ್ಲಿ ಹಾಕಿದ್ದ ಗಂಟುಗಳು ಮಾನವನ್ನು ಕಾಪಿಡುತ್ತಿದ್ದುವು. ಕಾಲಿನಲ್ಲಿ ಮೆಟ್ಟಿದ್ದ ಮೆಟ್ಟಿನ ಮೇಲೆ ಮೋಚಿಯವನು

ಮತ್ತೊಬ್ಬನಿಗೆ ಅವಕಾಶವಿಲ್ಲದ ಹಾಗೆ ತನ್ನ ಕಲಾಕೌಶಲವೆಲ್ಲವನ್ನೂ ತೋರಿಸಿಯೇ ಬಿಟ್ಟಿದ್ದನು. ಆತನು ಬಿಟ್ಟಿದರೆ ಬಣ್ಣಗೇಡು ಎನ್ನುವಂತಹ ರುಮಾಲೊಂದನ್ನು ತಲೆಗೆ ಸುತ್ತಿದ್ದನು. ಇಂತಹ ವೇಷಭೂಷೆಗಳಿಂದಲಂಕೃತನಾಗಿದ್ದ ಆ ದಾರಿಗನು ಬಹುದೂರ ಮಾರ್ಗವನ್ನು ನಡೆದು ನಡೆದು ಬೇಸತ್ತು ಆಯಾಸ ಪರಿಹಾರಕ್ಕಾಗಿ ಒಂದು ಗಿಡದ ಬುಡದಲ್ಲಿ ಬಂದು ಕುಳಿತಿದ್ದನು.

ಈತನೇ ಭಾರತಭೂಮಿಯಲ್ಲಿ ಅದ್ವಿತೀಯನಾದ ಕಳ್ಳನೆಂದು ಪ್ರಸಿದ್ಧಿಪಡೆದ ತಾಂತಿಯಾ ಭಿಲ್ಲನು. ಈತನು ಇತರರಂತೆ ಹೇಡಿಗಳ್ಳನಾಗಿರಲಿಲ್ಲ. ಈತನ ವ್ಯಾಪಾರವೇ ಅಸಾಧಾರಣವಾದುದು. ಗುಂಪುಕಟ್ಟಿ ದರೋಡೆಗಳ್ಳತನಕ್ಕೆ ಹೊರಡುವುದು ಅದೊಂದು ಹೇಯವಾದ ಕೆಲಸವೆಂದು ಈತನು ತಿಳಿದುಕೊಂಡಿದ್ದನು. ಕೊಬ್ಬಿದ ಹಣಗಾರರನ್ನು ಸುಲಿದು ಸಮಯ ವರಿತು ಬಡಬಗ್ಗರಿಗೆ ಉಪಕರಿಸುವ ಮಹಾಪುರುಷಲಕ್ಷಣವು ಈತನಲ್ಲಿ ಹೇರಳವಾಗಿದ್ದಿತು.

ತಾಂತಿಯಾ ಭಿಲ್ಲನು ಮಧ್ಯವಯಸ್ಕನು. ಆದರೂ ಈತನ ದೇಹದಲ್ಲಿ ದಾರ್ಢ್ಯವೂ, ಬುದ್ಧಿಯಲ್ಲಿ ಕೌಶಲ್ಯವೂ, ಕಾರ್ಯದಲ್ಲಿ ಚಾಕಚಕ್ಯವೂ ಅಪರಿಮಿತವಾಗಿದ್ದಿತು. ಈತನ ಊಹಾಪೋಹ ಜ್ಞಾನವಂತೂ ಅನ್ಯಾದೃಶವಾದುದು. ಈತನ ಕಾಲೋಚಿತವಾದ ವೇಷವೂ ಭಾಷೆಯೂ ಎಂತಹವರನ್ನಾದರೂ ಬೆರಗುಮಾಡಿ ಬಿಡುತ್ತಿದ್ದಿತು. ಎಷ್ಟೋ ಜನ ಸಮರ್ಥರಾದ ಪತ್ತೇದಾರರೂ ಈತನು ನಡೆಯಿಸಿದ ಕಳ್ಳತನದ ರಹಸ್ಯವನ್ನು ಭೇದಿಸಲಾರದವರಾಗಿ ಕಂಗೆಟ್ಟು ಹೋಗಿರುವರು; ಎಷ್ಟೋ ಜನ ದೊಡ್ಡ ದೊಡ್ಡ ಸ್ವನಾಮಖ್ಯಾತರಾದ ನ್ಯಾಯವಾದಿಗಳೂ ನ್ಯಾಯಸ್ಥಾನಗಳಲ್ಲಿ ಈತನೊಡನೆ ವಿವಾದ ಮಾಡಿ ಜಯಿಸಲಾರದವರಾಗಿ ತಲೆಯನ್ನು ತಗ್ಗಿಸಿ ಬಿಟ್ಟಿರುವರು ; ಎಷ್ಟೋ ಜನ ರಾಜ್ಯದ ಪ್ರಧಾನಾಧಿಕಾರಿಗಳೂ ಈತನ ಬಲೆಗೆ ಸಿಕ್ಕಿ ಗತಿಗಾಣದೇ ಗಾಣದಲ್ಲ ಸಿಕ್ಕಿದ ಕಬ್ಬಿನಂತೆ ನರಳಿ ಸಪ್ಪೆಯಾಗಿ ಹೋಗಿರುವರು ; ಎಷ್ಟೋ ಜನ ಪೋಲೀಸಿನವರೂ ಈತನನ್ನು ಹಿಡಿದು ಬಂದಿಯನ್ನಾಗಿ ಮಾಡಬೇಕೆಂದು ಕಂಟಿಕಟಿಯಾದ ಸಂಕಲ್ಪವನ್ನು ಮಾಡಿಕೊಂಡು ಅಟ್ಟಹಾಸದಿಂದ ತೆರಳಿ ಈತನನ್ನು ಕಂಡ ಕೂಡಲೆಯೇ ಪ್ರಾಣಭಯದಿಂದ ವಿರೇಚನದ ಔಷಧವನ್ನು ತೆಗೆದುಕೊಂಡವರಂತಾಗಿ ಬಸವಳಿದು ಬಿದ್ದು ಹೋಗಿರುವರು. ಬಲುಮಾತಿನಿಂದೇನು ? ಈತನ ಹೆಸರನ್ನು ಕೇಳಿದ ಕೂಡಲೆ ಅಳುತ್ತಿದ್ದ ಮಕ್ಕಳು ಕೂಡ ಅಳುವನ್ನು ನಿಲ್ಲಿಸಿ ಬೆರಗಾಗಿ ಹೋಗಿರುವರು, ಎಂದ ಮೇಲೆ ತಾಂತಿಯಾ ಭಿಲ್ಲನ ಪರಾಕ್ರಮವನ್ನು ಕುರಿತು ಮತ್ತೇನು ವರ್ಣಿಸತಕ್ಕದಿರುವುದು ?

ಸರಕಾರದವರು ಈ ಕಳ್ಳನ ಹಾವಳಿಯನ್ನು ಕೇಳಿ ಈತನನ್ನು ಹಿಡಿಯುವುದಕ್ಕಾಗಿ ನೂರಾರು ವಾರಂಟುಗಳನ್ನು ಹುಟ್ಟಿಸಿದ್ದರು, ನೂರಾರು ಜನರೂ ಈತ

ನನ್ನು ಹಿಡಿಯುವ ಕೆಲಸದಲ್ಲಿ ಅವಾಗಲೂ ಜಾಗರೂಕರಾಗಿಯೇ ಇರುತ್ತಿದ್ದರು. ತಾಂತಿಯಾ ಭಿಲ್ಲನು ದೇವತಾವತಾರವನ್ನು ತಾಳಿದ ಮನುಷ್ಯನಲ್ಲ; ಅಲ್ಲದೆಯೂ ಕಳ್ಳಕಾಕರ ಸೈನ್ಯವನ್ನು ಕಟ್ಟಿಕೊಂಡು ಇತರರ ಕೈಗೆ ಸಿಕ್ಕದಂತಹ ಪಾಳಯಗಾರನೂ ಅಲ್ಲ. ತಾಂತಿಯಾ ಭಿಲ್ಲನು ಒಬ್ಬ ಸಾಮಾನ್ಯನಾದ ಭಿಲ್ಲ ಜಾತಿಗೆ ಸೇರಿದ ಕಳ್ಳನು. ಈತನು ಆವಾಗಲೂ ಎಲ್ಲೆಲ್ಲಿಯೂ ಇರುವನು, ಎಲ್ಲರೊಡನೆಯೂ ಸೇರುವನು, ಎಲ್ಲರಂತೆಯೇ ಕಾಣಿಸಿಕೊಳ್ಳುವನು. ಆದರೂ ಆರೊಬ್ಬರೂ ಈತನ ಗೋಜಿಗೇ ಹೋಗರು. ಕಾರಣವೇನೆಂದರೆ—ಈತನು ಹುಟ್ಟಿದ ಮೊದಲುಗೊಂಡು ಆವುದಕ್ಕೆ ಭಯವೆನ್ನುವರೋ ಅದನ್ನು ಮಟ್ಟಿಗೆ ಅರಿತವನೇ ಆಗಿರಲಿಲ್ಲ. ಆದುದರಿಂದ ತಾಂತಿಯನು ಧೈರ್ಯವೊಂದನ್ನೇ ಬೆಂಬಲವಾಗಿಟ್ಟುಕೊಂಡು ಕಳ್ಳತನಕ್ಕೆ ನುಗ್ಗುತ್ತಿದ್ದುದರಿಂದ, ಈತನನ್ನು ಕಂಡು ಕೇಳಿದವರೆಲ್ಲರೂ ಹೆದರಿ ಹೆದರಿ ಸಾಯುತ್ತಿದ್ದರು.

ಇವಾವುದರಿಂದಲೂ ಕಾರ್ಯಸಾಧನೆಯಾಗುವ ಸಂಭವವಿಲ್ಲವೆಂದು ತಿಳಿದು ಸರಕಾರದವರು ಚೋರಗ್ರಹಣತಂತ್ರದಲ್ಲಿ ಅಸಮಾನಬುದ್ಧಿಶಾಲಿಯಾದ ಅರಿಂದಮನೆಂದು ಪ್ರಸಿದ್ಧನಾದ ಪತ್ತೇದಾರನೊಬ್ಬನನ್ನು ಸಾಹಾಯ್ಯಕ್ಕೆ ತೆಗೆದುಕೊಂಡು, ತಾಂತಿಯಾ ಭಿಲ್ಲನನ್ನು ಹಿಡಿದುಕೊಡಬೇಕೆಂಬ ಗುರುತರವಾದ ಕಾರ್ಯಭಾರವನ್ನು ಅವನ ತಲೆಯ ಮೇಲೆ ಒರಗಿಸಿದರು. ತಾಂತಿಯಾ ಭಿಲ್ಲನು ತನ್ನ ಕೆಲಸದಲ್ಲಿ ಎಷ್ಟು ನಿಪುಣನಾಗಿದ್ದನೋ, ಅರಿಂದಮನೂ ತನ್ನ ಕೆಲಸದಲ್ಲಿ ಅಷ್ಟೇ ನಿಪುಣನಾಗಿದ್ದನು. ಅಧರ್ಮದ ಕಳ್ಳತನವೊಂದನ್ನು ಬಿಟ್ಟರೆ, ಅರಿಂದಮ ತಾಂತಿಯಾ ಭಿಲ್ಲರು ಮಿಕ್ಕ ವಿಷಯಗಳಲ್ಲಿ ಸಮಾನರೆಂದೇ ಹೇಳಬೇಕು. ಆದರೆ ಸರಕಾರಕ್ಕೆ ಶತ್ರುವಾದ ತಾಂತಿಯಾ ಭಿಲ್ಲನಿಗಿಂತಲೂ ಸರಕಾರಕ್ಕೆ ಮಿತ್ರನಾದ ಅರಿಂದಮನು ಒಂದು ಕೈ ಮೇಲೆಂದು ಹೇಳಿದರೂ ಹೇಳಬಹುದು. ಇಂತಹ ಜಸವಡೆದ ಪತ್ತೇದಾರನಾದ ಅರಿಂದಮನು ಸರಕಾರದ ಬೆಂಬಲವನ್ನು ಹೊದ್ದಿದವನಾಗಿ ತಾಂತಿಯಾ ಭಿಲ್ಲನನ್ನು ಹಿಡಿದು ತಂದೊಪ್ಪಿಸುವುದಾಗಿ ಸರಕಾರಕ್ಕೆ ಅಭಯವನ್ನಿತ್ತು ತನ್ನ ಕೆಲಸದಲ್ಲಿ ನಿರತನಾದನು. ತಾಂತಿಯಾ ಭಿಲ್ಲನು ಇದನ್ನು ಅರಿಯದವನಾಗಿರಲಿಲ್ಲ. ಹೋದಷ್ಟು ದಿನಗಳೂ ಸರಕಾರಕ್ಕೆ ವಿರೋಧವಾಗಿ ನಡೆವುದರಿಂದ ಎಂದಾದರೊಂದು ದಿನ ಪ್ರಾಣಾಪತ್ತು ಬಂದೇ ಬರುವುದೆಂದು ನಿಶ್ಚಯಿಸಿ ಇನ್ನಾದರೂ ಶಾಂತ ಚಿತ್ತನಾಗಿ ಜೀವಿತಶೇಷವನ್ನು ಕಳೆಯಬೇಕೆಂದು ಸಿದ್ಧಾಂತ ಮಾಡಿಕೊಂಡು ತಾಂತಿಯಾ ಭಿಲ್ಲನು ರಾಜನಗರವನ್ನು ಬಿಟ್ಟು ಅದೊಂದಭುಕ್ತ ಮೂಲೆಯಲ್ಲಿ ವಾಸಮಾಡುವುದಕ್ಕಾಗಿ ಪಯಣ ಹೊರಟಿದ್ದನು. ಆರಿಗೇ ಆಗಲಿ ಕಯ್ಯಲ್ಲಿ ಹಣವಿಲ್ಲದ ವೇಳೆಗಳಲ್ಲಿ ಇಂತಹ ವೈರಾಗ್ಯವು ಹುಟ್ಟುವುದು ಅದೊಂದಚ್ಚರಿಯ ಸುದ್ದಿಯೇ ಅಲ್ಲ. ಪ್ರಕೃತ ಸಂದರ್ಭದಲ್ಲಿ ತಾಂತಿಯಾ ಭಿಲ್ಲನು

ರಿಕ್ತ ಹಸ್ತನಾಗಿದ್ದುದರಿಂದ ತನ್ನ ಜೀವಿತದಲ್ಲಿ ನಿರಾಶೆಯನ್ನು ತಾಳಿ ಎಲ್ಲಿಗಾದರೂ ಹೊರಟುಹೋಗೋಣವೆಂದು ದಾರಿ ನಡೆವುದಕ್ಕೆ ಮೊದಲು ಮಾಡಿ, ನಾವು ಹಿಂದೆ ವಿವರಿಸಿದ ಸ್ಥಳದಲ್ಲಿ ಒಂದು ಗಿಡದ ಬಳಿ ವಿಶ್ರಾಂತಿಗಾಗಿ ಕುಳಿತಿದ್ದನು.

ಮಾರ್ಗಾಯಾಸದಿಂದ ಅವನ ಶರೀರವು ಶೀರ್ಣವಾಗಿ ಹೋಗಿರುವುದು ಕಯ್ಯಲ್ಲಿ ಹಣಕಾಸುಗಳಿಲ್ಲದಿರುವುದರಿಂದ ಮನವು ಕಿರಿಕಿರಿ ಪಡುತ್ತಿರುವುದು ಅನ್ನಾಭಾವದಿಂದ ಮುಖವು ಸೊಕ್ಕಿ ಸೊರಗಿ ಹೋಗಿರುವುದು. ಬಾಯಾರಿಕೆಯಿಂದ ಬಾಯಿಯೊಣಗಿ ಮಾತೇ ಹೊರಡದು. ಅವನಿಗೆ ವಾಸಕ್ಕೆ ಮನೆಯಿಲ್ಲ ಉಪಚರಿಸುವುದಕ್ಕೆ ಬಂಧುಬಾಂಧವರಾರೂ ಇಲ್ಲ. ಹತ್ತಿರ ಬಾರೆಂದು ಕರೆಯ ತಕ್ಕ ಇಷ್ಟ ಮಿತ್ರರು ಮೊದಲೇ ಇಲ್ಲ. ಎಲ್ಲರೂ ಇವನನ್ನು ಕಂಡರೆ ಹೆದರುವರು. ಅಲ್ಲದೆಯೂ ಇವನನ್ನು ಸಾಧ್ಯವಾದಷ್ಟು ಬೇಗನೆ ಗಲ್ಲಿಗೇರಿಸುವುದಕ್ಕೆ ತತ್ತರ ಗುಟ್ಟುತ್ತಿರುವರು.

ಮಹಾ ಪರಾಕ್ರಮಶಾಲಿಯೂ ಅಘಟನ ಘಟನಾಸಮರ್ಥನೂ ಆದ ಶಾಂತಿಯಾ ಭಿಲ್ಲನಿಗೆ ಇಂತಹ ದುರವಸ್ಥೆಯು ಒದಗಿ ಬಂದಿತೆಂದರೆ ಇತರರ ಪಾಡೇನು? ಚೆನ್ನಾಗಿ ಪರಿಶೀಲಿಸಿ ನೋಡುವುದಾದರೆ. ಸಣ್ಣ ಸಣ್ಣ ಕಳ್ಳರು ಇವನಿಗಿಂತಲೂ ಎಷ್ಟೋ ಸುಖಿಗಳು; ಅವರ ಜೀವನವೂ ಎಷ್ಟೋ ಶಾಂತಿಮಯವಾದುದು.

ವಿಧಿವಿಲಾಸವನ್ನು ತಪ್ಪಿಸಬಲ್ಲವರಾರು? ದುರ್ದೈವದ ದುರಂತ ಪರಿಣಾಮವು ರಾಜಾಧಿರಾಜರಿಗೂ ತಪ್ಪಿದುದಲ್ಲ, ಬೀದಿಯ ಬಿಕಾರಿಗೂ ತಪ್ಪಿದುದಲ್ಲ. ಸುಖ ಬಂದಾಗ ಅದನ್ನು ಬಾಯ ಮುಚ್ಚಿಕೊಂಡು ಅನುಭವಿಸುವಂತೆ ದುಃಖ ಬಂದಾಗಲೂ ಹಾಗೆಯೇ ಅನುಭವಿಸಬೇಕಾದುದು ಮಾನವನ ಕರ್ತವ್ಯವೇ ಆಗಿರುವುದು. "ಸುಖಸ್ಯಾನಂತರಂ ದುಃಖಂ। ದುಃಖಸ್ಯಾನಂತರಂ ಸುಖಂ" ಎಂಬುದರ ತತ್ತ್ವವನ್ನು ಅರಿತುಕೊಂಡು ಎಲ್ಲರೂ ಸುಖದುಃಖಗಳನ್ನು ಅನುಭವಕ್ಕೆ ತಂದುಕೊಳ್ಳಲೇ ಬೇಕು. ಇದಕ್ಕಾಗಿ ಪಶ್ಚಾತ್ತಾಪ ಪಡುವುದರಿಂದ ಆವ ಪ್ರಯೋಜನವೂ ಇರಲಾರದು.

ಶಾಂತಿಯಾ ಭಿಲ್ಲನೂ ಇದೇ ರೀತಿಯಲ್ಲಿಯೇ ಚಿಂತಿಸಿಕೊಂಡವನಾಗಿ ಚಳಿಗಾಳಿಯ ಹೊಡೆತದಿಂದ ಗಡಗಡನೆ ನಡುಗುತ್ತಾ ಮರದ ಬುಡದಲ್ಲಿ ಕುಳಿತಿದ್ದನು. ಆತನಿಗೆ ಭವಿಷ್ಯತ್ತು ಶೂನ್ಯವಾಗಿ ಕಂಡುಬಂದುದರಿಂದ, ಆತನು ಬಲು ಹೊತ್ತು ಈ ಸ್ಥಲವನ್ನು ಬಿಟ್ಟು ಮುಂದಕ್ಕೆ ತೆರಳದೇ ಹೋದನು.

ಶಾಂತಿಯನ ಬಳಿಯಲ್ಲಿ ಒಂದು ಕೈಚೀಲವಿದ್ದಿತು. ಅದೇ ಅವನ ಸರ್ವಸ್ವವೂ ಆಗಿದ್ದಿತು. ಅದರಲ್ಲಿ ಕಳ್ಳತನಕ್ಕೂ ವೇಷಪರಿವರ್ತನೆಗೂ ಬೇಕಾದ

ಸಾಮಗ್ರಿಗಳೇ ಹೊರತು ಮತ್ತಾವ ಪದಾರ್ಥವೂ ಇರಲಿಲ್ಲ. ಇದರ ಬಲದಿಂದಲೇ ಈತನು ಕೋಟಿ ಗಟ್ಟಳೆ ಹಣವನ್ನು ಸಂಪಾದಿಸಿಯೂ ಕೋಟಿ ಗಟ್ಟಳೆ ಹಣವನ್ನು ಕಳೆದೂ ಇಂದು ಬಡತನದ ಮುದುಕನಂತೆ ವೇಷವನ್ನು ಹಾಕಿಕೊಂಡು ದಾರಿಗನಾಗಿ ತೆರಳಿರುವನು. ಇವನನ್ನು ನೋಡಿದವರೆಲ್ಲರೂ ಆರೋ ಹೊಟ್ಟೆಗಿಲ್ಲದ ಬೀದಿಯ ಮುದಿ ಬಿಕಾರಿಯೆಂದು ಇವನನ್ನು ಲೆಕ್ಕಿಸದೆ ಹೊರಟು ಹೋಗುತ್ತಿದ್ದರು.

ಶಾಂತಿಯನಿಗೆ ಬೆಳಗಿನಿಂದಲೂ ಆಹಾರವಿಲ್ಲ; ಎಲ್ಲಿಯಾದರೂ ಆಹಾರ ಮಂದಿರಗಳಲ್ಲಿ ಆಹಾರ ಮಾಡೋಣವೆಂದರೆ ಕಯ್ಯಲ್ಲಿ ಒಂದು ಬಿಡಿಕಾಸೂ ಇಲ್ಲ. ಈ ದುರವಸ್ಥೆಯಿಂದ ಪೀಡಿತನಾಗಿದ್ದ ಭಿಲ್ಲನು ಕತ್ತಲೆಯಾಗುವ ವರೆಗೂ ಇದ್ದಲ್ಲಿಯೇ ಕುಳಿತುಬಿಟ್ಟನು.

ಆರು ಕುಳಿತಿರಲಿ, ಆರು ನಿಂತಿರಲಿ, ಆರು ಸಂಚರಿಸುತ್ತಿರಲಿ, ಕಾಲಚಕ್ರವು ಮಟ್ಟಿಗೆ ವಿರಾಮವಿಲ್ಲದೆಯೇ ಸುತ್ತುತ್ತಿರುವುದು. ದಿನವಾದ ಮೇಲೆ ರಾತ್ರಿ ಬರುವುದೂ, ರಾತ್ರಿಯಾದ ಮೇಲೆ ದಿನ ಬರುವುದೂ ಇದೇ ಕಾಲಚಕ್ರದ ಮಹಾ ಮಹಿಮೆ.

ದಿನವು ಕಳೆಯಿತು. ಸೂರ್ಯದೇವನು ನಮ್ಮ ಭೂಭಾಗವನ್ನು ಕತ್ತಲೆಯಲ್ಲಿ ಮುಳುಗಿಸಿ ಮತ್ತೊಂದು ಭೂಭಾಗವನ್ನು ಬೆಳಗುವುದಕ್ಕೆ ತೆರಳಿದನು. ಅಂಧಕಾರವು ಕಳ್ಳನ ಹಾಗೆ ನಿಶ್ಶಬ್ದವಾಗಿ ಹಜ್ಜೆಯ ಮೇಲೆ ಹಜ್ಜೆಯನ್ನಿಡುತ್ತ ಕ್ರಮಕ್ರಮವಾಗಿ ಭೂಮಿಯನ್ನು ಆವರಿಸಿಕೊಂಡುಬಿಟ್ಟಿತು. ಭೂಮಿಯ ದುರವಸ್ಥೆಯನ್ನು ನೋಡಿ ಕಿಲಕಿಲನೆ ನಗುತ್ತವೆಯೋ ಎಂಬಂತೆ ನಕ್ಷತ್ರಗಳು ಆಕಾಶದಲ್ಲಿ ಮಿನುಗುಟ್ಟಿದುವು.

ಭಿಲ್ಲನು ಕತ್ತಲೆಯಾದುದನ್ನು ನೋಡಿ ಚಿಂತಾಕುಲನಾಗಿ ಕೈ ಚೀಲವನ್ನು ಒಂದು ಕಯ್ಯಲ್ಲಿಯೂ ದೊಣ್ಣೆಯೊಂದನ್ನು ಮತ್ತೊಂದು ಕಯ್ಯಲ್ಲಿಯೂ ಹಿಡಿದುಕೊಂಡು ಚಳಿಯಿಂದ ನಡುಗುತ್ತಾ ಸಮೀಪದಲ್ಲಿದ್ದ ಭೂತೇಶ್ವರವೆಂಬ ಗ್ರಾಮದ ಕಡೆಗೆ ದಾರಿ ಹಿಡಿದು ನಡೆದು ಹೋದನು. ಕೊಂಚ ಹೊತ್ತಿನೊಳಗಾಗಿ ಗ್ರಾಮವು ಸಮೀಪಿಸಿತು. ಭಿಲ್ಲನು ಗ್ರಾಮವನ್ನು ಪ್ರವೇಶಮಾಡಿ ಅಂಗಡೀ ಬೀದಿಯ ಕಡೆಗೆ ತೆರಳಿದನು. ಬೀದಿಯ ಇಕ್ಕಡೆಗಳಲ್ಲಿಯೂ ದೀಪಸ್ತಂಭ ಮಾಲೆಯ ಉಜ್ಜ್ವಲ ಪ್ರದೀಪಗಳು ಸೂರ್ಯನಲ್ಲಿನ ಸ್ಪರ್ಧೆಯಿಂದಲೋ ಎಂಬಂತೆ ಅಂಧಕಾರವನ್ನು ನಾಶಮಾಡುವುದರಲ್ಲಿ ವ್ಯಗ್ರಗಳಾಗಿದ್ದುವು. ಅಂಗಡಿಯವರು ಮುಂದೆ ಬರುವ ಹಬ್ಬಕ್ಕಾಗಿ ಕೊಳ್ಳುವವರು ಕೊಳ್ಳಲೆಂದು ತಮ್ಮ ತಮ್ಮ

ಮಾರಾಟದ ಪದಾರ್ಥಗಳನ್ನು ಚಿತ್ರವಿಚಿತ್ರವಾಗಿ ಆಯಾ ಸ್ಥಾನಗಳಲ್ಲಿ ಏರ್ಪಡಿಸಿಟ್ಟಿದ್ದರು. ನಮ್ಮ ಭಿಲ್ಲನಿಗೆ ಇವಾವುದರ ಕಡೆಗೂ ದೃಷ್ಟಿ ಬೀಳಲಿಲ್ಲ. ಹಸಿವೆಯಿಂದ ತಲ್ಲಣಿಸುತ್ತಿದ್ದ ಆತನಿಗೆ ಬೇಕಾಗಿದ್ದುದು ಆಹಾರ ಸಾಮಗ್ರಿಯು. ಆದುದರಿಂದ ಆತನು ಅದೊಂದು ತಿಂಡಿಯಂಗಡಿಯ ಮುಂದೆ ಬಂದು ನಿಂತು ನೋಡಿದನು. ಒಳಗೆ ಹೋಗುವವರು ನಿಶ್ಶಬ್ದವಾಗಿ ಹೋಗುತ್ತಿರುವರು; ಹೊರಗೆ ಬರುತ್ತಿರುವವರು ಆನಂದದಿಂದ ನಗುತ್ತಲೂ ಆಗಿಂದಾಗ ತೇಗುತ್ತಲೂ ಬರುತ್ತಿರುವರು. ಈ ನೋಟವು ಆತನ ಕಣ್ಣಿಗೆ ಬಿದ್ದುದರಿಂದಲೂ, ಅಲ್ಲಿನ ರುಚಿರುಚಿಯಾದ ಪಕ್ವಪದಾರ್ಥಗಳ ವಾಸನೆಯು ಮೂಗನ್ನು ಅಡರಿದುದರಿಂದಲೂ, ಭಿಲ್ಲನ ಹಸಿವು ಇಮ್ಮಡಿಯಾಯಿತು. ಬಳಿಕ ಆತನು ತನ್ನ ಕವಚದ ಜೇಬಿನಲ್ಲಿ ಕೈಹಾಕಿ ನೋಡಿದನು. ಅವನ ದುರ್ಯೋಗಕ್ಕೆ ತಕ್ಕ ಹಾಗೆ ಅದರಲ್ಲಿ ಒಂದು ಕಾಸೂ ಇರಲಿಲ್ಲ. ಈತನು ತನ್ನ ಸ್ಥಿತಿಯನ್ನು ಕಂಡುಕೊಂಡ ಕೂಡಲೆ, ಮಿತವ್ಯಯವನ್ನರಿಯದ ತನ್ನ ಅವಿವೇಕವನ್ನು ಪರಿಪರಿಯಾಗಿ ನಿಂದಿಸಿದನು. ಆತನು ತನ್ನನ್ನು ನಿಂದಿಸಿಕೊಳ್ಳುತ್ತಿದ್ದ ಹಾಗೆಯೇ ವ್ಯಸನವು ತಲೆ ಮಿರಿತು; ಬರಬರುತ್ತೆ ಆ ವ್ಯಸನವು ಕೋಪದ ರೂಪವನ್ನು ತಾಳಿತು. ಕೋಪದ ತಾಪದಿಂದ ಭಿಲ್ಲನು ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ ಕ್ಷೀಣ ಸ್ವರದಿಂದ ಆರ್ತನಾದ ಮಾಡತೊಡಗಿದನು. ಅಯ್ಯೋ ಪಾಪ! ಹಸಿವೆಯಿಂದ ಎಂತಹವನಿಗಾದರೂ ಇಂತಹ ಸಂಕಟವುಂಟಾಗುವುದು ಸಹಜವಾಗಿಯೇ ಇರುವುದು. ಹೊಟ್ಟೆಯೆಂಬುದು ಆರಿಗೂ ತಪ್ಪಿದುದಲ್ಲ. ಧಾರ್ಮಿಕನಿಗೂ ಹೊಟ್ಟೆಯುಂಟು, ಅಧರ್ಮಿಕನಿಗೂ ಹೊಟ್ಟೆಯುಂಟು; ದಿವಾನನೂ ಹೊಟ್ಟೆಗಾಗಿ ಕೆಲಸಮಾಡುವನು, ಬಂದಿವಾನನೂ ಹೊಟ್ಟೆಗಾಗಿ ಕೆಲಸಮಾಡುವನು. ಕಳ್ಳನಾದರೇನು, ಸುಳ್ಳನಾದರೇನು, ಆರಾದರೇನು, ಎಲ್ಲರೂ ಹೊಟ್ಟೆಗೆ ಹಾಕಿಯೇ ಪ್ರಾಣವನ್ನು ಕಾಪಿಟ್ಟುಕೊಳ್ಳಬೇಕು. ಇದಕ್ಕೆ ಅಡ್ಡಿಯನ್ನೊಡ್ಡುವುದಾದರೆ ಆರಿಗೆ ತಾನೇ ಕೋಪ ಬಾರದು?

ಮಾನವನ ಸ್ವಭಾವಕ್ಕೆ ತಕ್ಕ ಹಾಗೆ ನಮ್ಮ ಕಳ್ಳನಿಗೂ ಕೋಪಬಂದಿತು. ಆದರೆ ತಾನೇ ಏನು? ಕೋಪವು ಫಲೋನ್ಮುಖವಾಗುವುದಕ್ಕೆ ಅದು ಅಕಾಲವಾಗಿದ್ದಿತು. ಆದುದರಿಂದ ಭಿಲ್ಲನು ತನ್ನೊಳಗೆ ತಾನೇ "ಅಂಗಡಿಯವರೆಲ್ಲರೂ ತಮ್ಮ ತಮ್ಮ ಅಂಗಡಿಗಳನ್ನು ಮುಚ್ಚಿಕೊಂಡು ಮನೆಗಳಿಗೆ ಹೊರಟುಹೋಗುವವರೆಗೂ ಮರೆಯಾಗಿರುವ ತಾಣದಲ್ಲಿ ಅಡಗಿಕೊಂಡಿದ್ದು, ಈ ಬೀದಿಯು ನಿರ್ಮಾನುಷವಾದ ಮೇಲೆ, ಆವುದಾದರೊಂದು ಫಲಾಹಾರದ ಅಂಗಡಿಗೆ ನುಗ್ಗಿ ಮನದಣಿಯೆ ತಿಂದು ತೇಗಿ ಇಂದಿನ ದಿನದ ಹಸಿವನ್ನು ಹೋಗಲಾಡಿಸಿಕೊಳ್ಳಬೇಕು. ಇಷ್ಟು ಕಾಲದ ವರೆಗೂ ನಾನು ಚೋರಚೂಡಾಮಣಿಯೆಂದು ಪ್ರಸಿದ್ಧ

ನಾದ ಕಳ್ಳನಾಗಿ ಕೋಟಿ ಕೋಟಿ ದ್ರವ್ಯವನ್ನು ಸಂಪಾದಿಸಿ ಇಂದು ಹೊಟ್ಟೆಗಿಲ್ಲ ದೆಯೇ ಸಾಯುವುದೆಂಬುದು ಹೇಡಿಯ ಮಾತಾಗಿರುವುದು. ಒಂದು ಹೊತ್ತಿನ ಕೂಳನ್ನು ಕೂಡ ಹುಟ್ಟಿಸಿಕೊಳ್ಳದ ಮೇಲೆ, ನಾನು ಬದುಕಿ ಹೆಸರು ಹೇಳಿದಂತೆ ಯೇ ಸರಿ. ನನಗೆ ದುಡ್ಡಿನ ಚಿಂತೆ ಬರಬಹುದೇ? ಕಳ್ಳನಿಗೆ ದುಡ್ಡೇತಕೆ? ಕಂಡಕಂಡವರ ಸ್ವತ್ತೆಲ್ಲವೂ ಕಳ್ಳನದೇ ಆಗಿರುವಲ್ಲಿ, ಕಳ್ಳನಿಗೆ—ಅದರಲ್ಲಿಯೂ ನನಗೆ, ಅವುದಕ್ಕೇನು ಕೊಂತೆಯಿರುವುದು? ಮನುಷ್ಯನಿಗೆ ಹೊಟ್ಟೆಯ ಬಾಧೆ ಯಿರುವ ವರೆಗೂ ವೈರಾಗ್ಯವನ್ನು ತಾಳಿ ಮಾಡುವುದೇನು! ನಾನು ಬಾಲ್ಯದಿಂ ದಲೂ ಕಳ್ಳತನವನ್ನು ಅವಲಂಬಿಸಿ ಜೀವಿಸುತ್ತಿರುವೆನು. ಈಗ ನಾನು ಅದನ್ನು ತ್ಯಾಗಮಾಡಿ ಬೈರಾಗಿಯಾಗುವುದಾದರೆ, ನನಗೆ ಒಪ್ಪೊತ್ತಿನ ಕೂಳೂ ಬೆಲ್ಲವಾಗಿ ಪರಿಣಮಿಸುವುದಕ್ಕೂ ಸಾಕು. ಮುಂದಣ ಪರಿಣಾಮವನ್ನು ಪರಿಕಿಸದೆಯೇ ತಿನ್ನುವ ಅನ್ನಕ್ಕೂ ಮಣ್ಣನ್ನು ತೂರಿಕೊಂಡು ಸಂಕಟಪಡಬೇಕೆಂದೆಣಿಸಿದ ನನ್ನ ಅಲ್ಪ ಬುದ್ಧಿಯನ್ನು ಸುಟ್ಟರು. ಇನ್ನು ಮೇಲೆ ನಾನು ದುರ್ದಾಂತನಾಗಿ ಸರ್ವಲೋಕ ಭಯಂಕರವಾದ ಕೆಲಸಗಳನ್ನೆಸಗಿ ಆರಿಗೂ ಸಲ್ಲದ "ಲೋಕೈಕ ವೀರ" ಎಂಬ ಬಿರುದನ್ನು ಪಡೆದುಕೊಂಡು ಜಗದಂತದ ವರೆಗೂ ನನ್ನ ಕೀರ್ತಿಯನ್ನು ಶಾಶ್ವತಗೊಳಿಸುವೆನು. ಇನ್ನಾದರೂ ಲೋಕವು ನನ್ನ ಅಸಮ ಸಾಹಸವೆಂಥದೆಂಬುದನ್ನು ಅರಿತುಕೊಳ್ಳಲಿ. ಸರಕಾರದವರು ಅರಿಂದಮನಲ್ಲಿ ಭರವಸೆಯನ್ನಿಟ್ಟಿರುವರು. ಇಂತಹ ಮೂವತ್ತು ಮೂರು ಕೋಟಿ ಅರಿಂದಮರು ಹುಟ್ಟಿಬಂದರೂ ಎಲ್ಲರಿಗೂ ಚೆಳ್ಳೆಯ ಹಣ್ಣನ್ನು ತಿನ್ನಿಸಿ ಜಗತ್ತಿಗೇ ಒಂದು ಅದ್ಭುತವಾದ ಪಾಠವನ್ನು ಕಲಿಸಿಬಿಡುವೆನು. ಬಂದುದೆಲ್ಲಾ ಬರಲಿ," ಎಂದು ಆಲೋಚಿಸಿ ಪ್ರತಿಜ್ಞೆಮಾಡಿಕೊಂಡು ಜನರ ಕಣ್ಣಿಗೆ ಬೀಳದ ಹಾಗೆ ದೂರ ದೂರವಾಗಿ ಸರಿದುಹೋದನು ಕೊಂಚದೂರ ಸರಿದು ಹೋಗುವುದರೊಳಗಾಗಿ ಒಂದು ದೊಡ್ಡ ಮಹಡಿಯ ಮನೆಯು ಕಾಣಿಸಿತು. ಅದು ಆ ಗ್ರಾಮಕ್ಕೆ ದೂರವಾಗಿಯೇ ಇದ್ದುದರಿಂದ, ಅದರ ಅಕ್ಕ ಪಕ್ಕಗಳಲ್ಲಿ ಆವ ಮನೆಯೂ ಇರ ಲಿಲ್ಲ. ಅಲ್ಲದೆಯೂ, ಅಲ್ಲಿ ವಿಶೇಷವಾಗಿ ಜನರ ಸಂಚಾರವೂ ಇದ್ದ ಹಾಗೆ ಕಂಡು ಬರಲಿಲ್ಲ.

ತಾಂತಿಯಾ ಭಿಲ್ಲನು ದೂರದಲ್ಲಿ ನಿಂತುಕೊಂಡು ಆ ಮನೆಯನ್ನೇ ನೋಡು ತ್ತಿದ್ದನು. ಮನೆಯ ನಾಲ್ಕು ದಿಕ್ಕುಗಳಲ್ಲಿಯೂ ಎತ್ತರವಾದ ಪ್ರಾಚೀರದ ಗೋಡೆಗಳು ನಿರ್ಮಿಸಲ್ಪಟ್ಟಿದ್ದುವು. ಆ ಗೋಡೆಗಳ ಮೇಲಣ ಭಾಗದಲ್ಲಿ ಆರೂ ಹತ್ತಿ ಬಾರದ ಹಾಗೂ ಹೋಗದ ಹಾಗೂ ಮುಳ್ಳಿನ ಸಲಾಕೆಗಳನ್ನು ನಟ್ಟಿದ್ದರು. ಇಂತಹ ದಿಗ್ಬಂಧನದಿಂದ ಸುರಕ್ಷಿತವಾದ ಮನೆಯು ಆದಾರದಿರಬಹುದೆಂದು ಕಳ್ಳನು ಆ ಮನೆಯ ಹೆಬ್ಬಾಗಲಿಗೆ ಬಂದು ನೋಡಿದನು. ಬಾಗಿಲ ಮುಂಗಡೆ

ಯಲ್ಲಿ ತೂಗು ಹಾಕಲ್ಪಟ್ಟಿದ್ದ ಒಂದು ವಿಶಾಲವಾದ ಮರದ ಹಲಗೆಯ ಮೇಲೆ ಹೀಗೆ ಬರೆದಿದ್ದಿತು.

**ಸೌಭಾಗ್ಯ ಮಂದಿರ**

[ಹುಚ್ಚರ ವೈದ್ಯಶಾಲಾ]

ವೈದ್ಯವಿದ್ಯಾ ವಿಶಾರದ—ಮನೋಜಮೋಹನ ವಾಗೀಶ

ಶಾಲಾಧ್ಯಕ್ಷ

ಶಾಂತಿಯಾ ಭಿಲ್ಲನು ಮನೆಯನ್ನು ನೋಡಿದ ಕೂಡಲೆ ದೊಡ್ಡ ಮನುಷ್ಯರಾರೋ ಇಲ್ಲಿ ವಾಸವಾಗಿರಬಹುದೆಂದು ತಿಳಿದು ಅದರಲ್ಲಿ ಇಳಿ ಬೀಳುವುದಕ್ಕೆ ಸಂಕಲ್ಪಮಾಡಿದ್ದನು ; ಆದರೆ ಹುಚ್ಚರ ವೈದ್ಯಶಾಲೆಯೆಂದು ತಿಳಿದು ಬಂದ ಕೂಡಲೆ ಅವನ ಮನಸ್ಸು ಹಿಂಜರಿಯಿತು. ಈ ಸ್ಥಲದಲ್ಲಿ ಆಹಾರ ಸಾಮಗ್ರಿ ದೊರೆವುದು ದುರ್ಘಟವೆಂದು ತಿಳಿದು ಬಂದುದೇ ಇದಕ್ಕೆ ಕಾರಣವು ; ಅಲ್ಲದೆಯೂ ಹುಚ್ಚರ ಸಹವಾಸವು ಅಪಾಯಕ್ಕೆ ತೌರುಮನೆಯೇ ಹೊರತು ಮತ್ತೆ ಬೇರೆಯಲ್ಲವೆಂಬುದೂ ಆ ಕಾರಣಕ್ಕೆ ಸಹಕಾರಿಯೆಂದೇ ತೋರಿಬಂದಿತು. ಅದು ಕಾರಣ ಭಿಲ್ಲನು ಅಲ್ಲಿ ನಿಲ್ಲದೆ ಅನ್ಯಮನಸ್ಕನಾಗಿ ಮುಂದೆ ಮುಂದೆ ತರಳಿದನು.

ಕಳ್ಳನು ಮುಂದಕ್ಕೆ ತೆರಳುತ್ತಿರುವಷ್ಟರಲ್ಲಿ ವೈದ್ಯಶಾಲೆಯ ಪಕ್ಕದ ಗೋಡೆಯ ಕೆಳಗೆ ಧುಘುಪ್ ಎಂದು ಶಬ್ದವಾಯಿತು. ಆರೋ ಗೋಡೆಯಿಂದ ದುಮ್ಮಿಕ್ಕಿದರೋ, ಇಲ್ಲವೇ ಕಾಲು ಜಾರಿ ಕೆಳಗೆ ಬಿದ್ದರೋ, ಇಲ್ಲವೇ ಗುಂಡುರುಳಿತೋ, ಇಲ್ಲವೇ ಗೋಡ ಸಡಲಿ ಬಿದ್ದಿತೋ, ಅಂತೂ ಏನೋ ಆಗಿರಬೇಕೆಂದು ಭಿಲ್ಲನು ತಿಳಿದುಕೊಂಡು ಅಪ್ರತಿಭನಾಗಿ ಅಲ್ಲಯೇ ನಿಂತುಕೊಂಡನು ಆತನು ನಿಂತು ನೋಡಲಾಗ ಆರೋ ಗೋಡೆಯಿಂದ ದುಮ್ಮಿಕ್ಕಿ ಬದುಕಿದೆಯಾ ಬಡ ಜೀವವೇ ಎಂದು ಒಂದೇ ಉಸಿರಿನಿಂದ ಕಾಲಿಗೆ ಬುದ್ಧಿ ಹೇಳಿದನು. ಆ ದಿಕ್ಕಿನಲ್ಲಿ ದೀಪದ ಬೆಳಕು ಇಲ್ಲದುದರಿಂದ ಸರಿಯಾದ ದಾರಿಗಾಣದೆ ಎಡವುತ್ತಲೂ ಮುಗ್ಗರಿಸುತ್ತಲೂ ಆ ವ್ಯಕ್ತಿ ಯಿಂದೆ ನೋಡದೆಯೇ ಮುಂದಕ್ಕೆ ಓಡಲಾರಂಭಿಸಿತು. ಭಿಲ್ಲನು ಇದನ್ನು ನೋಡಿ ಈ ಸಂದರ್ಭದಲ್ಲಿ ತಾನು ಏನ ಮಾಡಬೇಕೆಂಬುದನ್ನು ಆಲೋಚಿಸಿಕೊಂಡವನಾಗಿ ಓಡಿಹೋಗುತ್ತಿರುವವನನ್ನು ಹಿಡಿದು ನಿಲ್ಲಿಸುವುದೇ ಸರಿಯೆಂದು ತಾನೂ ಓಡಿ ಹೋಗಿ ಆ ಅಪರಿಚಿತ ವ್ಯಕ್ತಿಯನ್ನು ಅಡ್ಡಗಿಸಿದನು. ಇಷ್ಟು ಹೊತ್ತಿಗೆ ಸರಿಯಾಗಿ ವೈದ್ಯಶಾಲೆಯ ಹೆಬ್ಬಾಗಿಲನ್ನು ತೆರೆದುಕೊಂಡು ನಾಲ್ಕಾರು ಜನ ಕಟ್ಟಾಳುಗಳು ಓಡಿಹೋದವನನ್ನು ಹಿಡಿದು ತರುವುದಕ್ಕಾಗಿ ಬೆನ್ನಟ್ಟಿ ಓಡಿ ಬಂದರು.

ಕಳ್ಳನು ಅಡ್ಡಗಿಸಿದುದರಿಂದ, ಓಡಿಹೋಗುತ್ತಿದ್ದವನು ತಟ್ಟನೆ ನಿಂತನು. ಇಷ್ಟರಲ್ಲಿಯೇ ಉಳಿದವರೆಲ್ಲರೂ ಓಡಿ ಬಂದು ಆ ಪಲಾಯಿತನನ್ನು ಸುತ್ತುಗಟ್ಟಿ ನಿಂತರು. ಬಳಿಕ ಅವರಲ್ಲೊಬ್ಬನು ಪಲಾಯಿತನ ಕಪೋಲದಲ್ಲಿ ಫಳೀರೆಂದು ಬಲವತ್ತರವಾದ ಏಟನ್ನು ಕೊಟ್ಟು—ಎಲೋ ಜಿಪ್ಪುತಕ್ಕಡಿ! ಓಡಿ ಹೋಗುವುದಕ್ಕೆ ಯತ್ನಮಾಡಿದೆಯಾ? ಜೋಕೆ, ನಿನ್ನನ್ನು ಇಲ್ಲಿಯೇ ಭೂಗತ ಮಾಡಿಬಿಡವೆನು. ನನ್ನನ್ನು ಆರೆಂದು ತಿಳಿದುಕೊಂಡಿರುವೆ? ನಡೆ, ಹೊರಡು ಮನೆಯ ಕಡೆಗೆ, ಉಸಿರೆತ್ತಿದರೆ ನಾಲಗೆಯನ್ನೇ ಸೀಳಿಬಿಡವೆನು, ಎಂದು ಹೇಳುತ್ತಾ ಆಗ್ರಹದಿಂದ ಅವನ ಬೆನ್ನಮೇಲೆ ದುಬದುಬನೆ ಗುದ್ದಿದನು.

ಇದಾಗುತ್ತಿರುವಷ್ಟರಲ್ಲಿ ಮತ್ತೆ ಕೆಲವು ಜನರು ಬಂದು ಪಲಾಯಿತನನ್ನು ಕಾಲುಗಳಿಂದ ಒದೆದೊದೆದು ವೈದ್ಯಶಾಲೆಗೆ ಕರೆದುಕೊಂಡು ಹೋದರು. ಹುಚ್ಚನ ವಿಷಯದಲ್ಲಿ ಕಟುಕರಾದ ಈ ಸೇವಕರು ತೋರಿದ ಅತ್ಯಾಚಾರವನ್ನು ನೋಡಿ ಶಾಂತಿಯಾ ಭಿಲ್ಲಸಿಗೂ ಹೃದಯದಲ್ಲಿ ದಯಾ ಸಂಚಾರವಾಯಿತು. ತಾನು ಪಲಾಯಿತನಾದ ಹುಚ್ಚನನ್ನು ಹಿಡಿದು ನಿಲ್ಲಿಸಿದುದೇ ಮಹಾಪರಾಧವಾಯಿತೆಂದು ಬಹಳವಾಗಿ ಪಶ್ಚಾತ್ತಾಪಪಟ್ಟುಕೊಂಡನು.

ಹುಚ್ಚನನ್ನು ಅಟ್ಟಿಸಿಕೊಂಡು ಬಂದಿದ್ದವರಲ್ಲಿ ಒಬ್ಬನ ಬಳಿ ಒಂದು ದೀವಿಗೆ ಇದ್ದಿತು. ಅದರ ಬೆಳಕಿನಲ್ಲಿ ಹುಚ್ಚನ ಮುಖವು ಚೆನ್ನಾಗಿಯೂ ಕಾಣಿಸಿತು. ಭಿಲ್ಲನು ಹುಚ್ಚನನ್ನು ನೋಡಿ—"ಇವನು ಇನ್ನೂ ಯುವಕನಾಗಿರುವನು, ಇವನನ್ನು ನೋಡಿದರೆ ಹುಚ್ಚು ಹಿಡಿದವನಂತೆ ಕಾಣುವುದಿಲ್ಲ. ದೇಹದ ಬಣ್ಣವು ಕೆಟ್ಟಿರುವುದು. ಕಣ್ಣುಗಳು ಗುಳಿಬಿದ್ದು ಕಾಂತಿ ಹೀನವಾಗಿರುವುದರಿಂದ, ದಾರುಣವಾದ ವೇದನೆಯೂ ನಿರಾಶೆಯೂ ಈತನ ಹೃದಯದಲ್ಲಿ ತುಂಬಿರುವಂತೆ ಕಾಣುವುದು. ಬಲವತ್ತರವಾದ ನಿರ್ಬಂಧದಿಂದ ಬದುಕಬೇಕೆಂಬ ಆಸೆಯು ಕೂಡ ಈತನಲ್ಲಿದ್ದಂತೆ ಕಂಡು ಬರುತ್ತಿಲ್ಲ. ಇದೆಲ್ಲವನ್ನೂ ನೋಡಿದರೆ, ಈತನೆಂದಿಗೂ ಹುಚ್ಚನಲ್ಲ. ಹುಚ್ಚರ ಆಕಾರ ಪ್ರಕಾರಗಳೇ ಬೇರೆ; ನಡೆನುಡಿಗಳೇ ಬೇರೆ. ಇದರಲ್ಲಿ ಅವುದೋ ವಿಚಿತ್ರವಾದ ರಹಸ್ಯವಿರಬೇಕು, ಎಂದು ತನ್ನೊಳಗೆ ತಾನೇ ಆಲೋಚಿಸಿಕೊಂಡನು.

ವೈದ್ಯಶಾಲೆಯ ಕಡೆಗೆ ಒಯ್ಯಲ್ಪಡುತ್ತಿದ್ದ ಹುಚ್ಚನು ಮತ್ತೆ ತಪ್ಪಿಸಿಕೊಂಡು ಓಡಿಹೋಗುವುದಕ್ಕೆ ಪ್ರಯತ್ನ ಪಟ್ಟನು. ಸೇವಕನೊಬ್ಬೊಬ್ಬನೂ ಮತ್ತೆ ಮತ್ತೆ ಯುವಕನನ್ನು ಒದೆದೊದೆದು ಕೆಡಹಿದನು. ಯಮದೂತರ ಮುಂದೆ ಬಡಪಾಯಿಯು ಏನ ಮಾಡಬಲ್ಲನು? ಹುಚ್ಚನು ಧಾರಾಕಾರವಾಗಿ ಕಣ್ಣೀರ ಸುರಿಸುತ್ತಾ ಎಲ್ಲರನ್ನೂ ನೋಡಿದ ಬಳಿಕ ಅಪರಿಚಿತನಾದ ನನ್ನನ್ನು ಕುರಿತು—

ಮಹಾಶಯ! ನಾನು ತಮಗೆ ಆವ ಕೆಡುಕನ್ನೂ ಮಾಡಲಿಲ್ಲವಷ್ಟೇ? ಹೀಗಿರುವಲ್ಲಿ ತಾವು ನನ್ನಲ್ಲಿ ಈ ರೀತಿಯಾಗಿ ಶತ್ರುತ್ವವನ್ನು ತೋರಿಸಬಹುದೇ? ನನ್ನನ್ನು ಹುಚ್ಚನೆಂದು ಭಾವಿಸಿದಿರಾ, ಹೇಗೆ? ನನ್ನ ಮುಖ ನೋಡಿದರೆ ನಿಮಗೂ ಗೊತ್ತಾಗುವುದಿಲ್ಲವೇ? ಲೋಕಾನುಭವವಿರತಕ್ಕ ಮುದುಕರಾದ ನಿಮ್ಮಂಥವರಿಗೂ ಇಂತಹ ಭ್ರಾಂತಿಯಿರುವುದಾದರೆ ಇನ್ನು ಪ್ರಪಂಚದಲ್ಲಿ ಆರಿಗೆ ವಿವೇಕವಿರುವುದೆಂದು ನಾನು ತಿಳಿದುಕೊಳ್ಳಬೇಕು.

ಕೇಳೋಣವಾಗಲಿ; ನನ್ನ ಹೆಸರು ಶ್ರೀಕುಮಾರ. ಈ ಸ್ವಾರ್ಥಪರಾಯಣರಾದ ದುರ್ಬುದ್ಧಿಗಳು ನನ್ನನ್ನು ಹುಚ್ಚನನ್ನಾಗಿ ಮಾಡಿಕೊಂಡು ಹುಚ್ಚರ ವೈದ್ಯಶಾಲೆಯಲ್ಲಿ ನಿರ್ಬಂಧ ಪಡಿಸಿಟ್ಟಿರುವರು. ನಾನು ಸಾಯುವ ವರೆಗೂ ಈ ನ್ಯುತ್ಯ್ರುದೇವತೆಗಳಿಂದ ಪಾರಾಗುವ ಸಂಭವವೇ ಕಂಡು ಬರುತ್ತಿಲ್ಲ, ಎಂದು ಹೇಳುತ್ತಿರುವಷ್ಟರಲ್ಲಿಯೇ ಒಬ್ಬ ದೂತನು ಅವನ ಬಾಯನ್ನು ತನ್ನ ಕೈಗಳಿಂದ ಬಲವಾಗಿ ಮುಚ್ಚಿದನು. ಬಳಿಕ ಹುಚ್ಚನು ಮತ್ತಾವ ಮಾತನ್ನೂ ಆಡಲಾರದವನಾಗಲು, ಉಳಿದ ದೂತರು ಹುಚ್ಚನನ್ನು ದರದರನೆ ಎಳೆದುಕೊಂಡು ಶಾಲೆಯ ಕಡೆಗೆ ತೆರಳಿದರು. ಸೇವಕರ ದಳಪತಿಯು ರೋಷಾವೇಶದಿಂದ ಹುಚ್ಚನನ್ನು ಕುರಿತು—ಹುಚ್ಚು ಮೋರೆಯವನೇ! ನೀನು ಹುಚ್ಚನಲ್ಲ, ನಿನ್ನನ್ನು ಹೊಟ್ಟೆಯ ಕಿಚ್ಚಿನಿಂದ ಹುಚ್ಚನನ್ನಾಗಿ ಮಾಡಿರುವರಲ್ಲವೇ? ಹುಚ್ಚರೆಲ್ಲರೂ ಹೀಗಿಯೇ ಬಗುಳುವುದುಂಟು. ನಿನ್ನನ್ನು ಓಡಿಹೋಗುವುದಕ್ಕೆ ಬಿಟ್ಟವರನ್ನು ನಾನು ನಾಳೆಯೇ ನೋಡಿಕೊಳ್ಳುವೆನು. ಸೇವಕರು ಕೊಬ್ಬಿದಂತಿದೆ. ನೀನೇನಾದರೂ ಹೆಚ್ಚಿನ ಗಲಭೆಗೆ ಅವಕಾಶಕೊಡುವುದಾದರೆ, ನಿನ್ನನ್ನು ಈಗಳೇ ನೆಲಮಾಳಿಗೆಯ ಕತ್ತಲೆಯ ಕೋಣೆಯೊಳಗೆ ತಳ್ಳಿಸಿ ಬಿಡುವೆನು. ಮುಂದೆ ನೀನು ಹೇಗೆ ತಪ್ಪಿಸಿಕೊಂಡು ಹೋಗುವೆಯೋ ನಾನು ನೋಡುವೆನು, ಎಂದು ದಾರಿಯುದ್ದಕ್ಕೂ ಹೆದರಿಸುತ್ತಾ ಬಂದನು.

ಶಾಂತಿಯಾ ಭಿಲ್ಲನು ಇದೆಲ್ಲವನ್ನೂ ಕೇಳಿದ ಕೂಡಲೆ, ತನ್ನ ಮನಸ್ಸಿನಲ್ಲಿ ಈ ರೀತಿಯಾಗಿ ಆಲೋಚಿಸಿದನು:—"ಆವನೋ ಒಬ್ಬ ಹುಚ್ಚನು ಪಲಾಯನ ಮಾಡಿದರೆ, ಅವನನ್ನು ಹಿಡಿಯುವುದಕ್ಕಾಗಿ ಇಷ್ಟೊಂದು ಜನ ಕಟ್ಟಾಳುಗಳು ಹಿಂದಟ್ಟಿಸಿಕೊಂಡು ಬರುವುದನ್ನು ನಾನೆಲ್ಲಿಯೂ ನೋಡಿಲ್ಲ. ಹುಚ್ಚನು ಮಾತನಾಡುತ್ತಿರುವಾಗ, ಅವನ ಬಾಯನ್ನು ತಟ್ಟನೆ ಮುಚ್ಚಬೇಕೇಕೆ? ಹುಚ್ಚರು ಬಾಯಿಗೆ ಬಂದ ಹಾಗೆ ಮಾತನಾಡಿಕೊಳ್ಳಲಿ. ಇವರು ಇದನ್ನೂ ಸಹಿಸದೇ ಇರಲು ಕಾರಣವೇನು? ಹುಚ್ಚನು ನಿಜವಾಗಿಯೂ ಹುಚ್ಚನಿರಬಹುದೇ? ಈತನು ಆಡಿದ ಮಾತುಗಳು ನಂಬುಗೆಗೆ ತಕ್ಕವುಗಳೇ? ಈತನ ಹೆಸರು ಶ್ರೀಕುಮಾರನೆಂದು

ಗೊತ್ತಾಯಿತು. ಶ್ರೀಕುಮಾರನಾರು? ಈತನಾರೋ ಧನಪತಿಯೋ ಆಗಿರಬೇಕು. ದರಿದ್ರರಾದ ಹುಚ್ಚರನ್ನು ಕೇಳುವವರೇ ಗತಿಯಿಲ್ಲ. ಈತನನ್ನು ಇಷ್ಟು ನಿರ್ಬಂಧ ಪಡಿಸಿರುವುದು ನೋಡಿದರೆ, ಇದರಲ್ಲಿ ವಿಚಿತ್ರವಾದ ರಹಸ್ಯವು ಅಡಗಿರಲೇ ಬೇಕು."

ಇದರ ತತ್ತ್ವಾನುಸಂಧಾನದಲ್ಲಿ ತಾಂತಿಯಾ ಭಿಲ್ಲನಿಗೆ ಆಸೆಯುಂಟಾಯಿತು. ಆದರೆ, ಬಲವತ್ತರವಾದ ಚಳಿಯೂ, ಹಸಿವು ಬಾಯಾರಿಕೆಗಳೂ ಇವನನ್ನು ಬೇರೊಂದು ಕಡೆಗೆ ಸೆಳೆಯಲಾರಂಭಿಸಿದವು. ಅದುಕಾರಣ, ಕಳ್ಳನು ಸೇವಕ ರೊಡನೆ ಆವ ಮಾತನ್ನೂ ಆಡದೆ ತನ್ನ ದಾರಿಹಿಡಿದು ತೆರಳಿದನು. ಈತನು ಹತ್ತೆಂಟು ಮಾರು ದೂರ ಹೋಗುವಷ್ಟರೊಳಗಾಗಿ ಹಿಂದಣಿಂದ ಆರೋ ಬಂದು ಇವನ ಹೆಗಲ ಮೇಲೆ ಕೈಯಿಟ್ಟಂತಾಯಿತು. ' ಕಳ್ಳನು ವಿದ್ಯುದ್ವೇಗದಿಂದ ಹಿಂದಿರುಗಿ ನೋಡಲಾಗಿ, ಒಬ್ಬ ಮನುಷ್ಯನು ಒಂದು ಕೈದೀವಿಗೆಯನ್ನು ಹಿಡಿದು ಕೊಂಡು ನಿಂತಿದ್ದನು. ಆ ದೀಪದ ಬೆಳಕಿನಿಂದ ನಿಂತಿದ್ದ ಮನುಷ್ಯನು ವೈದ್ಯ ಶಾಲೆಯ ಸೇವಕರ ದಳಪತಿಯೆಂದು ಗೊತ್ತಾಯಿತು. ಈತನೇ ಹಿಂದೆ ರೇಗಿರೇಗಿ ಬಾಯಿಗೆ ಬಂದಹಾಗೆ ಮಾತನಾಡುತ್ತಿದ್ದವನು.

ತಾಂತಿಯನು ಈ ರೀತಿಯಾಗಿ ತನ್ನ ಗತಿಯನ್ನು ನಿರೋಧಿಸಿದುದಕ್ಕಾಗಿ ಹುಬ್ಬು ಗಂಟಿಕ್ಕಿ—ಮಹಾಶಯ! ನನ್ನಿಂದ ತಮಗೆ ಏನಾಗಬೇಕು? ಎಂದು ಪ್ರಶ್ನೆ ಮಾಡಿದನು. ಅದಕ್ಕೆ ದಳಪತಿಯು—ಮಹಾಶಯ! ಕೊಂಚ ಹೊತ್ತಿಗೆ ಮೊದಲು ನಡೆದ ವ್ಯಾಪಾರವು ನಿಮಗೆ ಗೊತ್ತೇ ಇರುವುದು. ಇದನ್ನು ನೋಡಿ ದಾಗಿನಿಂದಲೂ ನಿಮಗೆ ಆಶ್ಚರ್ಯವುಂಟಾಗಿರಬಹುದು. ಇಂತಹ ಹುಚ್ಚರನ್ನು ಕಟ್ಟಿಕೊಂಡು ವೈದ್ಯಶಾಲೆಯನ್ನು ನಡೆಯಿಸುವುದು ಎಂತಹ ಗುರುತರವಾದ ಕೆಲಸ ವೆಂಬುದನ್ನು ನೀವು ಪರ್ಯಾಲೋಚಿಸತಕ್ಕುದಿದೆ. ಇತರರಿಗೆ ನಮ್ಮ ಕಷ್ಟನಷ್ಟ ಗಳಾಗಲಿ, ಸುಖದುಃಖಗಳಾಗಲಿ ಒಂದೂ ಗೊತ್ತಾಗುವುದಿಲ್ಲ. ಆದರೂ ಜನರು ಬಾಯಿ ಗೆ ಬಂದಂತೆ ಮಾತನಾಡಿಕೊಳ್ಳುವರು. ತಾವಾರೋ ನನಗೆ ತಿಳಿಯದು. ನಾನೇ ಈ ವೈದ್ಯಶಾಲೆಗೆ ಅಧ್ಯಕ್ಷನಾದ ವೈದ್ಯವಿದ್ಯಾವಿಶಾರದ ಮನೋಜಮೋಹನ ವಾಗೀಶನೆಂಬುವನು. ತಮ್ಮನ್ನು ನೋಡಿದರೆ ಬಹುದೂರಮಾರ್ಗದ ಆಯಾಸ ದಿಂದ ಬಳಲಿದ ಪರದೇಶದವರಾಗಿ ಕಾಣುವಿರಿ. ತಮ್ಮ ಕಾರ್ಯಕ್ಕೆ ಅಡ್ಡಿಯಿಲ್ಲ ದಿರುವುದಾದರೆ, ತಾವು ನಮ್ಮ ಮನೆಯಲ್ಲಿ ಕೊಂಚ ಹೊತ್ತು ವಿಶ್ರಮಿಸಿಕೊಂಡು ಮುಂದಕ್ಕೆ ತೆರಳಬಹ ದು. ತಾವು ಕೃಪೆಯಿಟ್ಟು ನಮ್ಮ ಆತಿಥ್ಯವನ್ನು ಸ್ವೀಕರಿಸಿ ಮನಸ್ಸಂತೋಷ ಪಡಿಸಬೇಕಾಗಿ ಬೇಡುವೆನು, ಎಂದು ಬೆಸಗೊಂಡನು.

ವೇಷಧಾರಿಯಾದ ತಾಂತಿಯಾ ಭಿಲ್ಲನು ಈ ಮಾತನ್ನು ಕೇಳಿ ಪರಮಾನಂದ ಭರಿತನಾಗಿ ತನ್ನ ಅನುಕೂಲ ದೈವವನ್ನು ಬಗೆಬಗೆಯಾಗಿ ಕೊಂಡಾಡುತ್ತಾ ವೈದ್ಯ

ನನ್ನು ಕುರಿತು—ಮಹಾಶಯ! ತಾವೇ ವೈದ್ಯವಿದ್ಯಾವಿಶಾರದ ಮನೋಜಮೋಹನ ವಾಗೀಶರು! ಜಗತ್ಪ್ರಸಿದ್ಧರಾದ ತಮ್ಮ ಹೆಸರನ್ನು ಆರು ತಾನೇ ಕೇಳಿಲ್ಲ. ತಮ್ಮಂಥವರ ಆತಿಥ್ಯವು ನನ್ನಂತಹ ಪಾಮರನಿಗೆ ದೊರೆತುದು ನನ್ನ ಪೂರ್ವ ಪುಣ್ಯೋದಯವೇ ಸರಿ. ಮಹಾತ್ಮರ ಅತಿಥಿಸತ್ಕಾರವು ಎಲ್ಲರ ಪಾಲಿಗೂ ಬಂದುದಲ್ಲ. ಅದನ್ನು ಧಿಕ್ಕರಿಸಿ ಹೋಗವುದು ನಮಗೆ ಶ್ರೇಯಸ್ಕರವೂ ಅಲ್ಲ. ನನ್ನ ಕಾರ್ಯವು ಎಷ್ಟೇ ಗುರುತರವಾಗಿದ್ದರೂ ಅದು ತಮ್ಮ ಪ್ರೀತಿಪುರಸ್ಸರವಾದ ಆತಿಥ್ಯಕ್ಕೆ ಮಿಗಿಲಾದುದಲ್ಲ. ನನ್ನಂತಹ ಅಪರಿಚಿತರಲ್ಲಿ ತಾವು ತೋರುವ ಮಾನ ಮರ್ಯಾದೆಗಳು ತಮ್ಮ ಉದಾರ ಬುದ್ಧಿಯನ್ನೂ ಸದ್ವಂಶವನ್ನೂ ಸೂಚಿಸುವುವು. ಮಹಾಪುರುಷರ ನಡೆವಳಿಯೇ ಹೀಗೆ. ಇದರ ತತ್ತ್ವವನ್ನು ಬಲ್ಲವರೇ ಬಲ್ಲರು. ನಾನು ಅವುದೋ ಕಾರ್ಯವನ್ನು ನಿಮಿತ್ತಮಾಡಿಕೊಂಡು ಪರಸ್ಥಲದಿಂದ ಹೊರಟು ಬಂದಿರುವೆನು. ನನಗಾದರೋ ಈ ಪ್ರಾಂತ್ಯಗಳೆಲ್ಲವೂ ಅಪರಿಚಿತವಾದುವುಗಳು. ತಮ್ಮಂತಹ ಪುಣ್ಯಾತ್ಮರು ಅಲ್ಲಲ್ಲಿ ವಾಸವಾಗಿರವುದರಿಂದ ಪರದೇಶವಾದರೂ ಸ್ವದೇಶವೇ ಎನಿಸುವುದು, ಎಂದು ಚಾತುರ್ಯಪೂರಿತವಾದ ಅಭಿಮತವನ್ನು ತೋರ್ಪಡಿಸಿದನು

ಇದಾದ ಬಳಿಕ ವೈದ್ಯನು ಅಪರಿಚಿತನನ್ನು ಜತೆಯಲ್ಲಿ ಕರೆದುಕೊಂಡು ತಮ್ಮ ಮನೆಗೆ ಹೋದನು. ಅಲ್ಲಿ ಸುಸಜ್ಜಿತವಾದ ಕೋಣೆಯಲ್ಲಿ ಅದೊಂದಾಸನದ ಮೇಲೆ ಅತಿಥಿಯನ್ನು ಕುಳ್ಳಿರಿಸಿ ವೈದ್ಯನು ಮತ್ತೊಂದಾಸನದ ಮೇಲೆ ಕುಳಿತನು. ದೀಪವು ಅತಿ ಪ್ರಕಾಶಮಾನವಾಗಿ ಕೋಣೆಯನ್ನು ಬೆಳಗುತ್ತಿದ್ದುದರಿಂದ, ಅದರ ಬೆಳಕಿನಲ್ಲಿ ಅತಿಥಿಯು ವೈದ್ಯನ ಆಕಾರ ಪ್ರಕಾರಗಳನ್ನು ಚೆನ್ನಾಗಿಯೂ ಪರಿಶೀಲನೆ ಮಾಡ ತೊಡಗಿದನು.

ರಾತ್ರಿ ಭೋಜನದ ವ್ಯವಸ್ಥೆಯಾಗುವ ವರೆಗೂ ವ್ಯರ್ಥವಾಗಿ ಕಾಲವನ್ನು ಕಳೆಯದ ಹಾಗೆ, ನಮ್ಮ ಪ್ರಿಯ ಪಾಠಕ ಮಹಾಶಯರಿಗೆ ವೈದ್ಯನ ಸಾಮಾನ್ಯ ಪರಿಚಯವನ್ನುಂಟುಮಾಡಿಕೊಡುವೆವು.

ದೀರ್ಘಕಾಯನಾದ ವೈದ್ಯನು ತಾಂತಿಯಾ ಭಿಲ್ಲನಂತೆ ನಾತಿಸ್ಥೂಲನೂ ನಾತಿಕೃಶನೂ ಆಗಿದ್ದನು. ಆತನ ವಿಶಾಲವಾದ ಹಣೆಯು ಮುಖದ ಸೌಂದರ್ಯವನ್ನು ಹೆಚ್ಚಿಸುತ್ತಿದ್ದಿತು; ಉನ್ನತವಾದ ಮೂಗಿನ ಇಕ್ಕಡೆಗಳಲ್ಲಿಯೂ ಫಳ ಫಳನೆ ಹೊಳೆಯುತ್ತಿದ್ದ ವಿಶಾಲವಾದ ಕಣ್ಣುಗಳು ಶೋಭಾರಾಶಿಯನ್ನು ಬೀರುತ್ತಿದ್ದುವು. ಗಡ್ಡ ಮೀಸೆಗಳು ಮುಖವನ್ನು ಅಲಂಕರಿಸಿದ್ದುವು, ಆದರೆ ಅವುಗಳು ಮುಖದ ಸೊಬಗನ್ನು ಹೆಚ್ಚಿಸುತ್ತಿದ್ದುವೇ ಹೊರತು ನೋಟಕರಿಗೆ ಭಯವನ್ನುಂಟು ಮಾಡುವಂತಿರಲಿಲ್ಲ.

ವೈದ್ಯನ ಮುಖಮಂಡಲವು ಎಲ್ಲರನ್ನೂ ಆಕರ್ಷಿಸುವಂತಿದ್ದಿತು. ಆತನ ಹಣೆಯಿಂದ ಅಪರಿಮಿತವಾದ ಬುದ್ಧಿಶಕ್ತಿಯೂ, ಕಣ್ಣುಗಳಿಂದ ಸ್ವಕಾರ್ಯಸಾಧನೋಪಾಯದ ವಿವೇಚನಾ ಶಕ್ತಿಯೂ, ತುಟಿಗಳ ಪರಿಪಾಟಿಯಿಂದ ಪ್ರತಿಕ್ಷಣ ವಿಲಕ್ಷಣವಾದ ಚಾತುರ್ಯ ಚಮತ್ಕಾರ ಶಕ್ತಿಯೂ ಇದಿರಾಳನ್ನು ಅಪ್ರತಿಭನನ್ನಾಗಿ ಮಾಡಿಬಿಡುತ್ತಿದ್ದುವು. ಆತನ ಮುಗುಳ್ನಗೆಯೂ ವಾಗ್ಧೋರಣೆಯೂ ಎಂತಹವರನ್ನಾದರೂ ತನ್ನ ಕಡೆಗೆ ಸೆಳೆದುಬಿಡುತ್ತಿದ್ದುವು. ಇಷ್ಟಾದರೂ ನಮ್ಮ ಶಾಂತಿಯಾ ಭಿಲ್ಲನ ಮುಂದೆ ವೈದ್ಯನನ್ನು ನಿಲ್ಲಿಸಿ ಹೋಲಿಸುವುದು ಭಿಲ್ಲನ ಶಕ್ತಿಗೆ ಅದೊಂದು ನ್ಯೂನತೆಯೇ ಎಂದು ಹೇಳಬೇಕಾಗುವುದು.

ಕೊಂಚ ಹೊತ್ತಿನ ಮೇಲೆ ದಾಸಿಯೊಬ್ಬಳು ಬಂದು "ಭೋಜನಕ್ಕೆ ಎಲ್ಲವೂ ಸಿದ್ಧವಾಗಿರುವುದು. ಯಜಮಾನಮ್ಮನವರು ತಮ್ಮ ಆಗಮನವನ್ನೇ ನಿರೀಕ್ಷಿಸುತ್ತಾ ಕುಳಿತಿರುವರು," ಎಂದು ಹೇಳಿ ಹೊರಟುಹೋದಳು

ಗೃಹಪತಿಯೂ ಅತಿಥಿಯೂ ಭೋಜನಕ್ಕೆ ಕುಳಿತರು. ಭೋಜನಕಾಲದಲ್ಲಿ ಗೃಹಪತಿಯು ಅತಿಥಿಯನ್ನು ಸಂಬೋಧಿಸಿ ಆದರದಿಂದ— ಸ್ವಾಮಿಾ! ತಾವು ನನ್ನ ಅಲ್ಪವಾದ ಸೇವೆಯನ್ನು ಕೈಕೊಂಡುದಕ್ಕಾಗಿ ನಾನು ಎಷ್ಟೋ ಕೃತಜ್ಞನಾಗಿರುವೆನು. ತಾವು ದಾರಿ ನಡೆದುನಡೆದು ಆಯಾಸಪಟ್ಟಿರುವುದರಿಂದ ಸಾವಧಾನಚಿತ್ತರಾಗಿ ಭೋಜನ ಮಾಡಬೇಕು. ಆವ ಸಂಕೋಚವೂ ಇಲ್ಲದೆ ತಮಗೆ ಬೇಕಾದುದನ್ನು ಬಡ್ಡಿಸಿಕೊಂಡು ಸಂತೋಷದಿಂದ ಭುಂಜಿಸಬೇಕು, ಎಂದು ವಿಜ್ಞಾಪಿಸಿಕೊಂಡನು. ಅದಕ್ಕೆ ಅತಿಥಿಯು ನಗೆಮೊಗವನ್ನು ತೋರಿ—ಮಹಾಶಯ! ತಮ್ಮ ಆದರವೊಂದರಿಂದಲೇ ನನ್ನ ಮಾರ್ಗಾಯಾಸವೆಲ್ಲವೂ ಮಾಯವಾದುದು. ತಮ್ಮ ಅಸಾಧಾರಣವಾದ ಉಪಚಾರೋಕ್ತಿಯಿಂದಲೇ ನನಗೆ ತೃಪ್ತಿಯಾಯಿತು. ಭೂತತೃಪ್ತಿಯೆಂಬುದು ನಿಮ್ಮಂತಹ ಉದಾರಚರಿತರಿಗೆ ಸಹಜವಾದ ಧರ್ಮವೇ ಆಗಿರುವುದು. ನಿಮ್ಮಂತಹ ಧರ್ಮಾತ್ಮರು ಅತಿ ವಿರಳರಾಗಿರುವುದರಿಂದ ದೇವರು ನಿಮಗೆ ಇತೋಪ್ಯತಿಶಯವಾಗಿ ಮಂಗಳವನ್ನುಂಟುಮಾಡಲಿ, ಎಂದು ಪ್ರತ್ಯುತ್ತರ ನೀಯುತ್ತಲೇ ಆಕಂಠಪೂರ್ತಿಯಾಗಿ ಭೋಜನಮಾಡಿದನು.

ಭೋಜನಾನಂತರದಲ್ಲಿ ಇಬ್ಬರೂ ವಿಹಾರಮಂದಿರದ ಒಂದು ಸುಖಾಸನದ ಮೇಲೆ ಕುಳಿತುಕೊಂಡು ವೀಳಯವನ್ನು ಸೇವಿಸುತ್ತಾ ಬಲು ಹೊತ್ತು ಲೋಕಾಭಿರಾಮದ ಮಾತುಕತೆಗಳನ್ನಾಡಿದರು. ಹೊತ್ತನ್ನು ಕಳೆಯಬೇಕೆಂಬ ಉದ್ದೇಶದಿಂದಲೇ ನಮ್ಮ ಭಿಲ್ಲನು ವೈದ್ಯನೊಡನೆ ಅಪ್ರಕೃತವಾದ ವಿಷಯಗಳನ್ನೆತ್ತಿ ಮಾತನಾಡತೊಡಗಿದನು. ವ್ಯರ್ಥವಾಗಿ ಕಾಲವನ್ನು ಕಳೆವುದು ವೈದ್ಯನಿಗೆ ಇಷ್ಟವಲ್ಲ

ವಾದರೂ ಆವುದೋ ಒಂದು ಸ್ವಾರ್ಥದ ಕಾರಣವನ್ನು ನಿಮಿತ್ತಮಾಡಿಕೊಂಡು ಅತಿಥಿಯೊಡನೆ ಸರಸ ಸಲ್ಲಾಪಗಳಲ್ಲಿ ಮಗ್ನನಾಗಿದ್ದುಬಿಟ್ಟನು.

ಮಾತಿನ ಸಂದರ್ಭದಲ್ಲಿ ವೈದ್ಯನು ಅತಿಥಿಯನ್ನು ಕುರಿತು-- ಮಹಾಶಯ! ತಾವು ಈ "ಸೌಭಾಗ್ಯ ಮಂದಿರ" ವೆಂಬ ಹುಚ್ಚರ ವೈದ್ಯಶಾಲೆಯನ್ನು ಎಂದೂ ನೋಡಿರಲಿಕ್ಕಿಲ್ಲ, ಎಂದನು. ಅದಕ್ಕೆ ಅತಿಥಿಯು ನಗುತ್ತಾ ಪ್ರತ್ಯುತ್ತರವಾಗಿ— ಸ್ವಾಮಿ! ಎಲ್ಲವೂ ನೋಡಿದುದಾಯಿತು. ಇದೊಂದು ಮಟ್ಟಿಗೆ ನೋಡಬೇಕಾಗಿ ಉಳಿದಿರುವುದು. ನನ್ನ ಆಸ್ತಿಪಾಸ್ತಿಗಳೆಲ್ಲವು ಹೋದರೂ, ಬುದ್ಧಿ ಮಟ್ಟಿಗೆ ಇನ್ನೂ ಹೋಗಿಲ್ಲ. ತಮ್ಮ ದೃಷ್ಟಿ ಬೀಳುವುದಾದರೆ, ಇದೊಂದು ದೊಡ್ಡ ವಿಷಯವೂ ಅಲ್ಲ, ಎಂದು ನುಡಿದನು.

ವೈದ್ಯನು ಈ ಮಾತನ್ನು ಕೇಳಿ ಗಟ್ಟಿಯಾಗಿ ನಕ್ಕನು. ಆದರೆ ಅತಿಥಿಯು ಈ ರೀತಿಯಾಗಿ ಮಾತನಾಡಲು ಕಾರಣವೇನಿರಬಹುದೆಂಬುದನ್ನು ಅರಿಯದವನಾಗಿ ಕೊಂಚ ಹೊತ್ತು ಅತಿಥಿಯ ಮುಖವನ್ನೇ ನೋಡಿದನು. ಅದರಿಂದ ಆವ ಭಾವವೂ ಹೊರಪಡಲಿಲ್ಲ. ಬಳಿಕ ವೈದ್ಯನು--ಮಹಾಶಯ! ಹುಚ್ಚರ ವಿಷಯವಾಗಿ ತಮಗೆ ಕಿಂಚಿತ್ತಾದರೂ ಅನುಭವವಿರುವುದಾದರೆ, ಹುಚ್ಚರು ಎಂತಹ ಅದ್ಭುತ ಪ್ರಕೃತಿಯುಳ್ಳವರು ಎಂಬುದು ಗೋಚರಕ್ಕೆ ಬರುವುದು. ಹುಚ್ಚರು ತಾವು ಹುಚ್ಚರೇ ಅಲ್ಲವೆಂದು ತಿಳಿದಿರುವರು. ಆದುದರಿಂದ ಜನರು ತಮ್ಮನ್ನು ನಿರರ್ಥಕವಾಗಿ ನಿರ್ಬಂಧಪಡಿಸುವರೆಂದು ಹುಚ್ಚರು ಆಡಿಕೊಳ್ಳುವರು. ಇಂಥವರನ್ನು ಸ್ವಾಧೀನದಲ್ಲಿಟ್ಟುಕೊಂಡು ತಿದ್ದುವುದು ಅತಿಪ್ರಯಾಸದ ಕೆಲಸವಾಗಿದೆ. ಕೊಂಚ ಹೊತ್ತಿಗೆ ಮುಂಚೆ ಒಬ್ಬ ಹುಚ್ಚನು ನಡೆಯಿಸಿದ ವ್ಯಾಪಾರವನ್ನು ನೀವೇ ಕಣ್ಣಾರೆ ನೋಡಿರುವಿರಿ, ಎಂದ ಮೇಲೆ ಹೆಚ್ಚಾಗಿ ಹೇಳತಕ್ಕದೇನಿರುವುದು? ಎಂದು ನುಡಿದ ಬಳಿಕ ಮತ್ತೆ ಅತಿಥಿಯ ಮುಖವನ್ನು ನೋಡಿದನು. ಆಗಲೂ ಆವ ಭಾವವೂ ಹೊರಬೀಳಲಿಲ್ಲ. ಅತಿಥಿಯು ಆವ ಬಗೆಯಿಂದಲೂ ವೈದ್ಯನಿಗೇನೂ ಕಡಮೆಯಾಗಿರಲಿಲ್ಲ. ಇಂತಹ ಸಾವಿರಾರು ವೈದ್ಯರು ತಾಂತಿಯಾ ಭಿಲ್ಲಿನ ಕೌಂಕುಳಲ್ಲಿ ತೂರಿ ಹೋಗಿರುವರು. ವೈದ್ಯನು ತಾನೇ ಮಹಾ ಬುದ್ಧಿವಂತನೆಂಬು ಏನೇನೋ ಚಮತ್ಕಾರ ಮಾಡುವನು. ಅಯ್ಯೋ ಪಾಪ! ಅತಿಥಿಯ ಸ್ವರೂಪವು ಅವನಿಗೇನು ಗೊತ್ತು? ತಾವೇ ದೊಡ್ಡವರೆಂದು ಹೆಮ್ಮೆ ಪಡುವವರು ಆಗಿಂದಾಗ ಹಳ್ಳಕ್ಕೆ ಬೀಳುತ್ತಲೇ ಇರುವರು. ಇಂತಹವರಿಗೆ ಕೆಟ್ಟ ಮೇಲೆ ಬುದ್ಧಿ ಬರುವುದೇ ಹೊರತು ಮೊದಲು ಬರುವುದಿಲ್ಲ.

ಭಿಲ್ಲನು ವೈದ್ಯನಾಡಿದ ಮಾತಿನ ಭಾವವನ್ನು ಅರಿತುಕೊಂಡವನಾಗಿ— ಮಹಾಶಯ! ಹುಚ್ಚರ ಹುಚ್ಚುತನವನ್ನು ಚೆನ್ನಾಗಿಯೂ ಬಲ್ಲೆನು. ನನ್ನ

ನ್ನುದ್ದೇಶಿಸಿ ಮಾತನಾಡಿದ ನಿಮ್ಮ ಹುಚ್ಚನ ಮಾತನ್ನೂ ಕೇಳಿದೆನು. ಹುಚ್ಚರು ತಮ್ಮನ್ನು ಹುಚ್ಚರಲ್ಲವೆಂದು ತಿಳಿದುಕೊಳ್ಳುವರು. ಅದರಲ್ಲಿಯೂ ಕೊಂಚ ಪ್ರಮಾಣವು ನನಗೆ ಸಿಕ್ಕಿದಂತಾಯಿತು. ಕೆಲವು ಹುಚ್ಚರು ವಿವೇಕದಿಂದ ನಮ್ಮಂತೆಯೇ ಮಾತನಾಡುವರು. ಇದೂ ಸುಳ್ಳಲ್ಲ. ಹುಚ್ಚರ ವೈದ್ಯಶಾಲೆ ಯಲ್ಲಿ ಬಾಹ್ಯಜ್ಞಾನಶೂನ್ಯರಾದ ಉನ್ಮತ್ತ ಪ್ರಲಾಪಿಗಳನ್ನು ನಿರ್ಬಂಧದ ಲ್ಲಿಡುವರೆಂದು ನಾನು ಕೇಳಿರುವೆನು. ಹುಚ್ಚನಲ್ಲದಿದ್ದರೂ ಹುಚ್ಚನನ್ನಾಗಿ ಮಾಡಿ ವೈದ್ಯಶಾಲೆಯಲ್ಲಿ ನಿರ್ಬಂಧ ಪಡಿಸುವುದು ಸಂಭವವೋ ಅಸಂಭವವೋ ಗೊತ್ತಿಲ್ಲ, ಎಂದು ಪ್ರತ್ಯುತ್ತರವನ್ನು ಕೊಟ್ಟನು.

ವೈದ್ಯನು ಅತಿಥಿಯಾಡಿದ ಮಾತನ್ನು ಕೇಳಿ ಮರ್ಮಾಹತನಾಗಿ ಉನ್ಮುಖ ವಾಗುತ್ತಿದ್ದ ಮಾನಸಿಕ ಚಾಂಚಲ್ಯವನ್ನು ಅತಿ ಪ್ರಯಾಸದಿಂದ ಅಡಗಿಸಿ ಕೊಂಡು,—ಮಹಾಶಯ ! ಸಂಭವವೂ ಉಂಟು, ಅಸಂಭವವೂ ಉಂಟು. ಈಗಣ ಸಮಾಜದಲ್ಲಿ ಶಿಕ್ಷಿತರಾದ ದುರ್ಜನರಿಗೇನೂ ಅಭಾವವಿಲ್ಲ. ಇಂತಹವರ ಬಲೆಗೆ ಸಿಲುಕಿ ಒಳ್ಳೆಯವರು ಕೂಡ ವಿಲವಿಲನೆ ಒದೆದಾಡಿ ಹೋಗಿರುವರು. ಇದು ಎಲ್ಲರಿಗೂ ತಿಳಿದ ವಿಷಯವೇ ಆಗಿರುವುದು. ಇದರಿಂದಲೇ ಪರೋಪಕಾರಿ ಗಳಾದ ಅನೇಕಮಂದಿ ಸಾಧು ಸಜ್ಜನರಿಗೂ ಕೆಟ್ಟ ಹೆಸರು ಬಂದು ಹೋಗಿರುವುದು. ಇತರರ ವಿಷಯವನ್ನು ಕುರಿತು ಹೇಳತಕ್ಕದೇನಿರುವುದು ?

ಮಹಾಶಯ ! ಉದಾಹರಣೆಗಾಗಿ ನನ್ನ ವಿಷಯವನ್ನು ನೋಡೋಣವಾಗಲಿ, ನಾನು ನಮ್ಮ ದೇಶಬಾಂಧವರ ಹಿತಾಭಿಲಾಷೆಯಿಂದ ಈ ವೈದ್ಯಶಾಲೆಯನ್ನು ಸ್ಥಾಪಿಸಿದೆನು. ಈ ಸ್ಥಲದಲ್ಲಿ ಬಲುಮಂದಿ ಉನ್ಮತ್ತರು ಚಿಕಿತ್ಸೆಯನ್ನು ಹೊದ್ದುತ್ತಿರುವರು. ಇದರಿಂದ ಸಮಾಜಕ್ಕೆ ಪ್ರಯೋಜನವು ಅಷ್ಟಿಷ್ಟೆಂದು ಹೇಳುವುದಕ್ಕಾಗುವುದಿಲ್ಲ. ಇದಕ್ಕಾಗಿಯೇ ನಾನು ಬಹುಕಾಲದಿಂದಲೂ ಎಷ್ಟು ಸ್ವಾರ್ಥತ್ಯಾಗಮಾಡಿ ಕೆಲಸಮಾಡುತ್ತಿರುವೆನೆಂಬುದನ್ನು ನಾನೇ ಹೊಗಳಿಕೊಳ್ಳ ಬಾರದು. ಆತ್ಮಸ್ತುತಿಯೆಂಬುದೇ ನನಗೆ ಸರಿಬೀಳುವುದಿಲ್ಲ. ಈ ವಿಚಾರ ವದಂತಿರಲಿ.

ಮತ್ತೊಂದು ವಿಷಯವೇನೆಂದರೆ—ಹುಚ್ಚನು ಪಲಾಯನವಾಗುವುದಕ್ಕಿ ದ್ದಾಗ ನೀವಲ್ಲದೆ ಇಲ್ಲಿನವರು ಮತ್ತಾರಾದರೂ ಇದ್ದು, ಹುಚ್ಚನು ಅವರಿದಿರಿನಲ್ಲಿ ಬಾಯಿಗೆ ಬಂದ ಹಾಗೆ ಬಗುಳಿದ್ದಿದ್ದರೆ, ಇಷ್ಟು ಹೊತ್ತಿನೊಳಗಾಗಿ ಊರು ಹೊಲ ಗೇರಿಯೊಂದಾಗಿ ಹೋಗುತ್ತಿದ್ದಿತು. ನಾನು ದುರಭಿಸಂಧಿಯಿಂದ ಹುಚ್ಚನಲ್ಲ ದವನನ್ನು ಹುಚ್ಚನನ್ನಾಗಿ ಮಾಡಿ ನಿರ್ಬಂಧಿಸಿಟ್ಟಿರುವೆನೆಂದು ಇಲ್ಲಿನ ದುಷ್ಟ ಜನರು ನನ್ನನ್ನು ಬಾಯಿಗೆ ಬಂದ ಹಾಗೆ ಬೈಯ್ಯುವುದಕ್ಕೂ ಸಾಕು. ಪರಿಚಿತ

ರಾದವರೇ ಆಡಿಕೊಳ್ಳುತ್ತಾರೆಂದು ಅಪರಿಚಿತರಾದವರು ಕೂಡ ನಂಬಿಕೊಂಡು ದುರ್ನಾಮವನ್ನು ಎಲ್ಲೆಲ್ಲಿಯೂ ಬಿತ್ತರಿಸುವರು. ಲೋಕದಲ್ಲಿ ಒಳ್ಳೆಯ ಕೆಲಸಕ್ಕೆ ನೂರೆಂಟು ಅಡ್ಡಿಗಳು. ಸಜ್ಜನರಿಗಾದರೋ ಇದು ಕಾಲವೇ ಅಲ್ಲ, ಎಂದು ಚಾತುರ್ಯಗರ್ಭಿತವಾದ ಮಾತುಗಳನ್ನಾಡಲಾಗಿ, ಇದನ್ನು ಕೇಳಿದ ಭಿಲ್ಲನು ನಗುತ್ತಾ—ಪೂಜ್ಯಮಹಾಶಯ! ತಾವು ಈಗಲೂ ಪರೋಪಕಾರ ನಿರತರೇ ಆಗಿರುವಿರಿ. ಹೀಗಿರುವಲ್ಲಿ ಕೆಟ್ಟ ಹೆಸರಿಗೆ ತಾವು ಹೆದರಲು ಕಾರಣವೇನಿರುವುದು? ನಾನು ಈ ಸಂಗತಿಗಳನ್ನು ಕಂಡ ಕಂಡೆಡೆಗಳಲ್ಲಿ ಪ್ರಚಾರಪಡಿಸುತ್ತೇನೆಂಬ ಭಯವೇನಾದರೂ ತಮಗುಂಟೇನು? ಎಂದು ಮೃದುವಾಗಿ ಮಾತನಾಡಿದನು.

ವೈದ್ಯನು ಒಳಗೆ ಒಂದು ಬಗೆಯ ವಿಷಾದವನ್ನು ತುಂಬಿಕೊಂಡು ಮೇಲೆ ನಗೆಯನ್ನು ನಟಿಸುತ್ತಾ—ಹಾಗೆಂದರೇನು? ನಾನು ಹೆದರುವುದಕ್ಕೆ ಕಾರಣ ತಾನೇ ಏನಿರುವುದು? ಆ ವಿಷಯವನ್ನು ಕುರಿತು ಹೇಳುವುದಕ್ಕೆ ಬಂದವನಲ್ಲ, ಲೋಕದ ಜನರಿಗೆ ಯುಕ್ತಾಯುಕ್ತ ಪರಿಶೀಲನವೆಂಬುದೇ ಇರುವುದಿಲ್ಲ. ಸುಳ್ಳಾಗಲಿ, ನಿಜವಾಗಲಿ, ಆರು ಏನನ್ನು ಹೇಳುವರೋ ಅದನ್ನೇ ನಂಬಿಕೊಂಡು ಬುದ್ಧಿಯಿಲ್ಲದ ಪ್ರಪಂಚವು ಕುಣಿವುದು. ಇದಕ್ಕಾಗಿ ಹೆದರಬೇಕೇ ಹೊರತು ಮತ್ತೆ ಬೇರೆಯಲ್ಲ. ತಮ್ಮಂತಹ ದೊಡ್ಡ ಮನುಷ್ಯರು ಇಂತಹ ಅಲ್ಪವಿಚಾರಗಳನ್ನು ಕಿವಿಯ ಮೇಲೆ ಹಾಕಿಕೊಳ್ಳುವುದೂ ಇಲ್ಲ ; ಒಂದು ವೇಳೆ ಕೇಳಿದರೂ ಕೇಳದ ಹಾಗೆ ಇದ್ದು ಬಿಡುವರೇ ಹೊರತು, ಅವನ್ನು ಎಲ್ಲೆಲ್ಲಿಯೂ ಹರಡುವುದಕ್ಕೆ ಹೊರಡುವುದೂ ಇಲ್ಲ. ಈ ವಿಷಯದಲ್ಲಿ ನನಗೆ ಕೊಂಚವಾದರೂ ಸಂಶಯವೇ ಇಲ್ಲ. ಹೇಗಾದರೂ ಆಗಲಿ, ಕೆಟ್ಟ ಹೆಸರು ಮುಟ್ಟಿಗೆ ಬಾರದಂತೆ ಎಚ್ಚರಿಕೆಯಿಂದ ಆತ್ಮವನ್ನು ರಕ್ಷಿಸಿಕೊಳ್ಳುವುದು ಎಲ್ಲರ ಕರ್ತವ್ಯವೂ ಆಗಿರುವುದು, ಎಂದು ಮತ್ತೆ ಮಾತನಾಡಿದನು.

ಅದಕ್ಕೆ ಅತಿಥಿಯು—ಮಹಾಶಯ! ತಮ್ಮಂತಹ ಸದಾಶಯರಾದ ದೇಶಹಿತೈಷಿಗಳ ವಿಷಯದಲ್ಲಿ ಸುಳ್ಳಿನ ಸುದ್ದಿಯನ್ನು ಹರಡುವಷ್ಟು ನರಾಧಮನು ನಾನಾಗಿಲ್ಲ. ನಾನು ಈ ವಿಚಾರಗಳನ್ನೆತ್ತಿ ಮಾತನಾಡತಕ್ಕವನಲ್ಲವೆಂಬುದನ್ನು ನೀವು ದೃಢವಾಗಿಯೂ ನಂಬಬಹುದು. ಈ ವಿಷಯವು ಹಾಗಿರಲಿ; ನಾನು ಈ ಕಡೆಗಳಿಗೆ ಬಂದವನೇ ಅಲ್ಲ. ನಮ್ಮ ಮಾತುಗಳಿಂದ ತುಂಬಾ ಹೊತ್ತಾಗಿ ಹೋಗಿರುವುದು. ನಾನು ಇಲ್ಲಿಂದ ಹೊರಟು ಮತ್ತೆಲ್ಲಿಯಾದರೂ ತಂಗಬೇಕು. ಈ ಯವೇಳೆಯಲ್ಲಿ ಎಲ್ಲಿಗೆ ಹೋಗಬೇಕೋ ಏನ ಮಾಡಬೇಕೋ ಒಂದೂ ಗೊತ್ತಾಗಲೊಲ್ಲದು. ಮಹಾಶಯ! ಈ ವೈದ್ಯಶಾಲೆಯ ಸಮೀಪದಲ್ಲಿ ನಾನಾ

ಹಾರಮಂದಿರಗಳೇನಾದರೂ ಇರುವುದಾದರೆ ಕೃಪೆಯಿಟ್ಟು ತಿಳಿಸೋಣವಾಗಲಿ. ನಾನು ಎಲ್ಲಿಯಾದರೂ ಈ ರಾತ್ರಿಯನ್ನು ಕಳೆದು ಮುಂದಕ್ಕೆ ತೆರಳಬೇಕೆಂದಿರುವೆನು. ನಾನು ಇಲ್ಲಿನ ಸಂಗತಿಗಳನ್ನು ಇಲ್ಲಿಯೇ ಮರೆತು ಮುಂದಕ್ಕೆ ಹೊರಡುವೆನು. ತಮ್ಮಂಥವರಿಗೆ ದುರ್ನಾಮ ಪ್ರಚಾರವೇ! ಅಕಟಕಟ! ಇದನ್ನು ಆರು ತಾನೇ ಸಹಿಸಬಲ್ಲರು? ಎಂದನು.

ವೈದ್ಯನು ಇದಕ್ಕೆ ಉತ್ತರವಾಗಿ—ವೃದ್ಧ ಮಹಾಶಯ! ತಾವು ಆವ ಉದ್ದೇಶದಿಂದ ಈ ಊರಿಗೆ ಬಿಜಯ ಮಾಡಿಸೋಣವಾಯಿತು? ತಿಳಿಸಬಹುದಾದ ಸಂಗತಿಯಾಗಿದ್ದರೆ, ತಿಳಿಸಬಹುದು, ಎಂದು ಕೇಳಿದುದಕ್ಕೆ, ಅತಿಥಿಯು—ಸ್ವಾಮಿ! ನನ್ನ ದೂರ ಬಂಧುವೊಬ್ಬನು ರಾಜವಾಡಿಯಲ್ಲಿ ವಾಸವಾಗಿರುವನು. ಈ ಮಾರ್ಗವಾಗಿಯೇ ಅಲ್ಲಿಗೆ ಹೋಗಬೇಕಾಗಿರುವುದರಿಂದ, ನಾನು ಈ ಅವೇಳೆಯಲ್ಲಿ ತಮಗೆ ತೊಂದರೆ ಕೊಡಬೇಕಾಗಿ ಬಂದು ಸೇರಿತು. ತಮಗೆ ನಾನು ಶ್ರಮಕೊಟ್ಟರೂ, ತಮ್ಮ ಅತಿಥಿ ಸತ್ಕಾರವು ಚಿರಸ್ಮರಣೀಯವಾದುದು. ನಾನು ಇಲ್ಲಿಂದ ಹೊರಡುವಾಗ, ನಿಮ್ಮ ಹುಚ್ಚರ ಸುದ್ದಿಯನ್ನು ಇಲ್ಲಿಯೇ ಮರೆತು ತಮ್ಮ ಉಪಕಾರವನ್ನು ಮಟ್ಟಿಗೆ ಜತೆಯಲ್ಲಿ ತೆಗೆದುಕೊಂಡು ತೆರಳುವೆನು. ಈ ವಿಷಯದಲ್ಲ ತಾವು ಕೊಂಚವಾದರೂ ಅಧೀರರಾಗಬೇಕಾದುದಿಲ್ಲ, ಎಂದು ನುಡಿದನು.

ವೈದ್ಯನು ಕ್ಷಣಕಾಲ ಸುಮ್ಮನಿದ್ದು ಬಳಿಕ—ಸ್ವಾಮಿ! ತಾವು ಆವುದೋ ಕಾರ್ಯವನ್ನು ನಿಮಿತ್ತಮಾಡಿಕೊಂಡು ಹೊರಟು ಬಂದುದರಿಂದಲೇ ನನಗೆ ತಮ್ಮ ಸಹಪಜ್ತಿಯ ಭೋಜನವು ದೊರೆವುದಕ್ಕೆ ಆಸ್ಪದವಾಯಿತು. ಇಂತಹ ಕಾರಣಗಳು ಒದಗಿ ಬರದಿದ್ದರೆ, ನನಗೆ ತಮ್ಮಂಥವರ ದರ್ಶನವು ಲಭಿಸುವುದು ಹೇಗೆ? ದೇವರು ಕೊಟ್ಟ ವೇಳೆಗಳಲ್ಲಿ ತಮ್ಮಂಥವರನ್ನು ಸತ್ಕರಿಸದ ಮೇಲೆ ಏನಿದ್ದೇನು ಪ್ರಯೋಜನ? ಪಶುವಿನಂತೆ ಬಾಳಿ ಬದುಕಿದರೆ ಬಂದ ಭಾಗ್ಯವೇನು? ತಾವು ಈ ರಾತ್ರಿಯಲ್ಲಿ ಅದರಲ್ಲಿಯೂ ಈ ಶೀತದ ವೇಳೆಯಲ್ಲ ಹೋಗುವುದೆಲ್ಲಿಗೆ? ಎಲ್ಲರೂ ಮೈಮರೆತು ನಿದ್ರಿಸುತ್ತಿರುವಲ್ಲಿ, ನಿಮಗೆ ಸರಿಯಾದ ಆಶ್ರಯವು ದೊರೆವುದು ಅಸಾಧ್ಯದ ಮಾತು. ತಮಗೆ ಆವ ಕುಂದು ಕೊರತೆಗಳೂ ಇಲ್ಲದ ಪಕ್ಷದಲ್ಲಿ ಈ ರಾತ್ರಿ ಇಲ್ಲಿಯೇ ಇದ್ದು ಬೆಳಗಾದ ಮೇಲೆ ತಾವು ಇಷ್ಟವರಿತು ಎಲ್ಲಿಗಾದರೂ ತೆರಳಬಹುದು, ಎಂದನು.

ಇದನ್ನೇ ಬಯಸುತ್ತಿದ್ದ ಶಾಂತಿಯಾ ಭಿಲ್ಲನು ತನ್ನ ರೊಟ್ಟಿಜಾರಿ ತುಪ್ಪದಲ್ಲಿ ಬಿದ್ದಿತೆಂದು ಭಾವಿಸಿಕೊಂಡವನಾಗಿ ಸಂತೋಷದಿಂದ—ಸ್ವಾಮಿ! ತಮ್ಮ ಪರೋಪಕಾರ ಸ್ವಭಾವವನ್ನು ಎಷ್ಟು ಕೊಂಡಾಡಿದರೂ ಸ್ವಲ್ಪವಾಗಿಯೇ ಇರು

ವುದು. ತಮ್ಮ ಮಾತಿಗೆ ಪ್ರತಿಯಾಗಿ ಹೇಳುವುದಕ್ಕೆ ನನಗೆ ಬಾಯೇ ಬಾರದು. ದೊಡ್ಡವರ ಮಾತು ಉಲ್ಲಂಘಿಸತಕ್ಕುದಲ್ಲ. ನಾನು ಅದರಲ್ಲಿಯೂ ಯಾಚನೆ ಮಾಡುವ ಸ್ವಭಾವದವನಲ್ಲ. ಈಗ ನಾನು ಪ್ರಯಾಣಿಕನಾಗಿರುವುದರಿಂದ ಸಮ ಯವರಿತು ನಡೆದುಕೊಳ್ಳಬೇಕಾಗಿರುವುದು. ನನ್ನದಾದರೋ ಬಹು ಸಂಕೋಚ ಸ್ವಭಾವವು, ಎಂದು ಉತ್ತರಕೊಟ್ಟುದಕ್ಕೆ ವೈದ್ಯನು—ಮಹಾಶಯ! ಸಂಕೋಚ ವೆಂಥದು? ನನ್ನ ಮನೆಯಾದರೋ ಎಲ್ಲರಿಗೂ ತೆರೆದ ಬಾಗಿಲಾಗಿರುವುದು. ಸಂಕೋಚವಿಲ್ಲದೆಯೇ ಬರುವವರು ಬರಬಹುದು, ಹೋಗುವವರು ಹೋಗ ಬಹುದು. ಜನರು ಬರುತ್ತಿದ್ದರೆ ನನಗೆ ತುಂಬಾ ಸಂತೋಷವುಂಟು; ಏಕಾಂಗಿ ಯಾಗಿರುವುದು ಮಟ್ಟಿಗೆ ನನ್ನ ಜಾಯಮಾನವಲ್ಲ. ನನ್ನ ಸ್ವಭಾವವು ನಿಮ ಗಿನ್ನೂ ಗೊತ್ತಿಲ್ಲ; ತಾವು ಹೊಸಬರು. ತಮ್ಮ ಮುಂದೆ ನಾನು ಆತ್ಮ ಪ್ರಶಂಸೆ ಮಾಡಿಕೊಳ್ಳಬಾರದು. ನನ್ನ ಮನೆಯನ್ನು ತಮ್ಮ ಮನೆಯೆಂದೇ ಭಾವಿಸಿ, ಎಷ್ಟು ದಿನಗಳು ಬೇಕಾದರೂ ವಾಸಮಾಡಿಕೊಂಡಿರಬಹುದು. ತಮಗೆ ಕಾರ್ಯ ಗೌರವವಿರುವುದರಿಂದ ನಾನು ತಮ್ಮನ್ನು ನಿರ್ಬಂಧಪಡಿಸುವುದಿಲ್ಲವೇ ಹೊರತು, ಇಲ್ಲವಾದರೆ ತಮ್ಮನ್ನು ನಾನು ಅರೆಗಳಿಗೆಯಾದರೂ ಬಿಟ್ಟಿರತಕ್ಕವನಲ್ಲ. ತಾವು ನಿಶ್ಚಿಂತರಾಗಿ ಇಲ್ಲಿಯೇ ಇರೋಣವಾಗಲಿ. ನಾನು ಕೊಂಚ ಹೊತ್ತು ಹುಚ್ಚರ ಯೋಗಕ್ಷೇಮವನ್ನೂ, ಸೇವಕರು ಆವರೀತಿಯಲ್ಲಿ ಕೆಲಸಮಾಡುತ್ತಿರುವರೆಂಬು ದನ್ನೂ ನೋಡಿಕೊಂಡು ಬರುವೆನು. ಅಲ್ಲಿಯವರೆಗೂ ತಾವು ವಿಶ್ರಾಂತಿಯನ್ನು ಅನುಭವಿಸೋಣವಾಗಲಿ, ಎಂದು ಹೇಳಿ ಪಿಹಾರ ಮಂದಿರವನ್ನು ಬಿಟ್ಟು ಹೊರಗೆ ಹೊರಟನು.

ತಾಂತಿಯಾ ಘಿಲ್ಲನು ಒಂದು ಸುಖಾಸನದಲ್ಲಿ ಕುಳಿತು ತೆರ ತೆರನಾಗಿ ಚಿಂತಿಸ ತೊಡಗಿದನು. ಅದರ ಪರಿಪಾಟಿಯೇನೆಂದರೆ—" ಇಂದು ನಾನು ನರಿಯ ಮುಖವನ್ನು ನೋಡಿದ್ದೇನಾದೀತು. ಇಲ್ಲವಾದರೆ ಈ ದಿನ ಅಪರಿಚಿತವಾದ ಸ್ಥಳದಲ್ಲಿ ಈ ಬಗೆಯ ಭೋಜನವು ದೊರೆವುದೆಂದರೇನು? ಆವುದೋ ಒಂದು ನನ್ನ ಪೂರ್ವಪುಣ್ಯವಿಶೇಷವು ಈ ದಿನ ಹೊಟ್ಟೆಗೆ ಕೊಟ್ಟು ರಕ್ಷಿಸಿರುವುದು. ಇದನ್ನು ನೋಡಿದರೆ ನನಗೆ ಇನ್ನೂ ಭೂಲೋಕದ ಋಣಾನುಬಂಧವು ಇರು ವುದೆಂದು ತಿಳಿದು ಬರುತ್ತಿರುವುದು ಇರುವ ವರೆಗೂ ಏನಾದರೂ ಕೆಲಸ ಮಾಡಿಯೇ ಬದುಕಬೇಕು. ಇಲ್ಲವಾದರೆ ನಮ್ಮ ಮುದ್ದು ಮೊಗವನ್ನು ನೋಡಿ ನಮ್ಮನ್ನು ಒಂದು ಕಡೆ ಕೂಡಿಸಿ ಅನ್ನ ಹಾಕುವವರಾರು? ಅದರಲ್ಲಿಯೂ ನನ್ನಂತಹ ಕಳ್ಳನಿಗೆ ಸುಖಜೀವನದ ಸುದ್ದಿಯೇತರದು? ಈ ರೀತಿ ಚಿಂತಿಸುತ್ತಾ ಕುಳಿತರೆ ನಿತ್ಯಯಾತ್ರೆಯು ಸಾಗದು. ಆವಾಗಲೂ ಮುಂದಣ ಕರ್ತವ್ಯವನ್ನು ಹಿಡಿದುಕೊಂಡು ಕೆಲಸ ಮಾಡಬೇಕು.

ವೈದ್ಯನಾಡಿದ ಮಾತುಗಳನ್ನು ತೂಗಿ ನೋಡಿದರೆ, ಈ ಹುಚ್ಚರ ವೈದ್ಯ ಶಾಲೆಯಲ್ಲಿ ಆವುದೋ ರಹಸ್ಯವು ಅಡಗಿರಬೇಕು. ಈ ರಹಸ್ಯವನ್ನು ನಾನು ಹೇಗಾದರೂ ಮಾಡಿ ಭೇದಿಸಲೇ ಬೇಕು. ಉಂಡ ಮನೆಗೆ ಇಬ್ಬಗೆಯ ಬಾರ ದೆಂದು ನಾನು ಬಲ್ಲೆನು. ಭಗವಂತನಿಗೆ ಅರ್ಪಿತವಾಗಲೆಂದು ಭೋಜನ ಮಾಡಿ ಸಿದ ಕಡೆ ನಾವು ದುರಾಲೋಚನೆಯಿಂದ ಪ್ರತಿಯಾಗಿ ವರ್ತಿಸಿದರೆ ಮಹಾಪಾತಕ ವಾಗುವುದು. ಗುಟ್ಟು ರಟ್ಟಾಗ ಕೂಡದೆಂದು ಬಾಯ ಮುಚ್ಚುವುದಕ್ಕಾಗಿ ಮಾಡಿದ ಉಪಕಾರವು ಉಪಕಾರವೆನಿಸಲಾರದು. ಇಂತಹ ಮೋಸದ ಕೃತ್ಯ ಗಳನ್ನು ಬಯಲು ಮಾಡುವುದರಿಂದ ಆವ ಪಾಪವೂ ಬರಲಾರದೆಂದು ಬಲ್ಲವರು ತಿಳಿಸಿರುವರು. ಅದು ಕಾರಣ ನಾನು ಇಲ್ಲಿ ಪ್ರತ್ಯುಪಾಯಗಳನ್ನು ಅವಲಂಬಿ ಸುವೆನು. ನನ್ನ ಈ ಅಭಿಸಂಧಿಯು ವೈದ್ಯನಿಗೆ ಗೊತ್ತಾಗುವುದಾದರೆ, ನಾನು ಬದುಕಿ ಇಲ್ಲಿಂದ ಹೊರಗೆ ಹೋಗುವುದು ದುರ್ಘಟವಾಗುವುದು. ನಾನು ದುಷ್ಟ ನೆಂದು ವೈದ್ಯನಿಗೆ ತಿಳಿದ ಕೂಡಲೆ, ಆತನು ನನ್ನನ್ನು ಉಪಾಯದಿಂದ ಕೊಲ್ಲಿಸು ವುದಕ್ಕೂ ಸಾಕು,—ಇಲ್ಲವೇ, ಮರಣಾವಧಿ ಹುಚ್ಚರ ಕೋಣೆಯಲ್ಲಿ ನಿರ್ಬಂಧಿ ಸುವುದಕ್ಕೂ ಸಾಕು. ಇದಾವ ಕೆಲಸ ಮಾಡುವುದಕ್ಕೂ ವೈದ್ಯನು ಹಿಂಜರಿಯ ತಕ್ಕವನಲ್ಲ. ನನಗೆ ಮನುಷ್ಯರ ಯೋಗ್ಯತೆಯು ಚೆನ್ನಾಗಿಯೂ ಗೊತ್ತು. ಈ ತನು ಸಾಮಾನ್ಯನಲ್ಲ; ಈತನಾದರೋ ಸ್ವಕಾರ್ಯಸಾಧನೆಗಾಗಿ ಎಂತಹ ಕೆಲಸ ವನ್ನಾದರೂ ಮಾಡಿಬಿಡುವನು. ಇದಕ್ಕಾಗಿ ನನಗೆ ಮಾಡಿದ ಉಪಚಾರವೇ ಸಾಕಾದಷ್ಟು ನಿದರ್ಶನವು. ನೋಡುವಲ್ಲಿ, ಈ ದುರ್ದಾಂತನಾದ ವೈದ್ಯನು ನನ ಗಿಂತಲೂ ಉಚ್ಚ ತರಗತಿಯ ಪಿಶಾಚನಾಗಿರಬೇಕು. ಇಂತಹವನಲ್ಲಿ ನನ್ನ ಶಕ್ತಿ ಯನ್ನು ತೋರಿಸದ ಮೇಲೆ, ನಾನು ತಾಂತಿಯಾ ಭಿಲ್ಲನೆಂದು ಕರೆಯಿಸಿಕೊಳ್ಳು ವುದಕ್ಕೆ ತಕ್ಕವನೇ ಅಲ್ಲ. ಪಿಶಾಚನು ಪಿಶಾಚನ ಶಕ್ತಿಯನ್ನು ಅರಿಯಬಲ್ಲನೇ ಹೊರತು, ಇತರರಿಗೆ ಸಾಧ್ಯವಾಗದು. ಇರಲಿ; ಈ ದಿನವೇ ನಾನು ಮುಂದಣ ಕಾರ್ಯಸಾಧನೆಗಾಗಿ ಗಣೇಶನ ಪೂಜೆಯನ್ನು ಕೈಕೊಳ್ಳುವೆನು. ಒದಗಿ ಬಂದ ಸುಯೋಗಗಳನ್ನು ಕಳೆದುಕೊಳ್ಳುವುದು ಬುದ್ಧಿಮಂತನ ಕೆಲಸವಲ್ಲ.''

ತಾಂತಿಯಾ ಭಿಲ್ಲನು ಹೀಗೆಲ್ಲಾ ಚಿಂತಿಸುತ್ತಿರುವಷ್ಟರಲ್ಲಿಯೇ ವೈದ್ಯನು ತನ್ನ ಕೆಲಸವನ್ನು ತೀರಿಸಿಕೊಂಡು ಮತ್ತೆ ಕೋಣೆಯೊಳಗೆ ಪ್ರವೇಶ ಮಾಡಿದನು.

---

## ಎರಡನೆಯ ವಿಲಾಸ

### ರಹಸ್ಯಾನುಸಂಧಾನ

ವೈದ್ಯನು ಕೋಣೆಯೊಳಗೆ ಪ್ರವೇಶಮಾಡಿದ ಕೂಡಲೆ ಅತಿಥಿಯನ್ನು ಕುರಿತು—ವೃದ್ಧ ಮಹಾಶಯ! ನನ್ನ ವಿಶ್ರಾಂತಿಮಂದಿರದಲ್ಲಿ ತಮಗೆ ಮಲಗುವುದಕ್ಕೆ ತಕ್ಕ ಏರ್ಪಾಡನ್ನು ಮಾಡಿರುವೆನು. ಅಲ್ಲಿ ತಮ್ಮ ನಿದ್ರಾಭಂಗಕ್ಕೆ ಆವ ಕುಂದುಕೊರತೆಗಳೂ ಇರುವುದಿಲ್ಲ. ತಾವು ಅಲ್ಲಿ ಸುಖವಾಗಿ ನಿದ್ರಿಸಿ ರಾತ್ರಿಯನ್ನು ಕಳೆಯಬಹುದು. ಈ ಕೋಣೆಯಲ್ಲಿಯೂ ಮಲಗಬಹುದು, ಆದರೆ ಇಲ್ಲಿ ಒಂದೊಂದು ವೇಳೆಯಲ್ಲಿ ಹುಚ್ಚರ ಕಾಟವು ಮಿತಿ ಮೀರುವುದಾದರೆ ತಮಗೆ ನಿದ್ರಾಭಂಗವಾಗುವ ಸಂಭವವುಂಟು, ಎಂದನು.

ಇದನ್ನು ಕೇಳಿ ಅತಿಥಿಯು—ದಯಾಮಯ! ಹಾಗಾದರೆ ಹುಚ್ಚರು ಈ ಮನೆಗೆ ಸೇರಿದ ಮತ್ತೊಂದು ಭಾಗದಲ್ಲಿ ವಾಸಮಾಡುವರೇನು? ಎಂದು ಕೇಳಿದನು.

ಅದಕ್ಕೆ ಉತ್ತರವಾಗಿ—ಹುಚ್ಚರಿರುವುದಕ್ಕೂ ಈ ಮನೆಗೂ ಆವ ಸಂಬಂಧವೂ ಇರುವುದಿಲ್ಲ. ಈ ಮನೆಯಲ್ಲಿ ನಾನೂ ನನ್ನ ಪರಿವಾರದವರೂ ವಾಸಮಾಡಿಕೊಂಡಿರುವೆವು. ಮಹಾಶಯ! ತುಂಬಾ ಆಯಾಸ ಪಟ್ಟಿರುವಿರಿ. ಹೊತ್ತೂ ಮೀರಿಹೋಗಿರುವುದು. ತಾವು ಮಲಗೋಣವಾಗಲಿ, ನಾನೂ ಹೋಗಿ ಮಲಗಿಕೊಳ್ಳುವೆನು, ಎಂದು ವೈದ್ಯನು ನುಡಿದನು.

ವೈದ್ಯನು ಹೀಗೆ ಹೇಳಿ ಹೊರಟು ಹೋದ ಬಳಿಕ, ತಾಂತಿಯಾ ಭಿಲ್ಲನು ಹಾಸುಗೆಯಲ್ಲಿ ಮಲಗಿಕೊಳ್ಳದೆ ಸುಖಾಸನದ ಮೇಲೆಯೇ ಕುಳಿತುಕೊಂಡು ಪರಿಪರಿಯಾಗಿ ವಿಚಾರಮಾಡಿನೋಡಿದನು. ಅದೇನೆಂದರೆ—

"ಶ್ರೀಕುಮಾರನೆಂಬುವನು ಓಡಿಹೋಗಲು ಪ್ರಯತ್ನ ಮಾಡಿದನಲ್ಲಾ! ಅವನು ನಿಜವಾಗಿಯೂ ಹುಚ್ಚನಿರಬಹುದೇ? ಅವನು ಇತರರಂತೆ ನಿಜವಾಗಿಯೂ ಹುಚ್ಚನೇ ಆಗಿದ್ದರೆ, ವೈದ್ಯನು ಹುಚ್ಚರ ಮಾತಿಗೆ ಗಮನಕೊಡುವಷ್ಟು ಹುಚ್ಚನಲ್ಲ. ವೈದ್ಯನು ಹುಚ್ಚನ ಮಾತ ಕೇಳಿ ಸ್ವಪಕ್ಷವನ್ನು ಸಾಧಿಸಿಕೊಳ್ಳುವುದಕ್ಕೆ ಅಷ್ಟೊಂದು ಮಾತನಾಡಬೇಕಾದರೆ, ಇದರಲ್ಲಿ ಆವುದೋ ರಹಸ್ಯವು ಅಡಗಿರಲೇಬೇಕು. ಇದರಲ್ಲಿ ವೈದ್ಯನಿಗೆ ಸ್ವಪ್ರಯೋಜನವಾದರೂ ಏನು? ಇದನ್ನು ನಾನು ತಿಳಿಯಲು ಪ್ರಯತ್ನಮಾಡದೇ ಹೋದರೆ, ಇದರಿಂದ ಶ್ರೀಕುಮಾರನಿಗೆ ಅಪಾಯ ಸಂಭವಿಸಿದರೂ ಸಂಭವಿಸಬಹುದು. ನಾನು ಬೆಳಗಾದ ಕೂಡಲೆ ಇಲ್ಲಿಂದ ಹೊರಡಲೇ ಬೇಕು, ಎಂದ ಮೇಲೆ ರಹಸ್ಯವನ್ನು ಸಾಧ್ಯವಾದಷ್ಟು ಬೇಗನೆಯೇ ತಿಳಿಯು

ವುದು ಅತ್ಯಾವಶ್ಯಕವು. ಆದುದರಿಂದ ಇದರ ಮರ್ಮವನ್ನು ಈ ರಾತ್ರಿಯಲ್ಲಿಯೇ ಭೇದಿಸುವೆನು. ಏನ ಮಾಡಿದರೆ ಗುಟ್ಟು ಗೊತ್ತಾದೀತು? ಇಲ್ಲಿ ದೊಡ್ಡದಾದ ದೊಂದು ಕಬ್ಬಿಣದ ಪೆಟ್ಟಿಗೆಯಿರುವುದು. ಇದರಲ್ಲಿ ಶ್ರೀಕುಮಾರನಿಗೆ ಸಂಬಂಧಿಸಿದ ಪ್ರಮಾಣಪತ್ರಗಳೇನಾದರೂ ಸಂಗ್ರಹಿಸಲ್ಪಟ್ಟಿರಬಹುದೇ? ಇದ್ದರೂ ಇರಬಹುದು.

ನಾನು ಸ್ವಕಾರ್ಯಸಾಧನೆಗಾಗಿ ಆವ ಕೆಲಸಮಾಡಬೇಕಾದರೂ ಅದನ್ನು ಈಗಳೇ ಮಾಡಬೇಕು. ಇಲ್ಲವಾದರೆ ನನ್ನ ಉದ್ದೇಶವು ನೆರವೇರಲಾರದು. ಕಬ್ಬಿಣದ ಪೆಟ್ಟಿಗೆಯಾದರೋ ದೊಡ್ಡದಾಗಿಯೇ ಇರುವುದು. ಇದರಲ್ಲಿ ಅಮೂಲ್ಯವಾದ ವಸ್ತುಗಳು ರಕ್ಷಿಸಲ್ಪಟ್ಟಿರುವುವು. ಇದನ್ನು ಶೋಧಿಸುವುದರಿಂದ ಏಕಕಾಲದಲ್ಲಿಯೇ ನನಗೆ ಅನೇಕ ಪ್ರಯೋಜನಗಳು ಉಂಟಾಗುವುದರಲ್ಲಿ ಆವ ಸಂಶಯವೂ ಇರಲಾರದು. ಆದುದರಿಂದ ಮೊದಲು ಈ ಪೆಟ್ಟಿಗೆಯನ್ನು ಅವಶ್ಯವಾಗಿಯೂ ತೆರೆದು ನೋಡಲೇ ಬೇಕು.

ಭಿಲ್ಲನು ಹೀಗೆ ಪರ್ಯಾಲೋಚಿಸಿದ ಬಳಿಕ, ತನ್ನ ಕೈಚೀಲದಿಂದ ಎಲ್ಲಾ ತರದ ಬೀಗಗಳನ್ನೂ ನಿರಾಯಾಸವಾಗಿ ತೆರೆಯುವುದಕ್ಕೆ ಸಾಧಕವಾದ ಅದೊಂದು ಉಕ್ಕಿನ ಸಲಾಕೆಯನ್ನು ತೆಗೆದು ತನ್ನ ಕಿಸೆಯಲ್ಲಿಟ್ಟುಕೊಂಡನು. ಕಳ್ಳನಾದವನಿಗೆ ಈ ಆಯುಧವೇ ಸರ್ವಪ್ರಧಾನವಾದ ಉಪಕರಣವು. ಇದನ್ನು ತಾಂತಿಯಾ ಭಿಲ್ಲನು ಅರೆಗಳಿಗೆಯೂ ಬಿಟ್ಟಿರಲೊಲ್ಲನು. ಈ ಸಾಧನದ ಸಾಹಾಯ್ಯದಿಂದ ಎಂತಹ ಕೀಲುಗಳನ್ನಾಗಲಿ, ಕೊಂಡಿಗಳನ್ನಾಗಲಿ, ಬೀಗಗಳನ್ನೇ ಆಗಲಿ ನಿಮಿಷ ಮಾತ್ರದಲ್ಲಿ ಆರಿಗೂ ತಿಳಿಯದ ಹಾಗೆ ಕಳಚಿಬಿಡಬಹುದು. ಇಂತಹ ಆಯುಧವೊಂದನ್ನು ಸಿದ್ಧಪಡಿಸಿಕೊಂಡು ಭಿಲ್ಲನು ಸಮಯವನ್ನು ನಿರೀಕ್ಷಿಸುತ್ತಾ ಕುಳಿತಿದ್ದನು.

ವೈದ್ಯನು ಮಲಗುವುದಕ್ಕೆ ಹೊರಟಾಗ, ಅತಿಥಿಯ ಕೋಣೆಯ ಬಾಗಿಲನ್ನು ಸೆಳೆದು ಅದಕ್ಕೆ ಬೀಗವನ್ನು ಹಾಕಿಕೊಂಡು ತನ್ನ ಮಲಗುವ ಮನೆಗೆ ತೆರಳಿದನು. ಇದರಿಂದ ವೈದ್ಯನು ಮಹಾ ಸಂಶಯ ಪ್ರಕೃತಿಯವನೆಂಬುದನ್ನು ಸ್ಪಷ್ಟವಾಗಿ ತಿಳಿಸಬೇಕಾದುದೇನೂ ಇರುವುದಿಲ್ಲ. ಭಿಲ್ಲನು ಹೀಗೆಲ್ಲಾ ಆಗುವುದೆಂದು ಮೊದಲೇ ಅರಿತಿದ್ದನು. ವೈದ್ಯನು ತನ್ನ ಕೆಲಸವನ್ನು ತೀರಿಸಿಕೊಂಡು ಹೊರಟುಹೋದ ಒಂದು ಗಂಟೆಯಾದ ಬಳಿಕ, ಭಿಲ್ಲನು ತನ್ನ ಆಯುಧದಿಂದ ಬಾಗಿಲ ಬೀಗವನ್ನು ಸಡಲಿಸಿದನು. ಬಾಗಿಲು ತೆರೆಯಲ್ಪಟ್ಟಿತು. ಭಿಲ್ಲನು ಹೊರಗೆ ನಿಂತು ಆ ಅಂಧಕಾರದಲ್ಲಿ ಕಣ್ಣನ್ನು ಕಿವಿಯನ್ನಾಗಿಯೂ ಕಿವಿಯನ್ನು ಕಣ್ಣನ್ನಾಗಿಯೂ ಮಾಡಿಕೊಂಡು ಸುತ್ತಲೂ ನೋಡಿದನು. ಎಲ್ಲೆಲ್ಲಿಯೂ ನಿಶ್ಶಬ್ದತೆಯು ಏಕಾಧಿಪತ್ಯ

ಮಾಡುತಿದ್ದಿತು. ಈ ಸಮಯದಲ್ಲಿ ವೈದ್ಯನ ಶಯನ ಗೃಹಕ್ಕೆ ಹೋಗಿ ಅಲ್ಲಿ ಅವನ ಕೈಕಾಲುಗಳನ್ನು ಬಲವಾಗಿ ಬಂಧಿಸಿ, ತರುವಾಯ ಪೆಟ್ಟಿಗೆಯಲ್ಲಿರತಕ್ಕುದೆಲ್ಲವನ್ನೂ ಸವರಿಸಿಕೊಂಡು ಕಾಲಿಗೆ ಬುದ್ಧಿಹೇಳಬೇಕೆಂದು ಸಂಕಲ್ಪಮಾಡುತ್ತಿರುವಲ್ಲಿ, ಒಂದು ವೇಳೆ ಮಲಗುವ ಮನೆಯ ಹತ್ತಿರ ಆವ ಸೇವಕನಾದರೂ ಎಚ್ಚರದಿಂದ ಕಾದಿರುವುದಾದರೆ, ಅವನು ಗದ್ದಲವನ್ನೆಬ್ಬಿಸಿ ಪ್ರಾಣಕ್ಕೆ ಅಪಾಯವನ್ನು ತಂದರೂ ತರಬಹುದು ಎಂಬ ಸಂಶಯವು ತಲೆದೋರಿದ ಕೂಡಲೆ ಭಿಲ್ಲನು ಆ ಆಲೋಚನೆಯನ್ನು ಬಿಟ್ಟನು.

ಅನಂತರದಲ್ಲಿ ಭಿಲ್ಲನು ಮತ್ತೆ ತನ್ನ ಕೋಣೆಗೆ ಬಂದು ಬಾಗಿಲನ್ನು ಮೊದಲಿನಂತೆಯೇ ಹಾಕಿ ಪೆಟ್ಟಿಗೆಯ ಹತ್ತಿರದಲ್ಲಿ ಬಂದು ನಿಂತನು. ಬಳಿಕ ಒಂದು ತಡವೆ ಸುತ್ತಲೂ ನೋಡಿ ತನ್ನ ಕಿಸೆಯಿಂದ ಸಲಾಕೆಯನ್ನು ತೆಗೆದು ಕಬ್ಬಿಣದ ಪೆಟ್ಟಿಗೆಯ ಬೀಗವನ್ನು ಸಡಲಿಸುವುದಕ್ಕೆ ಮೊದಲು ಮಾಡಿದನು. ಮೊದಮೊದಲು ಕೆಲಸವು ಶ್ರಮಸಾಧ್ಯವಾಗಿ ಕಂಡು ಬಂದಿತು. ಇಷ್ಟಕ್ಕಾಗಿಯೇ ಭಿಲ್ಲನು ಅಂಜದೆ ತನ್ನ ಬುದ್ಧಿಯನ್ನು ಸೂಕ್ಷ್ಮವಾಗಿ ಉಪಯೋಗಿಸತೊಡಗಿದನು. ಬುದ್ಧಿಗಿಂತಲೂ ಮಿಂಚಿದುದಿಲ್ಲ. ಬುದ್ಧಿಯ ಮುಂದೆ ಆವ ಪರಾಕ್ರಮವೂ ನಿಲ್ಲಲಾರದು. ಭಿಲ್ಲನು ಕೊಂಚ ಬುದ್ಧಿಯನ್ನು ಉಪಯೋಗಿಸುವುದರೊಳಗಾಗಿ ಪೆಟ್ಟಿಗೆಯ ಬಾಗಿಲು ತೆರೆದುಕೊಂಡಿತು. ಕಾರ್ಯವು ಅನುಕೂಲಿಸಿದುದಕ್ಕಾಗಿ ಆತನು ಸಂತೋಷಪಟ್ಟುಕೊಂಡು ಒಂದು ಕ್ಷಣಕಾಲದ ಮಟ್ಟಿಗೆ ಪೆಟ್ಟಿಗೆಯೊಳಗಣ ಸನ್ನಿವೇಶವನ್ನು ಪರೀಕ್ಷಿಸುತ್ತಾ ನಿಂತನು.

ಪೆಟ್ಟಿಗೆಯೊಳಗೆ ಮೇಲಣ ಸಾಲಿನಲ್ಲಿ ಖಾನಿಗಳಿದ್ದುವು. ಒಂದೊಂದು ಖಾನಿಯ ಮೇಲೆಯೂ "ರಸೀತಿ, ಇಂದ, ಗೆ, ವ್ಯವಹಾರ ಪತ್ರ, ಆಧಾರ ಪತ್ರ, ನಿಲಿ" ಎಂದು ಬರೆದಿದ್ದುವು. ಕೆಳಗಣ ಖಾನಿಯಲ್ಲಿ ಸಣ್ಣ ದೊಡ್ಡ ಚೀಲಗಳಿದ್ದುವು. ಭಿಲ್ಲನು ಮೊದಲು ಚೀಲಗಳಲ್ಲಿ ಕೆಲವನ್ನು ತನ್ನ ಜೇಬಿನಲ್ಲಿ ಇಳಿಯಬಿಟ್ಟನು. ಬಳಿಕ ಅಲ್ಲಿದ್ದ ಸಾವಿರಾರು ರೂಪಾಯಿಗಳ ನೋಟುಗಳ ಕಟ್ಟನ್ನು ಮತ್ತೊಂದು ಜೇಬಿನಲ್ಲಿ ಭದ್ರಪಡಿಸಿಟ್ಟುಕೊಂಡನು. ಇದಾದ ಮೇಲೆ ಶ್ರೀಕುಮಾರನ ವಿಷಯದಲ್ಲಿ ಪ್ರಮಾಣವೇನಾದರೂ ಸಿಕ್ಕ ಬಹುದೆಂದು ಆಧಾರ ಪತ್ರದ ಖಾನಿಯಲ್ಲಿ ಕೈಯಿಟ್ಟು ಅನೇಕ ಪತ್ರಗಳನ್ನು ಹೊರಕ್ಕೆ ತೆಗೆದು ನೋಡಿದನು. ಅವುಗಳೆಲ್ಲವೂ ಸಾಧಾರಣ ಪತ್ರಗಳಾಗಿದ್ದುವು. ಹೀಗಿಯೇ ಒಂದೊಂದಾಗಿ ಪರೀಕ್ಷಿಸುತ್ತಿರುವಲ್ಲಿ ಆವುದೋ ಒಂದು ಪತ್ರವು ಸಿಕ್ಕಿತು. ಅದರಲ್ಲಿ ಬರೆದವನ ಹೆಸರಾಗಲಿ, ಆತನ ನಿವಾಸಸ್ಥಾನವಾಗಲಿ ಒಂದೂ ಇರಲಿಲ್ಲ, ಆದರೆ ಪತ್ರದ ಕೊನೆಯಲ್ಲಿ "ಕಮ" ಎಂಬು ಮಟ್ಟಿಗೆ ಬರೆದಿದ್ದಿತು. ಭಿಲ್ಲನು ಇದನ್ನು

ನೋಡಿದ ಕೂಡಲೆ ಕುತೂಹಲದಿಂದ ಕೂಡಿದವನಾಗಿ ಪತ್ರವನ್ನು ಮೊದಲಿನಿಂದ ಕೊನೆಯ ವರೆಗೂ ಓದಿ ನೋಡಿದನು. ಅದು ಈ ರೀತಿಯಾಗಿದ್ದಿತು—

"ಪ್ರಿಯ ಬಾಂಧವ ವಾಗೀಶ! ರೋಗಿಯ ಅವಸ್ಥೆಯನ್ನು ಕೇಳಿ ಎದೆಯೊಡೆದೆನು. ನಾನು ರೋಗಿಯನ್ನು ನಿಮ್ಮಲ್ಲಿಗೆ ತಂದು ಬಿಟ್ಟು ಒಂದು ವರ್ಷವಾಗುತ್ತಾ ಬಂದಿತು. ತಾವು ರೋಗಿಯನ್ನು ನೋಡಿದ ಕೂಡಲೆ, ರೋಗಿಯು ಯಾತನೆಯನ್ನು ಬಹುಕಾಲ ಅನುಭವಿಸುವುದಿಲ್ಲವೆಂದು ಹೇಳೋಣವಾಯಿತು. ತಾವು ಇನ್ನೂ ಆತನನ್ನು ಯಾತನೆಯಿಂದ ಬಿಡುಗಡೆ ಮಾಡಿದಂತಿಲ್ಲ. ಆತನಿಗಾರೂ ಉತ್ತರಾಧಿಕಾರಿಗಳಿರುವುದಿಲ್ಲ. ತಾವು ಕೃಪೆಯಿಟ್ಟು ಸಾಧ್ಯವಾದಷ್ಟು ಬೇಗನೆ ಆತನಿಗೆ ಸುಖಶಾಂತಿಯನ್ನುಂಟು ಮಾಡಬೇಕು. ಅಲ್ಲಿಯ ವರೆಗೂ ನನ್ನ ಮನಸ್ಸು ಶಾಂತವಾಗಿರಲಾರದು. ತಮ್ಮ ಪ್ರಯತ್ನವು ಸಫಲವಾಗುವುದೆಂದಿಗೆ? ತಿಳಿಸೋಣವಾಗಲಿ. ನಾಳೆಯೇ ಹಣವನ್ನು ಕಳುಹುವೆನು, 'ಕಮು.'

ಪತ್ರವನ್ನು ಪಾಠಮಾಡಿದ ಕೂಡಲೆ ಭಿಲ್ಲನ ಮನಸ್ಸು ಹರ್ಷಗೊಂಡಿತು. ಇದರಲ್ಲಿ ಗೂಢಾರ್ಥವೇನೋ ಅಡಗಿರಬೇಕೆಂದು ಅವನ ಮನಸ್ಸಿಗೆ ಹೊಳೆದ ಬಳಿಕ "ಈ ವೈದ್ಯಶಾಲೆಯಲ್ಲಿ ಇಂತಹ ರೋಗಿಯೊಬ್ಬನು ನಿರ್ಬಂಧದಲ್ಲಿಡಲ್ಪಟ್ಟಿರಬೇಕು. ಅವನನ್ನು ಸಾಧ್ಯವಾದಷ್ಟು ಬೇಗನೇ ಇಹಲೋಕದಿಂದ ಬಿಡುಗಡೆಮಾಡಬೇಕೆಂದು ಪತ್ರ ಬರೆದವನ ಅಭಿಪ್ರಾಯವಿದ್ದಂತೆ ತೋರುವುದು. ಇದರಿಂದ 'ಕಮು' ಎಂಬುವನಿಗೆ ತುಂಬಾ ಪ್ರಯೋಜನವಿರಬೇಕು. 'ಕಮು' ಎಂಬುವನು ಆರಿರಬಹುದು? ಇದು ಗೊತ್ತಾದ ಕೂಡಲೆ ರಹಸ್ಯವನ್ನು ಸುಲಭವಾಗಿ ಭೇದಿಸಬಹುದು. ಇರಲಿ; ಇನ್ನೂ ಅನೇಕ ಪತ್ರಗಳನ್ನು ಹುಡುಕಿ ನೋಡುವೆನು," ಎಂದು ಆಲೋಚಿಸಿಕೊಂಡು ಕಾಗದಗಳನ್ನು ಹುಡುಕಲಾರಂಭಿಸಿದನು. ಕೊಂಚ ಹೊತ್ತಿನೊಳಗಾಗಿ ಮೊದಲಿನಂತಹ ಮತ್ತೊಂದು ಕಾಗದವು ಕೈಗೆ ಸಿಕ್ಕಿತು. ಅವನ್ನು ಆದರದಿಂದ ಓದಿದನು.

"ಪ್ರಿಯ ಬಾಂಧವ ವಾಗೀಶ! ಇಂದಿನ ವರೆಗೂ ನಾನು ಮಾತ ಕೊಟ್ಟಷ್ಟು ಹಣವನ್ನು ಕಳುಹದೇ ಇರುವುದಕ್ಕಾಗಿ ನನಗೆ ತುಂಬಾ ನಾಚಿಕೆಯಾಗಿದೆ. ಸರಕಾರದಿಂದ ಸ್ವತ್ವಾಧಿಕಾರವು ಇನ್ನೂ ಒಪ್ಪಿಗೆಯಾಗಿ ಬಂದಿಲ್ಲದಿರುವುದೇ ಹಣ ಕಳುಹದೇ ಇರುವುದಕ್ಕೆ ಮೂಲಕಾರಣವು. ತಡವಾದುದಕ್ಕಾಗಿ ತಾವು ಸಿಟ್ಟುಗೊಳ್ಳಬಾರದು. ಇನ್ನೊಂದು ವಾರದೊಳಗಾಗಿ ಸರಕಾರದಿಂದ ಪ್ರತ್ಯುತ್ತರ ಬರಬಹುದೆಂದು ನಿರೀಕ್ಷಿಸಲ್ಪಟ್ಟಿರುವುದು. ಅದು ತಲಪಿದ ಕೂಡಲೆ ತಮಗೆ ಬೇಕಾದಷ್ಟು ಹಣವನ್ನು ಸಲ್ಲಿಸುವೆನು. 'ಕಮು'

ತಾಂತಿಯಾ ಭಿಲ್ಲನು ಇವೆರಡು ಕಾಗದಗಳನ್ನೂ ಸಂಗ್ರಹಿಸಿಟ್ಟುಕೊಂಡನು. ಹುಡುಕಿದರೆ ಹೆಚ್ಚಿನ ಸಂಗತಿಗಳೇನಾದರೂ ಸಿಕ್ಕಬಹುದೆಂಬ ಆಸೆಯಿಂದ ಭಿಲ್ಲನು

ಕಾಗದಗಳನ್ನು ಮುಗುಚಿಹಾಕಿದನು. ಆವುದರಿಂದಲೂ ಏನೂ ಪ್ರಯೋಜನವಾಗಲಿಲ್ಲ. ಮಾಡಿದ ಕೆಲಸಕ್ಕೆ ಇಷ್ಟೇ ಪ್ರಯೋಜನವೆಂದು ತಿಳಿದು ಭಿಲ್ಲನು ಪೆಟ್ಟಿಗೆಯನ್ನು ಮೊದಲಿನಂತೆಯೇ ಮುಚ್ಚಿಬಿಟ್ಟನು. ಪ್ರಕೃತದಲ್ಲಿ ಸಿಕ್ಕಿರುವ ಆಧಾರದ ಮೇಲೆ "ರೋಗಿ ಯಾರು? ಕಮು ಎಂಬ ಗುರುತಿನವನಾರು?" ಎಂಬುದನ್ನು ಕಂಡು ಹಿಡಿಯಬೇಕೆಂದು ಚಿಂತಿಸುತ್ತಾ ಬಾಗಿಲ ಬಳಿಗೆ ಬಂದನು.

ಇಷ್ಟು ಹೊತ್ತಿಗೆ ಸರಿಯಾಗಿ ಬಾಗಿಲ ಹೊರಗೆ ಆರೋ ನಡೆದು ಬಂದ ಶಬ್ದವು ಕೇಳಿ ಬರಲು, ಭಿಲ್ಲನು ಬಾಗಿಲ ಒಂದು ಪಕ್ಕಕ್ಕೆ ಸರಿದು ಬಂದು ತನ್ನ ಪಿಸ್ತೂಲನ್ನು ತೆಗೆದುಕೊಂಡು ಸಮಯವನ್ನು ನಿರೀಕ್ಷಿಸುತ್ತಾ ನಿಂತುಕೊಂಡನು. ಅನಂತರದಲ್ಲಿ ವೈದ್ಯನು ಬಾಗಿಲನ್ನು ತೆರೆದುಕೊಂಡು ಕೋಣೆಯೊಳಗೆ ಪ್ರವೇಶ ಮಾಡಿದನು. ಅವನ ಮುಖದಲ್ಲಿ ಕೋಪವೂ ಆಶ್ಚರ್ಯವೂ ಉಕ್ಕಿ ಬರುವಂತಿದ್ದುವು. ಆಗ ಬಾಗಿಲ ಪಕ್ಕದಲ್ಲಿ ಕಳ್ಳನಂತೆ ನಿಂತಿದ್ದ ಭಿಲ್ಲನನ್ನು ನೋಡಿ ವೈದ್ಯನು ತನ್ನ ಪಿಸ್ತೂಲನ್ನು ಹೊರಗೆ ತೆಗೆದು ಭಿಲ್ಲನನ್ನು ಸುಟ್ಟು ಬೂದಿ ಮಾಡಿಬಿಡುವುದಾಗಿ ಮುಂದೆ ಬಂದನು. ರಪ್ಪೆಹಾಕುವುದರೊಳಗಾಗಿ ಭಿಲ್ಲನು ವೈದ್ಯನ ಮೇಲೆ ಬಿದ್ದು ತನ್ನ ಪಿಸ್ತೂಲಿನ ಹಿಡಿಯಿಂದ ಅವನ ತಲೆಯ ಮೇಲೆ ಒಂದು ಬಲವಾದ ಏಟನ್ನು ಕೊಟ್ಟನು. ಬಲವತ್ತರವಾದ ಈ ಪೆಟ್ಟಿನಿಂದ ವೈದ್ಯನು ಅರಚಿಕೊಳ್ಳುವುದಕ್ಕೆ ಕೂಡ ಉಸಿರಿಲ್ಲದವನಾಗಿ ವಿಲವಿಲನೆ ಒದೆದಾಡುತ್ತಾ ಜ್ಞಾನ ತಪ್ಪಿ ನೆಲದ ಮೇಲೆ ಬಿದ್ದುಬಿಟ್ಟನು.

ತಾಂತಿಯಾ ಭಿಲ್ಲನು ವೈದ್ಯನ ದುರವಸ್ಥೆಯನ್ನು ಪರೀಕ್ಷಿಸಿ ಒಂದೆರಡು ಗಂಟೆಗಳಾಗುವ ವರೆಗೂ ಆತನಿಗೆ ಜ್ಞಾನೋದಯವಾಗುವುದಿಲ್ಲವೆಂದು ನಿರ್ಧರಿಸಿದ ಬಳಿಕ, ವೈದ್ಯಶಾಲೆಯಲ್ಲಿಯೇ ಬಲು ಹೊತ್ತು ಕಾಲ ಕಳೆವುದಾದರೆ, ಸೇವಕರ ಕೋಪತಾಪಗಳಿಂದ ಆತ್ಮರಕ್ಷಣೆಯು ಅಸಾಧ್ಯವಾಗುವುದೆಂದು ತಿಳಿದು ಭಿಲ್ಲನು ತನ್ನ ಪದಾರ್ಥಗಳನ್ನು ತೆಗೆದುಕೊಂಡು ಕೋಣೆಯಿಂದ ಹೊರಗೆ ಬಂದು ಅದಕ್ಕೆ ಬೀಗ ಹಾಕಿ ಆವ ಗಲಭೆಗೂ ಆಸ್ಪದವಾಗದಂತೆ ಬೀದಿಗೆ ಬಂದುಬಿಟ್ಟನು. ಅಲ್ಲಿ ತಾನು ಕಳವು ಮಾಡಿದ ಪದಾರ್ಥಗಳು ಸರಿಯಾಗಿವೆಯೆಂದು ನೋಡಿಕೊಂಡು ಒಂದೇ ಉಸಿರಿನಲ್ಲಿ ಬಂದದಾರಿಹಿಡಿದು ಓಡುತ್ತಾ ಕೊಂಚ ಹೊತ್ತಿನೊಳಗಾಗಿ ಕತ್ತಲೆಯಲ್ಲಿ ಮಾಯವಾಗಿ ಬಿಟ್ಟನು.

ಅಕಾಲದಲ್ಲಿ ಅವನು ಹೋಗುವುದೆಲ್ಲಿಗೆ; ಏನ ಕೆಲಸಮಾಡಬೇಕು? ಇದೇ ಕೆಲಸದಲ್ಲಿಯೇ ಆವಾಗಲೂ ನಿರತನಾಗಿರುವವನಿಗೆ ಇದನ್ನು ಸಿದ್ಧಾಂತ ಪಡಿಸುವುದು ಅಸಾಧ್ಯವಾದ ಕೆಲಸವೇನೂ ಅಲ್ಲ. ಕೈಯಲ್ಲಿ ಹಣಕಾಸುಗಳೇನೂ ಇಲ್ಲದೆ ತೊಂದರೆ ಪಡತಕ್ಕವನಿಗಾದರೆ ಆವುದಾದರೊಂದು ಮಾರ್ಗವನ್ನು

ತಿಳಿಯ ಹೇಳಬಹುದು. ನಮ್ಮ ಭಿಲ್ಲನು ಈಗ ಅಂತಹ ದರಿದ್ರನೇನೂ ಅಲ್ಲ. ಒಂದು ಗಂಟೆಯಿಂದೀಚೆಗೆ ಅವನ ಜೇಬಿನ ತುಂಬಾ ಹಣಕಾಸುಗಳು ತುಂಬಿ ತುಳುಕಾಡುತ್ತಿರುವುವು. ಇಂಥವನಿಗೆ ಹೋಗುವುದಕ್ಕೆ ಸ್ಥಲವಿಲ್ಲವೇ? ಮಾಡು ವುದಕ್ಕೆ ಕೆಲಸ ತಾನೇ ಇಲ್ಲವೇ? ದುಡ್ಡಿದ್ದವನಿಗೆ ದೊಡ್ಡ ಪಟ್ಟಣವೆಂಬ ಗಾದೆ ಯನ್ನು ಭಿಲ್ಲನು ಚೆನ್ನಾಗಿಯೂ ಬಲ್ಲವನಾಗಿದ್ದನು. ಆದುದರಿಂದ ಅವನು ಮತ್ತೆ ರಾಜನಗರಕ್ಕೆ ಹೋಗಿ ಕೆಲವು ಕಾಲವಾದರೂ ಸುಖವಾಗಿರೋಣವೆಂದು ನಿಶ್ಚಯಿಸಿ ರಾಜಧಾನಿಯ ಕಡೆಗೆ ತೆರಳಿದನು. ದಾರಿಯುದ್ದಕ್ಕೂ ಅವನ ಆಲೋಚನೆಯೇನೆಂದರೆ—"ರಾಜನಗರದಲ್ಲಿ ಒಂದು ಪ್ರಶಸ್ತವಾದ ಪಾನಾ ಹಾರ ಮಂದಿರದಲ್ಲಿ ಕೋಣೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಮಿಷ್ಟಾನ್ನ ಭೋಜನಕ್ಕೆ ತಕ್ಕ ಆನುಕೂಲ್ಯವನ್ನು ಮೊದಲು ಕಲ್ಪಿಸಿಕೊಳ್ಳಬೇಕು. ಇದು ಒಂದು ಬಗೆಯಲ್ಲಿ ಸ್ಥಿರಪಟ್ಟಮೇಲೆ ದೊಡ್ಡ ಮನುಷ್ಯನಂತೆ ಆವಾಗಲೂ ವೇಷ ವನ್ನು ತಾಳಿಕೊಂಡು ನನಗೆ ಆಗಿ ಬಂದ ವ್ಯಾಪಾರದಲ್ಲಿ ಮೊದಲಿನಂತೆಯೇ ಕೈ ಹಾಕಿ, ಪೋಲೀಸಿನವರಿಗೆ ಮಣ್ಣಿಗೆ ಮಣ್ಣು ತಿನ್ನಿಸಬೇಕು; ಆ ತೊತ್ತಿನ ಮಗ ನಾದ ಅರಿಂದಮನನ್ನು ಬೊಂಬೆಯಂತೆ ಕುಣಿಸಬೇಕು; ಕಂಡ ಕಂಡವರ ಸ್ವತ್ತನ್ನು ಅಪಹರಿಸಿ ದಯಾದರಿದ್ರರಾಗಿ ಬಾಳುತ್ತಿರುವ ಹಣಗಾರರನ್ನು ಸುಲಿದುಸುಲಿದು, ಒಪ್ಪೊತ್ತಿನ ಕೂಳಿಗೂ ಮಾರ್ಗವಿಲ್ಲದೆ ಕಣ್ಣೀರಲ್ಲಿ ಕೈತೊಳೆಯು ತ್ತಿರುವ ಬಡಬಗ್ಗರಿಗೆ ಶಕ್ತಿ ಮೀರಿ ಉಪಕರಿಸಬೇಕು; ಅಲ್ಲದೆಯೂ ನಾನು ಕೊಂಚಮಟ್ಟಿಗಾದರೂ ಆಪದ್ಧನವನ್ನು ಶೇಖರಮಾಡಿಟ್ಟುಕೊಳ್ಳಬೇಕು; ಇರಲಿ.

'ಕಮ' ಎಂಬುವನಾರಿರಬಹುದು? ರೋಗಿಯನ್ನು ಕೊಲ್ಲಿಸಬೇಕೆಂಬ ದುರಭಿಸಂಧಿಯಿಂದ ಅವನಿಗಾಗತಕ್ಕ ಪ್ರಯೋಜನವೇನು? ವೈದ್ಯನಾದ ಮನೋಜಮೋಹನ ವಾಗೀಶನು ಹಣದ ಆಸೆಗಾಗಿ ಇಂತಹ ಕ್ರೂರಕೃತ್ಯವನ್ನು ಮಾಡುವುದಕ್ಕೆ ಒಪ್ಪಿಕೊಳ್ಳುವುದೆಂದರೇನು? ವೈದ್ಯರೇ ಹೀಗಾದ ಮೇಲೆ ಮನುಷ್ಯನು ಆರನ್ನು ನಂಬಿ ಬದುಕಬೇಕು? ತಾಯಿಯು ಮಕ್ಕಳಿಗೆ ವಿಷವ ನ್ನುಣ್ಣಿಸುವುದಾದರೆ ಮಕ್ಕಳ ಗತಿಯೇನು? ಇದನ್ನು ತಪ್ಪಿಸುವವರಾರೂ ಈ ಪ್ರಪಂಚದಲ್ಲಿಲ್ಲವೇ? ಸರಕಾರದವರ ದೃಷ್ಟಿಯಲ್ಲಿ ಇಂತಹ ಗೋಮುಖ ವ್ಯಾಘ್ರಗಳು ಯೋಗ್ಯರಂತೆ, ನಮ್ಮಂಥವರು ಅಯೋಗ್ಯರಂತೆ! ಇದಕ್ಕಾಗಿ ಅವರಿಗೆ ಪುರಸ್ಕಾರ, ನಮಗೆ ತಿರಸ್ಕಾರ. ಹಾ ದೈವವೇ! ಈಯನ್ಯಾಯವನ್ನು ಆರು ತಾನೇ ತಪ್ಪಿಸಬಲ್ಲರು? ಲೋಕವು ಹೇಗೆ ಬೇಕಾದರೂ ನಡೆದುಕೊಳ್ಳಲಿ; ನಾನಾದರೋ ದುಷ್ಟರ ದೋಷವನ್ನು ಉದ್ಘಾಟನೆಮಾಡಿ ಅವರಿಗೆ ಸರಿಯಾದ ಬುದ್ಧಿಯನ್ನೇ ಕಲಿಸಿಬಿಡುವೆನು."

* * * * * * * * *

ವೈದ್ಯವಿದ್ಯಾವಿಶಾರದನೆಂದು ಜಸವಡೆದ ಮನೋಜಮೋಹನ ವಾಗೀಶನು ತನ್ನ ವೆಚ್ಚದಿಂದ ಸ್ಥಾಪಿಸಿರುವ ಸೌಭಾಗ್ಯಮಂದಿರವೆಂಬ ಹುಚ್ಚರ ವೈದ್ಯಶಾಲೆಯು ರಾಜಧಾನಿಯಾದ ರಾಜನಗರಕ್ಕೆ ಐವತ್ತು ಮೈಲಿಗಳ ದೂರದಲ್ಲಿರುವುದು. ತಾಂತಿಯಾ ಭಿಲ್ಲನು ಸೌಭಾಗ್ಯಮಂದಿರದಿಂದ ರಾಜನಗರದ ಕಡೆ ಹೊರಟವನಾಗಿ ಬೆಳಗಾಗುವುದರೊಳಗೆ ಅರೆದಾರಿ ಸಾಗಿ ಬಂದನು. ಬೆಳಗಾದ ಕೂಡಲೆ ವಾಗೀಶನು ಕಳ್ಳನನ್ನು ಪತ್ತೆಮಾಡುವುದಕ್ಕಾಗಿ ನಾಲ್ಕು ದಿಕ್ಕುಗಳಲ್ಲಿಯೂ ಜನರನ್ನು ಕಳುಹದೇ ಬಿಡನೆಂಬುದನ್ನು ಭಿಲ್ಲನು ಚೆನ್ನಾಗಿಯೂ ಬಲ್ಲವನಾಗಿದ್ದನು. ಆದುದರಿಂದಲೇ ಆತನು ತಪ್ಪಿಸಿಕೊಳ್ಳುವ ಬಗೆಯನ್ನು ಆಲೋಚಿಸುತ್ತಾ ಹಿಂದೆ ಮುಂದೆ ನೋಡಿಕೊಂಡು ದಾರಿವಿಡಿದು ಬರುತ್ತಿದ್ದನು.

ಅಷ್ಟು ಹೊತ್ತಿಗೆ ಸರಿಯಾಗಿ ಭಿಲ್ಲನು ಹಿಂದಣಿಂದ ಬರುತ್ತಿದ್ದ ಗಾಡಿಯ ಶಬ್ದವನ್ನು ಕೇಳಿ ಹಿಂದಿರುಗಿ ನೋಡಲಾಗಿ ಒಂದು ಕುದುರೆಯ ಬಂಡಿ ಅತಿವೇಗದಿಂದ ತನ್ನ ಕಡೆಯೇ ಬರುತ್ತಿದ್ದಿತು. ಅವನು ಅದನ್ನು ಕಂಡನೋ ಇಲ್ಲವೋ ವೇಗವಾಗಿ ಓಡಿಹೋಗಿ ರಸ್ತೆಯ ಪಕ್ಕದಲ್ಲಿ ದಟ್ಟವಾಗಿ ಬೆಳೆದಿದ್ದ ಪೊದರಿನ ಹಿಂಗಡೆಯಲ್ಲಿ ಅವಿತುಕೊಂಡನು. ವಾಯುವೇಗದಿಂದ ಬರುತ್ತಿದ್ದ ಗಾಡಿಯು ಎಲ್ಲಿಯೂ ನಿಲ್ಲದೆ ಮುಂದಕ್ಕೆ ಹೊರಟೇ ಹೋಯಿತು. ಭಿಲ್ಲನು ಪೊದರಿನ ಸಂದುಗಳಿಂದಲೇ ಗಾಡಿಯಲ್ಲಿದ್ದವನು ವೈದ್ಯನೆಂದು ತಿಳಿದುಕೊಂಡವನಾಗಿ ಮುಂದಣ ಕರ್ತವ್ಯವನ್ನು ಪರ್ಯಾಲೋಚಿಸುತ್ತಾ ದೊಡ್ಡ ದೊಡ್ಡ ಬೀದಿಗಳಲ್ಲಿ ಸಂಚರಿಸುವುದು ಅಪಾಯಕರವೆಂದು ತಿಳಿದು ರಸ್ತೆಯನ್ನು ಬಿಟ್ಟು ಕಾಲುದಾರಿಯಿಂದ ಪಯಣಮಾಡತೊಡಗಿದನು. ದಾರಿಯಲ್ಲಿ ಹೋಗುತ್ತಿರುವಾಗ ಅವನ ಮನಸ್ಸಿಗೆ ಒಂದು ಸಂಶಯವು ಹೊಳೆಯಿತು. "ವೈದ್ಯನು ನನ್ನನ್ನು ಹಿಡಿಯುವುದಕ್ಕಾಗಿಯೇ ಹೊರಟಿರುವನೆಂದು ಗೊತ್ತಾಯಿತು. ಹಾಗಾದರೆ ಇವನು ರಾಜನಗರದ ಪೋಲೀಸಿನ ಅಧಿಕಾರಿಗಳಿಗೆ ಈ ದುರ್ಯೋಗವನ್ನು ತಿಳಿಸುವುದಕ್ಕಾಗಿ ಹೊರಟಿರುವನೇ? ಇಲ್ಲವೇ, ನನ್ನನ್ನು ಹುಡುಕುವುದಕ್ಕೆ ಹೊರಟಿರುವನೇ? ಇವನು ರಾಜನಗರಕ್ಕೆ ಹೋಗಿ ಪೋಲೀಸಿಗೆ ತಿಳಿಸಿ ಹಿಂದಿರುಗಿ ಬರಬೇಕಾದರೆ ಕಡೆಯ ಪಕ್ಷ ಒಂದು ದಿನವಾದರೂ ಬೇಕು. ತಾನೇ ಹುಡುಕುವುದಕ್ಕೆ ಹೊರಟಿರುವುದಾದರೆ, ಇವನು ಆವಾಗಲೂ ನನ್ನ ಬೆನ್ನ ಹತ್ತಿಯೇ ಇರುವನು,—ಎಂದ ಮೇಲೆ, ನನಗೆ ಅಡಿಗಡಿಗೂ ತೊಂದರೆಗಳೇ ಸಂಭವಿಸುವುವು. ಅದು ಕಾರಣ ನಾನು ಈ ವೇಷವನ್ನು ಮಾರ್ಪಡಿಸಿದಲ್ಲಿ, ನನ್ನನ್ನು ಗುರುತಿಸುವುದು ಅವನಿಗೆ ಸಾಧ್ಯವಿಲ್ಲದೇ ಹೋಗುವುದು. ಇದರಿಂದ ನನಗೆ ಕಾಲವು ಕೂಡಿಬರುವುದು. ನಾನು ಹೇಗಾದರೂ ಮಾಡಿ ರಾಜನಗರವನ್ನು ಸೇರಿಕೊಂಡೆನೆಂದರೆ, ಮೊಸಳೆಯು

ನೀರನ್ನು ಆಶ್ರಯಿಸಿಕೊಂಡಂತಾಗುವುದು. ಬಳಿಕ ನಾನಾರೋ, ಅವನಾರೋ, ನೋಡಿಕೊಳ್ಳುವ" ಭಿಲ್ಲನಿಗೆ ಈ ಬಗೆಯಾದ ಆಲೋಚನೆಯು ತಲೆ ದೋರಿದ ಮೇಲೆ ಕಾಲಹರಣಕ್ಕೆ ಅವಕಾಶಗುಡದೆ ಮತ್ತೊಂದು ವೇಷವನ್ನು ಧಾರಣಮಾಡಿ ಮುಂದಕ್ಕೆ ತೆರಳಿದನು. ಆಗ ಅವನ ತಲೆಯಲ್ಲಿ ಮತ್ತೊಂದು ವಿಷಯವು ಹೊಕ್ಕಿತು. "ಹಿಂದೆ ಹೇಳಿದ ಎರಡು ವಿಷಯಗಳನ್ನು ಸಿದ್ಧಾಂತ ಪಡಿಸಿಕೊಳ್ಳು ವುದಕ್ಕೆ ವೈದ್ಯನು ಮೊದಲು ತನ್ನ ಆಶ್ರಯದಾತನೊಬ್ಬನ ಬಳಿಗೆ ಹೋಗಿ ಅವನ ಸಲಹೆಯನ್ನು ಪಡೆದುಕೊಂಡು ಅದಕ್ಕನುಸಾರವಾಗಿ ಮುಂದಣ ಕಾರ್ಯ ವನ್ನು ಮಾಡಿದರೂ ಮಾಡಬಹುದು. ಇದೂ ನಿಜವಾಗುವುದಾದರೆ, ನಾನು ಆ ವ್ಯಕ್ತಿಯನ್ನೂ ಬಿಡದೆ ಹಿಂಡಿ ಹೀರಿಬಿಡುವೆನು. ನನ್ನ ಒಂದು ಕಲ್ಲಿನ ಏಟಿಗೆ ಮತ್ತೊಂದು ಹಣ್ಣೂ ಬೀಳುವುದಾದರೆ ನನಗೆ ಉಂಟಾಗಬಹುದಾದ ಕೊರತೆ ಯೇನು ? ನೋಡಿದರೆ, ಗ್ರಹಗಳು ನನಗೆ ಅನುಕೂಲವಾಗಿ ಸಂಚರಿಸುತ್ತಿರು ವಂತೆ ತೋರಿಬರುತ್ತಿರುವುವು. ಲಕ್ಷ್ಮೀಕಟಾಕ್ಷವು ಒದಗಿ ಬರುವುದಾದರೆ ಬರಲಿ, ಬೇಡವೆನ್ನುವರಾರು ?

ಭಿಲ್ಲನು ಹೀಗೆಲ್ಲಾ ಚಿಂತಿಸುತ್ತಾ ಬೆಳಗಾದ ಕೂಡಲೆ ಹತ್ತಿರದಲ್ಲಿಯೇ ಕಂಡುಬಂದ ಗ್ರಾಮದೊಳಗೆ ಪ್ರವೇಶಮಾಡಿ ಅಲ್ಲಿದ್ದ ಪಾನಾಹಾರಮಂದಿರಕ್ಕೆ ಹೋದನು. ಅಲ್ಲಿ ಜನರು ಆಗ ತಾನೇ ತಮ್ಮ ತಮ್ಮ ಕೆಲಸಕ್ಕೆ ತೊಡಗುತ್ತಿದ್ದರು. ಭಿಲ್ಲನು ಇವರನ್ನು ನೋಡಿ ಪ್ರಾತರಾಶ (ಬೆಳಗಿನ ಭೋಜನ) ವು ಎಷ್ಟು ಹೊತ್ತಿಗೆ ಸಿದ್ಧವಾಗುವುದೆಂದು ಕೇಳಿದನು. ನಿರೀಕ್ಷಿಸುವುದಾದರೆ, ಎಲ್ಲವೂ ಒಂದು ಗಂಟೆಯ ಕಾಲದೊಳಗಾಗಿಯೇ ಸಿದ್ಧವಾಗುವುವು ಎಂದು ಉತ್ತರ ಬಂದಿತು.

ಭಿಲ್ಲನು ಅಲ್ಲಿಯ ವರೆಗೂ ಸುಮ್ಮನಿರುವುದಕ್ಕಿಂತಲೂ ನಿದ್ದೆಯನ್ನಾದರೂ ಮಾಡೋಣವೆಂದೆಣಿಸಿ ಸುಖಾಸನದ ಮೇಲೆ ಕುಳಿತುಕೊಂಡೇ ನಿದ್ರಾದೇವಿಗೆ ವಶ ನಾದನು. ಅರ್ಧಘಂಟೆಯೆನ್ನುವುದರೊಳಗಾಗಿ ಭೋಜನವನ್ನು ಸಿದ್ಧಪಡಿಸಿಟ್ಟು, ಸೇವಕನು ಬಂದು ಭಿಲ್ಲನನ್ನು ಎಚ್ಚರಗೊಳಿಸಿದನು. ಬಳಿಕ ಭಿಲ್ಲನು ತೃಪ್ತಿಯಾಗಿ ಭೋಜನಮಾಡಿ ಅದಕ್ಕೆ ತಕ್ಕಷ್ಟು ಬೆಲೆಯನ್ನು ಸಲ್ಲಿಸಿ ಆಗ್ರಾಮದ ಸಮೀಪದಲ್ಲಿದ್ದ ರೈಲಿಗೆ ಬಂದನು. ಅಷ್ಟು ಹೊತ್ತಿಗೆ ಸರಿಯಾಗಿ ರೈಲುಗಾಡಿಯು ರಾಜನಗರಕ್ಕೆ ಹೊರಡುವುದರಲ್ಲಿದ್ದಿತು. ಭಿಲ್ಲನು ಟಿಕೆಟನ್ನು ಕೊಂಡುಕೊಂಡು ಗಾಡಿ ಹತ್ತಿದನು. ಇವನು ಹತ್ತಿದ ಗಾಡಿಯಲ್ಲಿ ಮತ್ತಾವ ಮನುಷ್ಯನೂ ಇರಲಿಲ್ಲ. ಇದೂ ಅನು ಕೂಲವೇ ಆಯಿತೆಂದು ಭಿಲ್ಲನು ಗಾಡಿ ಹೊರಟಕೂಡಲೆ ಮತ್ತೊಂದು ಬಗೆಯ ವೇಷವನ್ನು ತಾಳಿಕೊಂಡನು. ಈ ವೇಷದಿಂದ ಇವನು ಕೊಬ್ಬಿದ ಯುವಕನಂ ತಾದನು. ಎಂತಹ ಸ್ನೇಹಿತನಾದರೂ ಇವನನ್ನು ಈ ವೇಷದಲ್ಲಿ ಗುರುತಿಸುವುದು

ಸಾಧ್ಯದ ಮಾತಾಗಿರಲಿಲ್ಲ. ಕಾರಣವೇನೆಂದರೆ—ಇವನು ಬಹುದೂರದಿಂದ ಬಂದ ಪರದೇಶದವನಂತೆ ಕಾಣಿಸತೊಡಗಿದನು.

ರೈಲು ಗಾಡಿಯು ಸಮಯಕ್ಕೆ ಸರಿಯಾಗಿ ರಾಜನಗರಕ್ಕೆ ಬಂದು ಸೇರಿತು. ಭಿಲ್ಲನು ರೈಲಿನಿಂದಿಳಿದು ಜನರ ಗುಂಪಿನೊಳಗೆ ಸೇರಿಕೊಂಡು ನಗರಾಭಿಮುಖವಾಗಿ ತೆರಳಿದನು. ದಾರಿಯಲ್ಲಿ ಭಿಲ್ಲನು ಹೋಗುತ್ತಿರುವಾಗ ತಟ್ಟನೆ ಆವುದೋ ಒಂದು ವ್ಯಕ್ತಿಯನ್ನು ನೋಡಿ ಕೂಡಲೆ ತನ್ನ ಮುಖವನ್ನು ಮತ್ತೊಂದು ದಿಕ್ಕಿಗೆ ತಿರುಗಿಸಿಕೊಂಡು ಹೊರಟನು. ಇವನ ಕಣ್ಣಿಗೆ ಬಿದ್ದ ಆ ವ್ಯಕ್ತಿಯೇ ನಮ್ಮ ಪೂರ್ವ ಪರಿಚಿತನಾದ ವೈದ್ಯವಿದ್ಯಾ ವಿಶಾರದ ಮನೋಜಮೋಹನ ವಾಗೀಶನು. ವೈದ್ಯನು ಕಳ್ಳನನ್ನು ಹುಡುಕುವುದಕ್ಕಾಗಿಯೇ ಈ ಬಳಿ ಬಂದು ನಿಂತುಕೊಂಡು ಒಬ್ಬೊಬ್ಬನನ್ನೂ ನೋಡಿದನು. ವೈದ್ಯನು ಕಳ್ಳನನ್ನು ನೋಡಿದರೂ, ಗುರುತಿಸಲಾರದವನಾಗಿ ಸುಮ್ಮನಿದ್ದು ಬಿಟ್ಟನು. ಭಿಲ್ಲನು ಆಪತ್ತಿನಿಂದ ಪಾರಾದೆನೆಂದು ತಿಳಿದವನಾಗಿ ತನ್ನದಾರಿ ವಿಡಿದು ಮುಂದಕ್ಕೆ ಹೊರಟೇ ಹೋದನು.

ಭಿಲ್ಲನು ಕೊಂಚದೂರ ಹೋದ ಬಳಿಕ ಗಾಡಿಯನ್ನು ಬಾಡಿಗೆಗೆ ತೆಗೆದುಕೊಂಡು ಒಂದು ಸಾಮಾನ್ಯವಾದ ಪಾನಾಹಾರಮಂದಿರಕ್ಕೆ ತೆರಳಿದನು. ಅಲ್ಲಿ ಮಂದಿರದ ಯಜಮಾನನನ್ನು ಕಂಡು ಸುಳ್ಳಿನ ಹೆಸರನ್ನು ಬರೆಯಿಸಿ ಬಾಡಿಗೆಗೆ ಒಂದು ಕೋಣೆಯನ್ನು ಏರ್ಪಡಿಸಿಕೊಂಡು ಅಲ್ಲಿ ಸಿದ್ಧವಾಗಿದ್ದ ಹಾಸುಗೆಯ ಮೇಲೆ ಬಂದು ಮಲಗಿದನು. ರಾತ್ರಿಯೆಲ್ಲಾ ಆಯಾಸಪಟ್ಟಿದ್ದುದರಿಂದ ಗಾಢನಿದ್ರೆಯು ಅವನನ್ನು ಆವರಿಸಿ ಬಿಟ್ಟಿತು.

---

## ಮೂರನೆಯ ವಿಲಾಸ

### ನೂತನ ಪಿಶಾಚ

ತಾಂತಿಯಾ ಭಿಲ್ಲನು ಮಧ್ಯಾಹ್ನದ ಭೋಜನವಾದ ನಂತರದಲ್ಲಿ ಕೆಲವು ಪದಾರ್ಥಗಳನ್ನು ಕೊಳ್ಳುವುದಕ್ಕಾಗಿ ಅಂಗಡಿಗೆ ಹೋದನು. ಅಲ್ಲಿ ತನಗೆ ಬೇಕಾದ ಅಮೂಲ್ಯವಾದ ಉಡುಗೆತೊಡುಗೆಗಳನ್ನೂ ಒಂದು ಹೊಸತೆರನಾದ ಕೈಚೀಲವನ್ನೂ ಕೊಂಡುಕೊಂಡು, ಅಲ್ಲಿಯೇ ಆ ನೂತನ ವಸ್ತ್ರವನ್ನು ಧಾರಣಮಾಡಿ ತನ್ನ ಹಳೆಯ ಬಟ್ಟೆಬರೆಗಳನ್ನು ಆ ಹೊಸ ಕೈಚೀಲದಲ್ಲಿ ತುಂಬಿ, ಅದನ್ನು ಪ್ರಸಿದ್ಧವಾದ ರಾಜರಾಜೇಶ್ವರೀ ಪಾನಾಹಾರಮಂದಿರಕ್ಕೆ ಕುಳುಹಿ ಅದರೊಡನೆಯೇ ಆ ಮಂದಿರದ ಯಜಮಾನನಿಗೆ ತಾನು ಬರುವುದರೊಳಗಾಗಿ ತನಗೊಂದು ಅತ್ಯುತ್ತಮವಾದ

ಕೋಣೆಯನ್ನು ಸಿದ್ಧಪಡಿಸಿಟ್ಟಿರತಕ್ಕದೆಂದು ಒಂದು ಕಾಗದವನ್ನೂ ಬರೆದು ಅದರ ಕೆಳಗೆ "ಸಂಗ್ರಾಮ ಸಿಂಹ" ಎಂಬ ಹೆಸರೊಂದನ್ನು ಗುರುತಿಸಿ ಕೊಟ್ಟನು.

ಸಾಯಂಕಾಲಕ್ಕೆ ಸರಿಯಾಗಿ ಸಂಗ್ರಾಮ ಸಿಂಹನಾದ ತಾಂತಿಯಾ ಭಿಲ್ಲನು ರಾಜರಾಜೇಶ್ವರೀ ಮಂದಿರಕ್ಕೆ ಬಂದು ನೋಡುವಲ್ಲಿ ಅವನಿಗಾಗಿ ಸುಸಜ್ಜಿತವಾದ ಕೋಣೆಯೊಂದು ಏರ್ಪಡಿಸಲ್ಪಟ್ಟಿದ್ದಿತು. ಸಂಗ್ರಾಮಸಿಂಹನು ಆ ಕೋಣೆಯನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅದರೊಳಗೆ ಪ್ರವೇಶಮಾಡಿದ ಬಳಿಕ, ಒಂದು ಸುಖಾಸನದ ಮೇಲೆ ಕುಳಿತು ವೈದ್ಯನ ಮನೆಯಲ್ಲಿ ಸಂಗ್ರಹಿಸಿದ ಎರಡು ಕಾಗದಗಳನ್ನೂ ಹೊರಗೆ ತೆಗೆದು ಅವನ್ನು ಪರೀಕ್ಷಿಸುವುದಕ್ಕೆ ಮೊದಲು ಮಾಡಿದನು. ಒಂದು ಕಾಗದವು ರಾಜನಗರದ ಗಣಪತಿ ಮೊಹಲ್ಲಾದಿಂದಲೂ ಮತ್ತೊಂದು ಕಾಗದವು ಈಶ್ವರೀದುರ್ಗದಿಂದಲೂ ಬರೆಯಲ್ಪಟ್ಟಿದ್ದಂತೆ ಗೋಚರಕ್ಕೆ ಬಂದಿತು. ಈಶ್ವರೀದುರ್ಗವಾವುದೆಂಬುದನ್ನು ಕುರಿತು ಅವನು ಬಲು ಹೊತ್ತು ಚಿಂತಿಸಿ ನೋಡಿದರೂ, ಅದರ ವಿಚಾರವು ಅವನ ತಿಳಿವಿಗೆ ಬರಲೇ ಇಲ್ಲ. ಇದರ ವಿಚಾರವದಂತಿರಲಿ, ಎಂದು ಅವನು ಬೇರೊಂದು ಕೆಲಸದಲ್ಲಿ ಮಗ್ನನಾಗಿದ್ದು ಬಿಟ್ಟನು.

ಸಂಗ್ರಾಮಸಿಂಹನೆಂಬ ಸುಳ್ಳು ಹೆಸರಿನ ತಾಂತಿಯಾ ಭಿಲ್ಲನು ಒಂದು ಗಂಟೆಯ ಕಾಲದ ವರೆಗೂ ಆವಾವುದನ್ನೋ ಚಿಂತಿಸುತ್ತಿದ್ದ ಬಳಿಕ, ಸಮೀಪದಲ್ಲಿದ್ದ ವಾಚನಾಲಯಕ್ಕೆ ಹೋಗಿ ಸೂರ್ಯ ಪ್ರಕಾಶವೆಂಬ ದೈನಂದಿನ ಪತ್ರಿಕೆಯ ಹಿಂದಣ ಸಂಚಿಕೆಗಳನ್ನು ಹುಡುಕುತ್ತಾ ಕುಳಿತನು. ಸ್ವತ್ವಾಧಿಕಾರದ ವಿಷಯದಲ್ಲಿ ಸರಕಾರದವರ ಒಪ್ಪಿಗೆಯೆಂಬ ವಿಚಾರವೇನಾದರೂ ಇದ್ದಲ್ಲಿ ಅದನ್ನು ನೋಡಬೇಕೆಂಬುದೇ ಆತನ ಮುಖ್ಯೋದ್ದೇಶವಾಗಿದ್ದಿತು. ಇದಕ್ಕಾಗಿ ಮೂರು ತಿಂಗಳಿಂದೀಚೆಗೆ ಬಂದಿರುವ ಪತ್ರಿಕೆಗಳೆಲ್ಲವನ್ನೂ ಒಂದೊಂದಾಗಿ ನೋಡುವುದಕ್ಕೆ ಮೊದಲು ಮಾಡಿದನು. ಹೀಗೆ ನೋಡುತ್ತಿರುವಲ್ಲಿ ಆವುದೋ ಒಂದು ಪತ್ರಿಕೆಯಲ್ಲಿ "ಈಶ್ವರೀ ದುರ್ಗದ ಉತ್ತರಾಧಿಕಾರಿ ಯಾರು ?" ಎಂಬ ದೊಡ್ಡಕ್ಷರದ ಶಿರೋನಾಮವುಳ್ಳ ಲೇಖನವೊಂದು ಗೋಚರಿಸಿತು. "ಈಶ್ವರೀ ದುರ್ಗ !" ಅಹುದು ; ಕಮ ಎಂಬುವನು ಈಶ್ವರೀದುರ್ಗದಿಂದ ವೈದ್ಯನಿಗೆ ಬರೆದಿರುವ ಕಾಗದವು ನನ್ನ ಬಳಿಯಲ್ಲಿಯೇ ಇರುವುದು. ಈ ವೃತ್ತಾಂತ ಪತ್ರಿಕೆಯಲ್ಲಿ 'ಈಶ್ವರೀ ದುರ್ಗದ ಉತ್ತರಾಧಿಕಾರಿಯಾರು ? ' ಎಂದು ಉಲ್ಲೇಖಿಸಲ್ಪಟ್ಟಿರುವುದು. ಅದಕ್ಕೂ ಇದಕ್ಕೂ ಸಂಬಂಧವೇನಾದರೂ ಇರಬಹುದೇ ? ಇರಲಿ ; ಈ ವಿಷಯವನ್ನು ಪೂರ್ತಿಯಾಗಿ ಓದಿ ನೋಡುವ, ಎಂದುಕೊಂಡು ಓದ ತೊಡಗಿದನು. ಆ ವಿಷಯವು ಈ ರೀತಿಯಲ್ಲಿದ್ದಿತು :—

"ಕಲ್ಯಾಣಮಲ್ಲನೆಂಬಾತನು ತನ್ನ ದೊಡ್ಡಪ್ಪನ ಮಗನಾದ ಶ್ರೀಕುಮಾರನ ಸಮಸ್ತವಾದ ಆಸ್ತಿಪಾಸ್ತಿಗಳಿಗೂ ತಾನೇ ಉತ್ತರಾಧಿಕಾರಿಯಾಗಿರುವುದರಿಂದ ಸರಕಾರದವರು ಈ ಸ್ವತ್ವಾಧಿಕಾರದ ಒಪ್ಪಿಗೆಯನ್ನು ದಯೆಪಾಲಿಸಬೇಕೆಂದು ಪ್ರಾರ್ಥಿಸಿಕೊಂಡಿರುವನು. ಶ್ರೀಕುಮಾರನೆಂಬುವನು ಪರದೇಶಕ್ಕೆ ಹೋಗಿ ಅಲ್ಲಿ ಪ್ರಾಣವನ್ನು ಬಿಟ್ಟನೆಂದು ಲೋಕದ ಸುದ್ದಿಯೆದ್ದಿರುವುದು. ಇದಕ್ಕೆ ಅನುಗುಣವಾಗಿ ಸರಕಾರದವರೂ ಕಲ್ಯಾಣಮಲ್ಲ ಮಹಾಶಯನಿಗೆ ಈಶ್ವರೀದುರ್ಗದ ಸ್ವತ್ವಾಧಿಕಾರದ ವಿಷಯದಲ್ಲಿ ತಮ್ಮ ಸಮ್ಮತಿಯಿತ್ತಿರುವರು. ಈಶ್ವರೀದುರ್ಗವೆಂಬುದು ಪುರಾತನವಾದದೊಂದು ವಿಸ್ತಾರವಾದ ಜಹಗೀರಿಯು. ಈ ಜಹಗೀರಿಯು ರಾಜನಗರಕ್ಕೆ ಅಷ್ಟೇನೂ ದೂರದಲ್ಲಿರುವುದಿಲ್ಲ ಇದರಿಂದ ವರ್ಷವೊಂದರಲ್ಲಿ ಅಪರಿಮಿತವಾದ ಸಂಪತ್ತಿನ ಹುಟ್ಟುವಳಿಯಿರುವುದು. ಹಿಂದಣ ಯಜಮಾನನು ಪುತ್ರಹೀನನಾಗಿ ಮಡಿದು ಹೋದುದರಿಂದ ಶ್ರೀಕುಮಾರನಿಗೆ ಅದರ ಉತ್ತರಾಧಿಕಾರವು ಸಂದಿತು. ಅನುಭವಿಸುವುದಕ್ಕೆ ಯೋಗವಿಲ್ಲದ ಶ್ರೀಕುಮಾರನೂ ಅಕಾಲಮೃತ್ಯುವಿಗೆ ತುತ್ತಾದುದರಿಂದ, ಈ ಜಹಗೀರಿಯ ಸಂಪೂರ್ಣಾಧಿಕಾರವು ಕಲ್ಯಾಣಮಲ್ಲ ಮಹಾಶಯನ ಕೈಸೇರುವುದಕ್ಕೆ ಆಸ್ಪದವಾಯಿತು. ಸುಖಸಂಪತ್ತುಗಳನ್ನು ಅನುಭವಿಸುವುದಕ್ಕೆ ಆರಿಗಾದರೂ ಲಭ್ಯವಿರಬೇಕು."

ತಾಂತಿಯಾ ಭಿಲ್ಲನು ಈ ಸಮಾಚಾರವನ್ನು ಓದಿದ ಕೂಡಲೆ ಪರಮಾನಂದಭರಿತನಾದನು. ಆಗ ಅವನ ಮನದಲ್ಲಿ ಹೊಳೆದುದೇನೆಂದರೆ—"ಈಶ್ವರೀದುರ್ಗವು ರಾಜನಗರಕ್ಕೆ ಸೇರಿದ ದೊಡ್ಡ ಜಹಗೀರಿ ಎಂಬುದರಲ್ಲಿ ಆವ ಸಂಶಯವೂ ಇರುವುದಿಲ್ಲ. ನಾನು ಸ್ವಲ್ಪ ಬುದ್ಧಿಯನ್ನು ವೆಚ್ಚಮಾಡುವುದಾದರೆ, ಈ ಜಹಗೀರಿಯಲ್ಲಿ ಹನ್ನೆರಡಾಣೆಯ ಭಾಗದಷ್ಟು ಸಂಪತ್ತನ್ನು ನಾನೇ ಅನುಭವಿಸಬಹುದು. ಇಂತಹ ಸುಯೋಗವನ್ನು ಕಳೆದುಕೊಳ್ಳುವುದಕ್ಕೆ ಆರು ತಾನೇ ಇಷ್ಟಪಟ್ಟಾರು? ಒಳಗುಟ್ಟು ಈ ತೆರನಾಗಿರುವುದು. ಕಲ್ಯಾಣಮಲ್ಲನೆಂಬುವನ ದೊಡ್ಡಪ್ಪನ ಮಗನಾದ ಶ್ರೀಕುಮಾರನೆಂಬುವನೇ ಈ ಜಹಗೀರಿಗೆ ಸರ್ವಸ್ವಾಧಿಕಾರಿಯು. ಶ್ರೀಕುಮಾರನಿನ್ನೂ ಸತ್ತಿಲ್ಲ. ನರಪಿಶಾಚನಾದ ಕಲ್ಯಾಣಮಲ್ಲನು ಈ ಸ್ವತ್ತನ್ನು ತಾನೇ ಅಪಹರಿಸಬೇಕೆಂದು ವೈದ್ಯನಾದ ಮನೋಜಮೋಹನವಾಗೀಶನ ಸಾಹ್ಯವನ್ನು ಪಡೆದುಕೊಂಡು ಶ್ರೀಕುಮಾರನನ್ನು ಹುಚ್ಚರ ವೈದ್ಯಶಾಲೆಯಲ್ಲಡಿಸಿರುವನು. ಇವರು ಎಂತಹ ಪಿಶಾಚರಿರಬೇಕು? ಕಾಲವನ್ನು ಕಂಡ ವೈದ್ಯನು ಅಲ್ಪವಾದ ಹಣಕ್ಕೆ ಆಸೆಬಿದ್ದು ಇಂತಹ ಘೋರವಾದ ಕೃತ್ಯವನ್ನು ಮಾಡಲು ಕೈನೀಡುವನೇ? ಆಲೋಚಿಸಿ ನೋಡಿದರೆ, ವೈದ್ಯನು ಜಹಗೀರುದಾರನಿಂದ ಅಪರಿಮಿತವಾದ ಹಣವನ್ನು ಸೆಳೆವುದಕ್ಕಾಗಿಯೇ ಶ್ರೀಕುಮಾರನನ್ನು ಇನ್ನೂ ಕೊಲ್ಲುವುದಕ್ಕೆ ಮನಸ್ಸು ಮಾಡಿಲ್ಲ. ತನ್ನ ಇಷ್ಟಕ್ಕೆ ಸರಿಯಾಗಿ ಹಣಕಾಸುಗಳು

ಬಾರದಿದ್ದಲ್ಲಿ, ಜಹಗೀರುದಾರನನ್ನು ಆಟವಾಡಿಸಿ ಕೋತಿಯಂತೆ ಕುಣಿಸುವುದಕ್ಕಾಗಿ ಶ್ರೀಕುಮಾರನನ್ನು ಇನ್ನೂ ಕೊಲ್ಲದೆ ನಿರ್ಬಂಧದಲ್ಲಿಟ್ಟುಕೊಂಡಿರುವನು. ನಾನು ತಡಮಾಡುವುದಾದರೆ ಮುಂದೆ ಅನರ್ಥಗಳು ಆವ ಬಗೆಯಾಗಿ ಪರಿಣಮಿಸುವುವೋ ಹೇಳುವುದಕ್ಕಾಗಲಾರದು. ಆದುದರಿಂದ ನಾನು ಸೊಂಟಕಟ್ಟಿ ರಂಗಭೂಮಿಯಲ್ಲಿ ಮುಂದು ವರಿಯುವೆನು.'' ಎಂಬುದಾಗಿ ಭಿಲ್ಲನು ಸಿದ್ಧಾಂತಪಡಿಸಿಕೊಂಡವನಾಗಿ ವಾಚನಾಲಯವನ್ನು ಬಿಟ್ಟು ತನ್ನ ಆವಾಸಸ್ಥಾನಕ್ಕೆ ಹಿಂದಿರುಗಿದನು. ದಾರಿಯುದ್ದಕ್ಕೂ ಅವನು ನಿರ್ಮಿಸಿದ ಮನೋರಥ ಪ್ರಪಂಚವನ್ನು ವರ್ಣಿಸುವುದು ನಮ್ಮಂತಹ ಸಾಮಾನ್ಯರಿಗೆ ಸಾಧ್ಯವಲ್ಲ. ಒಬ್ಬೊಬ್ಬನೂ ದುರಾಶೆಗೆ ಒಳಪಟ್ಟು ಒಂದೊಂದು ವೇಳೆ ಗಗನ ನಗರವನ್ನು ಕಟ್ಟಲೆಣಿಸುವನು. ಇದರಿಂದ ಪ್ರಯೋಜನವೇನೋ ತಿಳಿಯಲೊಲ್ಲದು. ಅಶಕ್ತನಾದ ಮಾನವನಲ್ಲಿ ಇಂತಹ ಅಪರಿಮಿತವಾದ ದುರಾಶೆಯನ್ನು ಕಲ್ಪಿಸಿದ ಭಗವಂತನ ಅಭಿಪ್ರಾಯವಾದರೂ ಏನಿರಬಹುದೋ ಆ ಭಗವಂತನೊಬ್ಬನೇ ಬಲ್ಲನು.

ಸಂಗ್ರಾಮಸಿಂಹನೆಂದು ಕರೆಯಲ್ಪಡುವ ತಾಂತಿಯಾ ಭಿಲ್ಲನು ತನ್ನ ಕೋಣೆಗೆ ಬಂದು ಬಾಗಿಲನ್ನು ಮುಚ್ಚಿಕೊಂಡು ಈಶ್ವರೀ ದುರ್ಗಕ್ಕೆ ಒಡೆಯನಾದ ಕಲ್ಯಾಣಮಲ್ಲ ಮಹಾಶಯನಿಗೆ ಇದರಡಿಯಲ್ಲಿ ನಿರೂಪಿಸಿರುವಂತೆ ಪತ್ರವನ್ನು ಬರೆದನು :—

"ಪ್ರಿಯ ಮಹಾಶಯ ! ನಾವಿಬ್ಬರೂ ಪರಸ್ಪರವಾಗಿ ಅಪರಿಚಿತರಾಗಿರುವೆವು. ಅಪರಿಚಿತನಾದ ಆವನೋ ಒಬ್ಬನು ಈ ಪತ್ರವನ್ನು ಬರೆದಿರುವನೆಂದು ತಾವು ಮನದಲ್ಲಿ ಅಸಮಾಧಾನ ಪಡಲಾಗದು ; ಹಾಗೂ ನನ್ನ ಅಭಿಪ್ರಾಯವನ್ನು ಸಂಪೂರ್ಣವಾಗಿ ತಿಳಿದುಕೊಳ್ಳದೆಯೇ ಈ ಪತ್ರವನ್ನು ಹರಿದು ಬಿಸುಡಲಾಗದು. ಇದೇ ನನ್ನ ಪ್ರಥಮ ಪ್ರಾರ್ಥನೆಯು. ತಮ್ಮ ಮುಂದಣ ಲಾಭ ನಷ್ಟಗಳಾಗಲಿ, ಮಂಗಳಾಮಂಗಳಗಳೇ ಆಗಲಿ, ನನ್ನ ಈ ಪತ್ರದ ಆಧಾರದ ಮೇಲೆಯೇ ನಡೆಯತಕ್ಕುವುಗಳಾದ ಕಾರಣ, ತಾವು ಈ ವಿಷಯವನ್ನು ಚೆನ್ನಾಗಿಯೂ ಜ್ಞಾಪಕದಲ್ಲಿಟ್ಟಿರತಕ್ಕುದು. ಇಷ್ಟರಲ್ಲಿಯೇ ನಾನು ತಮ್ಮಲ್ಲಿಗೆ ಬಂದು ತಮ್ಮ ದರ್ಶನವನ್ನು ತೆಗೆದುಕೊಳ್ಳಬೇಕಾದ ಆವಶ್ಯಕತೆಯು ಒದಗಿಬಂದಿರುವುದು. ಇದಕ್ಕೆ ಸಂಬಂಧಪಟ್ಟ ಮಹತ್ತಾದ ಕಾರಣವು ಕೂಡ ನನ್ನನ್ನು ಈ ಕಾರ್ಯದಲ್ಲಿ ತಡಮಾಡದೆ ಮುಂದುವರಿಯುವಂತೆ ಪ್ರೇರಿಸುತ್ತಿರುವುದು. ಇಷ್ಟರಿಂದಲೇ ನಿಮಗೆ ವಿಷಯವೆಂಥವೆಂಬುದು ಗೋಚರಕ್ಕೆ ಬಂದರೂ ಬರಬಹುದು. ಆದರೂ ನಾನು ನನ್ನ ಉದ್ದೇಶವನ್ನು ತಿಳಿಸಲೇಬೇಕಾಗಿರುವುದರಿಂದ, ಈಗ ಅದನ್ನು ತಿಳಿಯಪಡಿಸಿಕೊಳ್ಳುವೆನು. ಅದೇನೆಂದರೆ—

ಹುಚ್ಚರ ವೈದ್ಯಶಾಲೆಗೆ ಅಧ್ಯಕ್ಷನಾದ ವೈದ್ಯವಿದ್ಯಾವಿಶಾರದ ಮನೋಜ ಮೋಹನ ವಾಗೀಶನ ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರಪಡಿಸಲ್ಪಟ್ಟಿದ್ದ ಕಮ ಎಂಬ ಸಂಕೇತಾಕ್ಷರಗಳ ಗುರುತುಳ್ಳ ಎರಡು ಪತ್ರಗಳು ನನ್ನ ಕೈಸೇರಿರುವುವು. ಅವೆರಡು ಪತ್ರಗಳೂ ನನ್ನ ಕೈಸೇರಿದ ಬಗೆ ಹೇಗೆಂಬುದನ್ನು ನೀವು ತಿಳಿಯುವುದಕ್ಕೆ ತತ್ತರಪಡುತ್ತಿರಬಹುದು. ನಾನು ತಮ್ಮ ದರ್ಶನವನ್ನು ತೆಗೆದುಕೊಳ್ಳುವು ದಕ್ಕೆ ಬಂದ ಕಾಲದಲ್ಲಿ ಸಮಯವಿದ್ದರೆ ಇದರ ಕಾರಣವನ್ನು ತಿಳಿಯಪಡಿಸಿ ಕೊಳ್ಳುವೆನು. ನೀವು ಈ ಕಾರಣವನ್ನು ಭೇದಿಸುವುದಕ್ಕೆ ಪ್ರಯತ್ನಮಾಡುವುದ ಕ್ಕಿಂತಲೂ, ಮುಂದೆ ಬರಬಹುದಾದ ಅಮಂಗಳ ಪರಂಪರೆಯನ್ನು ಹೋಗ ಲಾಡಿಸಿಕೊಳ್ಳುವುದಕ್ಕೆ ಈಗಳಿಂದಲೂ ಯತ್ನಮಾಡುವುದು ಯುಕ್ತಿ ಯುಕ್ತವಾ ಗಿರುವುದು. ಈಯಭಿಪ್ರಾಯವು ತಮಗೆ ಸೂಕ್ತವಾಗಿ ಕಂಡುಬರುವುದಾದರೆ, ಈ ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ ಸರಿಯಾಗಿ ರಾಜರಾಜೇಶ್ವರೀ ಮಂದಿರಕ್ಕೆ ಬಂದು ನನಗೆ ತಮ್ಮ ದರ್ಶನಲಾಭವನ್ನುಂಟುಮಾಡಿಕೊಡ ತಕ್ಕುದು. ನಾನೂ ತಮ್ಮ ಆಗಮನವನ್ನೇ ನಿರೀಕ್ಷಿಸಿಕೊಂಡಿರುವೆನು. ಆರೋ ಏನನ್ನೋ ಬರೆ ದಿರುವರೆಂದು ಮಟ್ಟಿಗೆ ಉದಾಸೀನತೆಯಿಂದಿರಲಾಗದು, ಇತಿ

ತಮ್ಮ ಏಕಾಂತ ವಿಶ್ವಾಸಿ “ಸಂಗ್ರಾಮ ಸಿಂಹ.”

ಭಿಲ್ಲನು ಈ ರೀತಿಯಾಗಿ ಒಕ್ಕಣೆಯನ್ನು ಬರೆದು ಆ ಕಾಗದವನ್ನು ಅಂಚೆಗೆ ಕಳುಹಿ ಮುಂದಣ ಕರ್ತವ್ಯವನ್ನು ಚಿಂತಿಸುತ್ತಾ ಕೊಂಚ ಹೊತ್ತು ಹಾಗೆಯೇ ಕುಳಿತುಕೊಂಡಿದ್ದನು.

* * * * * * * *

ಅದೇ ದಿನ ಕಲ್ಯಾಣಮಲ್ಲನ ದೇಹದ ಸ್ಥಿತಿಯು ಸರಿಯಾಗಿರಲಿಲ್ಲ. ಆತನ ದೇಹ ಮಾತ್ರವೇ ಅಲ್ಲ, ಆತನ ಮನವೂ ಆವುದೋ ಕಾರಣದಿಂದ ದುಃಖ ಗೊಂಡಿದ್ದಿತು. ಉನ್ಮಾರ್ಗಗಾಮಿಯೂ, ವ್ಯಸನಾಸಕ್ತನೂ, ದುಶ್ಚರಿತ್ರನೂ ಆದ ಹಣಗಾರನಿಗೆ ಆವಾವ ಆಧಿವ್ಯಾಧಿಗಳು ಸಂಭವಿಸಬಹುದೋ ಅವೆಲ್ಲವೂ ಕಲ್ಯಾಣಮಲ್ಲನಲ್ಲಿಯೂ ಪರಿಪೂರ್ಣಭಾವದಿಂದಿರುತಿದ್ದುವು. ಕಾರಣವೇನೆಂದರೆ— ಆತನು ಹಿಂದಣ ರಾತ್ರಿಯಲ್ಲಿ ಯಥೇಚ್ಛವಾಗಿ ಮದ್ಯಪಾನವನ್ನು ಮಾಡಿ ಜೂಜಾಟದಲ್ಲಿ ಹತ್ತೆಂಟು ಸಾವಿರ ರೂಪಾಯಿಗಳನ್ನು ಸೋತು ಬಂದಿದ್ದುದರಿಂದ, ಆತನ ತನುವೂ ಮನವೂ ಸರಿಯಾದ ಸ್ಥಿತಿಯಲ್ಲಿ ಇಲ್ಲದಿರುವುದಕ್ಕೆ ಸಾಕಾ ದಷ್ಟು ಕಾರಣವಿದ್ದಿತು. ಇಷ್ಟೇ ಅಲ್ಲದೆ ಸ್ವಕಾರ್ಯ ಸಾಧನೆಗಾಗಿ ಬಗೆ ಬಗೆಯ ದುಶ್ಚಿಂತೆಗಳೂ ಆತನ ಮನವನ್ನಾವರಿಸಿ ಸಂಕಟಪಡಿಸುತ್ತಿದ್ದುವು. ಈ ದುಶ್ಚಿಂತೆಗಳಲ್ಲಿ ಮುಖ್ಯವಾದುದು ವೈದ್ಯನಿಂದ ಶ್ರೀಕುಮಾರನ ಮರಣದ ವಿಷಯ ವಾಗಿ ಆವ ಪತ್ರವೂ ಇನ್ನೂ ಬರಲಿಲ್ಲವೆಂಬುದೇ ಆಗಿದ್ದಿತು.

ಈಶ್ವರೀ ದುರ್ಗದ ಹಿಂದಣ ಜಹಗೀರುದಾರನ ಕಾಲದಲ್ಲಿ ಕಲ್ಯಾಣಮಲ್ಲನು ಸಾಲಗಾರರಿಗೆ ಮಗನಾಗಿ ಅದರಿಂದ ಪಾರಾಗುವ ಉಪಾಯವನ್ನೇ ಅರಿಯದವನಾಗಿದ್ದನು. ಆ ಸಮಯದಲ್ಲಿ ಶ್ರೀಕುಮಾರನು ರಾಜನಗರದಲ್ಲಿರಲಿಲ್ಲ. ಕಾರಣವೇನೆಂದರೆ—ಶ್ರೀಕುಮಾರನು ಅಜ್ಞಾತ ಕುಲಶೀಲೆಯಾದ ದರಿದ್ರ ಯುವತಿಯೊಬ್ಬಳನ್ನು ಮದುವೆಯಾಗಿ ಸಮಾಜದ ಹೀಯಾಳಿಕೆಗೆ ಹೆದರಿ ದೇಶಾಂತರಕ್ಕೆ ತೆರಳಿಬಿಟ್ಟನು. ಅವನು ಪರದೇಶವಾಸಿಯಾಗುವುದಕ್ಕೆ ಮೊದಲೇ ಅವನಿಗೊಂದು ಮಗುವಾಗಿದ್ದಿತು. ಗತಿಸಿದ ಜಹಗೀರುದಾರನು ಮೊದಲಿನಿಂದಲೂ ಶ್ರೀಕುಮಾರನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಆತನಿಗೆ ಕ್ರಮಕ್ರಮವಾಗಿ ಶ್ರೀಕುಮಾರನ ಗುಪ್ತವಿವಾಹವೂ, ಶಿಶೂತ್ಪತ್ತಿಯೂ ಹೇಗೋ ಗೊತ್ತಾಯಿತು. ಆದರೂ ಆತನು ಅದರಿಂದ ಅಸಮಾಧಾನವನ್ನು ತೋರ್ಪಡಿಸದೆ ಶ್ರೀಕುಮಾರನ ಶಿಶುವಿನ ಯೋಗಕ್ಷೇಮವನ್ನು ತಾನೇ ವಹಿಸಿಕೊಳ್ಳುವುದಾಗಿ ಅಭಯವಿತ್ತನು. ಈ ಅಭಯ ಪ್ರದಾನವನ್ನು ಅವನು ಬಾಯಿಂದ ನುಡಿದನೇ ಹೊರತು, ಕೆಲಸದಲ್ಲಿ ತೋರದೇ ಹೋದನು.

ಶ್ರೀಕುಮಾರನು ತನ್ನ ಪೂರ್ವ ವೃತ್ತಾಂತವನ್ನು ಹೆಂಡಿತಿಗೆ ಆವಾಗಲೂ ತಿಳಿಸಿದವನೇ ಅಲ್ಲ. ದರಿದ್ರಯುವತಿಯಾದ ಅವನ ಹೆಂಡಿತಿಯು ತನ್ನ ಗಂಡನನ್ನು ಶ್ರೀಮಂತನ ಪುತ್ರನೆಂದೂ, ವಿಪುಲವಾದ ಭೂ ಸಂಪತ್ತಿಗೆ ಉತ್ತರಾಧಿಕಾರಿಯೆಂದೂ ಹೇಗೆ ತಾನೇ ಬಲ್ಲವಳಾದಾಳು? ಗಂಡನಿಗೆ ನಿರೋಧವಾಗಿ ಅಪ್ರಕೃತವಾದ ಕಾರಣಗಳನ್ನು ಹುಡುಕಿಕೊಂಡು ಹಠಸಾಧನೆ ಮಾಡುವಷ್ಟು ಚದುರೆಯಾದ ಹೆಂಗುಸು ಅವಳಾಗಿರಲಿಲ್ಲ. ಅವಳು ತನ್ನ ಗಂಡನನ್ನು ಸರ್ವಪ್ರಕಾರದಿಂದಲೂ ಪ್ರೀತಿಸುವುದನ್ನು ಮಟ್ಟಿಗೆ ಚೆನ್ನಾಗಿಯೂ ಅರಿತಿದ್ದಳು.

ಕಲ್ಯಾಣಮಲ್ಲನಿಗೂ ವೈದ್ಯ ವಾಗೀಶನಿಗೂ ಅದೊಂದು ಬಗೆಯ ಬಂಧುತ್ವವಿದ್ದಿತು. ವಾಗೀಶನು ಕಲ್ಯಾಣ ಮಲ್ಲನಿಗೆ, ಈಶ್ವರೀ ದುರ್ಗದ ನಿಜವಾದ ಉತ್ತರಾಧಿಕಾರಿಯನ್ನು ಉಪಾಯಾಂತರದಿಂದ ಕೊಂದುಬಿಡುವುದಾದರೆ ಈಶ್ವರೀ ದುರ್ಗವು ಸುಲಭವಾಗಿ ಕೈಸೇರುವುದೆಂದು ಸಲಹೆ ಕೊಟ್ಟಿದ್ದನು. ಕಾರ್ಯವನ್ನು ಅನುಕೂಲಪಡಿಸಿ ಕೊಡುವುದಾದರೆ, ಉಪಕಾರಕ್ಕೆ ಪ್ರತ್ಯುಪಕಾರವಾಗಿ ಬೇಕಾದಷ್ಟು ಹಣವನ್ನು ಕೊಡುವುದಾಗಿ ಕಲ್ಯಾಣಮಲ್ಲನೂ ಮಾತಕೊಟ್ಟಿದ್ದನು. ಬಲು ಮಾತಿನಿಂದೇನು? ಋಣಗ್ರಸ್ತನಾದ ಕಲ್ಯಾಣಮಲ್ಲನು ತಾನು ಜಹಗೀರುದಾರನಾಗುವೆನೆಂಬ ದುರಾಸೆಗೆ ಬಿದ್ದು ವಾಗೀಶನಿಗೆ ಆತ್ಮ ಸಮರ್ಪಣೆಯನ್ನು ಮಾಡಿಬಿಟ್ಟನು. ಸ್ವಾರ್ಥಪರಾಯಣನಾದ ವಾಗೀಶನೂ ಕಾರ್ಯೋದ್ಧಾರಕ್ಕಾಗಿ ನಾನೋಪಾಯಗಳನ್ನು ಹುಡುಕುವುದಕ್ಕೆ ಪ್ರಾರಂಭಿಸಿದನು.

ದುಷ್ಟ ಬುದ್ಧಿಗಳಾದ ಪಿಶಾಚಗಳ ದುಷ್ಪ್ರವೃತ್ತಿಗಳು ಫಲಿಸುವುದಕ್ಕೆ ಅಡ್ಡಿಗಳು ವಿಶೇಷವಾಗಿ ಬರಲಾರವು ; ಒಂದೊಂದು ವೇಳೆ ಇಂತಹ ದುಷ್ಟಕಾರ್ಯಗಳಿಗೆ ದೈವವೂ ಸಹಾಯವಾಗಿ ಬಂದು ನಿಲ್ಲುವುದೂ ಉಂಟು. ವೈದ್ಯಮಹಾಶಯನಾದ ವಾಗೀಶನಿಗೆ ಕಾರ್ಯಸಾಧನೆಯಲ್ಲಿ ತಟ್ಟನೆ ಕುಹಕೋಪಾಯವೊಂದು ಸ್ಫುರಿಸಿತು; ಅದರಂತೆಯೇ ಕಾರ್ಯವೂ ನಡೆದುಹೋಯಿತು. ಅದೇನೆಂದರೆ—

ಶ್ರೀಕುಮಾರನು ತನ್ನ ದೊಡ್ಡಪ್ಪನಾದ ಜಹಗೀರುದಾರನಿಗೆ ಹೆದರಿಕೊಂಡು ದೇಶಾಂತರವಾಸಿಯಾದುದು ಎಲ್ಲರಿಗೂ ತಿಳಿದ ವಿಷಯವೇ ಆಗಿರುವುದು. ಶ್ರೀಕುಮಾರನು ವಿದೇಶದಲ್ಲಿರುವಾಗಲೇ ಅವನ ದೊಡ್ಡಪ್ಪನು ಮೃತನಾದ ಸುದ್ದಿಯು ತಿಳಿದು ಬಂದಿತು. ಆ ಕೂಡಲೆಯೇ ಅವನು ರಾಜನಗರಕ್ಕೆ ಹಿಂದಿರುಗಿ ಬಂದನು. ಇದನ್ನು ವಾಗೀಶನು ಹೇಗೋ ಮೊದಲೇ ತಿಳಿದುಕೊಂಡಿದ್ದು ಶ್ರೀಕುಮಾರನು ಬಂದ ಕೂಡಲೆ ಅವನನ್ನು ತನ್ನ ಬುಟ್ಟಿಯಲ್ಲಿ ಹಾಕಿಕೊಂಡನು. ಬಳಿಕ ವೈದ್ಯನು ಶ್ರೀಕುಮಾರನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಹುಚ್ಚರ ಕೋಣೆಯಲ್ಲಿ ನಿರ್ಬಂಧ ಪಡಿಸಿದನು. "ಔಷಧದ ಪ್ರಯೋಗದಿಂದ ಶ್ರೀಕುಮಾರನನ್ನು ಹುಚ್ಚನನ್ನಾಗಿ ಮಾಡುವುದಾದರೂ, ವಿಷವನ್ನು ಪಾನಮಾಡಿಸಿ ಅವನನ್ನು ಕೊಲ್ಲುವುದಾದರೂ, ಕಲ್ಯಾಣಮಲ್ಲನು ತನಗೆ ಇದಿರಾರೂ ಇಲ್ಲವೆಂದು ಆರನ್ನೂ ಲಕ್ಷ್ಯಕ್ಕೆ ತಾರನು. ಬಳಿಕ ಅವನಿಂದ ಬರತಕ್ಕ ಹಣವೂ ಬಾರದೇ ಹೋದೀತು" ಎಂಬ ಶಂಕೆಯಿಂದ ವಾಗೀಶನು ಶ್ರೀಕುಮಾರನನ್ನು ಕೊಲ್ಲುವುದಕ್ಕೆ ಸಾಹಸ ಪರನಾಗಲಿಲ್ಲ. ಶ್ರೀಕುಮಾರನು ಬದುಕಿರುವ ವರೆಗೂ ಕಲ್ಯಾಣಮಲ್ಲನನ್ನು ಸುಲಿಯುವುದಕ್ಕೆ ಅವಕಾಶವಿದ್ದೇ ಇರುವುದೆಂದು ತಿಳಿದು ವೈದ್ಯನು ಶ್ರೀಕುಮಾರನನ್ನು ಯಾವಜ್ಜೀವವೂ ನಿರ್ಬಂಧದಲ್ಲಿಟ್ಟಿರುವುದೇ ಸರಿಯಾದ ಉಪಾಯವೆಂದು ಸಂಕಲ್ಪಮಾಡಿಕೊಂಡು ಅದರಂತೆಯೇ ಸ್ವಕಾರ್ಯವನ್ನು ನೆರವೇರಿಸುತ್ತಾ ಬಂದನು.

ಪಿಶಾಚದ್ವಯದ ಮೋಸದಿಂದ ಶ್ರೀಕುಮಾರನು ಹುಚ್ಚರ ವೈದ್ಯಶಾಲೆಯಲ್ಲಿ ಬಂದಿಯಾದನು. ಅಂದು ಮೊದಲು ವೈದ್ಯನು ಕಲ್ಯಾಣಮಲ್ಲನಿಂದ ಹಣವನ್ನು ಕೀಳುವುದಕ್ಕೆ ಮೊದಲು ಮಾಡಿದನು. ಜಹಗೀರು ಸಿಕ್ಕುವುದೆಂಬ ಭರವಸೆಯಿಂದ ಕಲ್ಯಾಣಮಲ್ಲನು ಮೇಲೆ ಮೇಲೆ ಸಾಲಮಾಡಿ ವೈದ್ಯನ ಬಾಯಿಗೆ ಸುರಿಯುತ್ತಾ ಬಂದನು. ಶ್ರೀಕುಮಾರನು ತನ್ನ ದುರವಸ್ಥೆಯನ್ನು ಅರಿತುಕೊಂಡವನಾಗಿ ಒಂದೆರಡು ವೇಳೆ ತಪ್ಪಿಸಿಕೊಳ್ಳುವುದಕ್ಕೆ ಯತ್ನಮಾಡಿನೋಡಿದನು. ವೈದ್ಯನ ಪ್ರಯತ್ನದಿಂದ ಇದು ಸಾಗದೇ ಹೋಯಿತು. ಇದನ್ನು ನಮ್ಮ ಪ್ರಿಯ ಪಾಠಕ ಮಹಾಶಯರು ಬಲ್ಲವರಾಗಿಯೇ ಇರುವರು. ಶ್ರೀಕುಮಾರನು ತಪ್ಪಿಸಿ

ಕೊಳ್ಳುವುದಕ್ಕೆ ಪ್ರಯತ್ನಪಟ್ಟ ಸಂಗತಿಯನ್ನು ಕೇಳಿ ಕಲ್ಯಾಣಮಲ್ಲನು ಅತಿಯಾಗಿ ಕತಿಗೊಂಡನು. ಶ್ರೀಕುಮಾರನು ಬದುಕಿರುವ ವರೆಗೂ ತನಗೆ ಸುಖವಿಲ್ಲವೆಂದೂ, ಅವನನ್ನು ಸಾಧ್ಯವಾದಷ್ಟು ಬೇಗನೆ ಯಮಲೋಕಕ್ಕೆ ಕಳುಹಿಸಿಬಿಡಬೇಕೇಂದೂ ಕಲ್ಯಾಣಮಲ್ಲನು ವೈದ್ಯನನ್ನು ಬಲುಬಗೆಯಲ್ಲಿ ಬೇಡಿಕೊಂಡನು. ಕಳಿಂಗ ನೀತಿಯಲ್ಲಿ ನಿಪುಣನಾದ ವೈದ್ಯನು ಹಾಗೆಯೇ ಮಾಡುವೆನೆಂದು ಹೇಳುತ್ತಲೂ ಮೇಲೆ ಮೇಲೆ ಸಾವಿರ ಗಟ್ಟಲೆ ಹಣವನ್ನು ಬರಮಾಡಿಕೊಳ್ಳುತ್ತಲೂ ಕಾಲವನ್ನು ಕಳೆಯಲಾರಂಭಿಸಿದನು.

ಆವ ದಿನ ತಾಂತಿಯಾ ಭಿಲ್ಲನು ಸಂಗ್ರಾಮಸಿಂಹನ ಹೆಸರಿನಿಂದ ಕಲ್ಯಾಣಮಲ್ಲನಿಗೆ ಕಾಗದವನ್ನು ಬರೆದನೋ, ಆ ಸಮಯದಲ್ಲಿ ಕಲ್ಯಾಣಮಲ್ಲನು ರಾಜನಗರದಲ್ಲಿದ್ದ ತನ್ನ ದೊಡ್ಡಪ್ಪನ ಸುವಿಶಾಲವಾದ ಸೌಧದಲ್ಲಿ ಕುಳಿತುಕೊಂಡು ತನ್ನ ದುರವಸ್ಥೆಯನ್ನು ಕುರಿತು ಪರಿ ಪರಿಯಾಗಿ ಚಿಂತಿಸುತ್ತಿದ್ದನು. ಅಷ್ಟು ಹೊತ್ತಿಗೆ ಭೃತ್ಯನೊಬ್ಬನು ಬಂದು—ಪ್ರಭೂ! ಆರೋ ಈ ಪತ್ರವನ್ನು ತಮಗೆ ಕಳುಹಿರುವರು, ಎಂದು ಹೇಳಿ ಪತ್ರವನ್ನು ಕೊಟ್ಟು ಹೊರಟುಹೋದನು.

ಕಲ್ಯಾಣ ಮಲ್ಲನು ವಿರಕ್ತಭಾವದಿಂದ ಬಿಕಾರಿಗಳ ಹಾವಳಿಯು ನನಗೆ ಎಂದಿಗೂ ತಪ್ಪುವುದೇ ಇಲ್ಲವೆಂದು ಗೊಣಗುಟ್ಟುತ್ತಾ ಆ ಪತ್ರವನ್ನು ಬಿಚ್ಚಿ ನೋಡಿದನು. ಪತ್ರವನ್ನು ಆದ್ಯೋಪಾಂತವಾಗಿ ಓದಿದ ಕೂಡಲೆ ಅವನ ತಲೆ ತಿರುಗಿತು, ಮುಖವು ಕಂಗೆಟ್ಟಿತು, ಪತ್ರವೂ ಕೈಯಿಂದ ಕಳಚಿ ನೆಲದ ಮೇಲೆ ಬಿದ್ದು ಹೋಯಿತು. ಇಷ್ಟೇ ಅಲ್ಲದೆ ಅವನು ಆರ್ತನಾದವನ್ನು ಮಾಡುತ್ತಾ ಸತ್ತವನಂತೆ ಆಸನದಲ್ಲಿ ಬಿದ್ದು ಹೋದನು.

ಹೊರಗೆ ಕಾದುಕೊಂಡಿದ್ದ ಭೃತ್ಯನು ಆರ್ತನಾದವನ್ನು ಕೇಳಿದ ಕೂಡಲೆ, ಒಳಗೆ ಓಡಿಬಂದು ಯಜಮಾನನ ದುರವಸ್ಥೆಯನ್ನು ನೋಡಿ ಕೆಳಗೆ ಬಿದ್ದಿದ್ದ ಕಾಗದವನ್ನು ಕೈಗೆ ತೆಗೆದುಕೊಳ್ಳುವಷ್ಟರಲ್ಲಿ ಯಜಮಾನನಿಗೆ ಜ್ಞಾನೋದಯವಾಗಿ ಭೃತ್ಯನನ್ನು ನೋಡಿ ರೇಗಿರೇಗಿ ಬೀಳುತ್ತಾ—ಮುಟ್ಠಾಳ! ನಿನಗೆ ಇಲ್ಲಿಗೆ ಬರುವುದಕ್ಕೆ ಹೇಳಿದವರಾರು? ಇನ್ನು ನನ್ನಿದಿರಿನಲ್ಲಿ ನಿಲ್ಲದೆ ಇಲ್ಲಿಂದ ತೊಲಗು, ತೊಲಗು, ಎಂದು ಗದ್ದರಿಸಿದನು.

ಭೃತ್ಯನು ಪ್ರತಿಯಾಡದೆಯೇ ನಾಚುಗೆಯಿಂದ ಹೊರಗೆ ಹೊರಟು ಹೋದನು.

ಕಲ್ಯಾಣಮಲ್ಲನು ಆ ಪತ್ರವನ್ನು ತನ್ನ ಮುಂದಿರಿಸಿಕೊಂಡು ತಲೆಯ ಮೇಲೆ ಕೈಗಳನ್ನಿಟ್ಟು ಭೂಮ್ಯಾಕಾಶಗಳನ್ನು ಚಿಂತಿಸ ತೊಡಗಿದನು.

"ನನ್ನ ಉದ್ದೇಶಗಳೆಲ್ಲವೂ ನನ್ನನ್ನೇ ಇದಿರಿಸುವುದಕ್ಕೆ ಬಂದಂತಿವೆ. ಈ ಪತ್ರವನ್ನು ನೋಡಿದ ಕೂಡಲೆ ಮೃತ್ಯುವು ನನ್ನನ್ನು ಒಂದೇ ತುತ್ತಿನಲ್ಲಿ ನುಂಗಿಬಿಡುವುದಕ್ಕೆ ಬಾಯ ತೆರೆದಂತೆ ಕಾಣುವುದು, ಹಾಗೂ ಇಂದ್ರನ ವಜ್ರಾಯುಧವು ನನ್ನ ತಲೆಯನ್ನು ಸಹಸ್ರ ಪ್ರಕಾರವಾಗಿ ಭೇದಿಸುವಂತೆ ಕಾಣುವುದು.

ಈ ಪತ್ರವನ್ನು ಬರೆದವನು ಆವನೇ ಆಗಲಿ, ಅವನಿಗೆ ನನ್ನ ರಹಸ್ಯವೆಲ್ಲಾ ಗೊತ್ತೇ ಇರಬೇಕು. ಈ ವಿಷಯದಲ್ಲಿ ಕೊಂಚವೂ ಸಂಶಯವಿರಲಾರದು. ಇದರಿಂದ ನನ್ನ ಮುಂದಣ ಪರಿಣಾಮವು ಸುಮುಖವಾಗಿ ಕಂಡುಬರುವಂತಿಲ್ಲ. ನನ್ನ ಸರ್ವಸ್ವವು ಹಾಳಾಗುವುದಕ್ಕಾಗಿಯೇ ಈ ನಾಟಕವು ಅಭಿನಯಿಸಲ್ಪಡತಕ್ಕುದಾಗಿರುವುದು. ಈ ಖೇದಾಂತನಾಟಕದಿಂದ ನಾನು ಸರ್ವಸ್ವವನ್ನು ಕಳೆದುಕೊಳ್ಳುವುದು ಮಾತ್ರವೇ ಅಲ್ಲದೆ, ರಾಜದಂಡನೆಗೂ ಗುರಿಯಾಗಬೇಕಾಗುವುದು. ಬಳಿಕ ನನ್ನ ದುರ್ನಾಮವು ಎಲ್ಲೆಲ್ಲಿಯೂ ಹರಡಿ ನನ್ನನ್ನು ಜೀವದ್ದಶೆಯಲ್ಲಿಯೇ ಸುಟ್ಟು ಬೂದಿಮಾಡಿಬಿಡುವುದು."

ಕಲ್ಯಾಣಮಲ್ಲನು ಈ ರೀತಿಯಾಗಿ ಆಲೋಚಿಸುತ್ತಿರುವಲ್ಲಿ ದಾರಿದ್ರ್ಯ, ಬಂಧನ, ವಿದ್ರೋಹ, ತಿರಸ್ಕಾರ, ಅಪಮಾನ, ಮರಣ ಸಂಕಟ, ಇವೇ ಆದಿಯಾದ ಮೃತ್ಯುವಿನ ಪರಿವಾರದವರು ಇದಿರಿನಲ್ಲಿ ಬಂದು ನಿಂತು ನಾಟ್ಯವಾಡಲಾರಂಭಿಸಿದರು. ಮಾನಸಿಕ ದೃಷ್ಟಿಯಿಂದ ಅನುಭವಕ್ಕೆ ತಂದುಕೊಂಡ ಕೂಡಲೆ ಆತನ ಮೈಯೆಲ್ಲವೂ ರೋಮಾಂಚಿತವಾಗಿ ಹೋಯಿತು. ತನ್ನ ಗುಟ್ಟೆಲ್ಲವೂ ರಟ್ಟಾಯಿತೆಂದು ಅವನ ಮೈಯೆಲ್ಲವೂ ಥರಥರನೆ ನಡುಗಿತು. ಸಂಗ್ರಾಮಸಿಂಹನ ಆಹ್ವಾನವು ಯಮನ ಆಹ್ವಾನವಲ್ಲದೇ ಬೇರೆಯಲ್ಲವೆಂದು ತೋರಿದ ಕೂಡಲೆ ಆತನ ಮೈಯೆಲ್ಲವೂ ಬೆವತುಹೋಯಿತು. ಬಲು ಮಾತೇಕೆ? ಧನಗರ್ವದಿಂದ ಗರ್ವಿತನಾಗಿಯೂ, ಪದ ಗೌರವದಿಂದ ಮೆಯ್ಯುಬ್ಬಿದವನಾಗಿಯೂ, ಸ್ವಾರ್ಥಪರಾಯಣತೆ, ಪರೋತ್ಕರ್ಷಾಸಹಿಷ್ಣುತೆ ಇವುಗಳಿಗೆ ತೌರುಮನೆಯಾಗಿಯೂ ದಾಂಭಿಕನಾದ ಯುವಕನಾಗಿಯೂ ಇದ್ದ ಕಲ್ಯಾಣಮಲ್ಲನಿಗೆ ನಾಲ್ಕೆಡೆಗಳಿಂದಲೂ ವಿಪತ್ತುಗಳು ಕವರಿಕೊಂಡು ಬರಲಾಗಿ ಆತನ ಕಣ್ಣುಗಳಲ್ಲಿ ಕತ್ತಲೆ ಕವಿದು ದಿಕ್ಕು ತೋರದೇ ಹೋಯಿತು. ಕಲ್ಯಾಣಮಲ್ಲನು ಕೊಂಚ ಹೊತ್ತು ಹೀಗಿದ್ದು ಚೇತರಿಸಿಕೊಂಡ ಬಳಿಕ ತನ್ನ ಪೆಟ್ಟಿಗೆಯನ್ನು ತೆರೆದು ಬ್ಯಾಂಕಿನ ಪುಸ್ತಕವನ್ನು ತೆಗೆದು ನೋಡಿದನು. ಆಗ ಅವನ ಮನದಲ್ಲಿ ತೋರಿಬಂದುದೇನೆಂದರೆ—"ಬ್ಯಾಂಕಿನಲ್ಲಿ ಒಂದು ಲಕ್ಷರೂಪಾಯಿಗಳು ನನ್ನದಾಗಿ ಶೇಖರಿಸಲ್ಪಟ್ಟಿರುವುವು. ನನಗೆ ಸಾಲಗಳೂ ವಿಪತ್ತುಗಳೂ ಅಪರಿಮಿತವಾಗಿರುವುವು. ನನ್ನ ಹಣವನ್ನು ಚೆಲ್ಲಿ ಇವುಗಳಿಂದ ನಾನು ಪಾರಾಗುವುದಕ್ಕೆ ಕುಂತರೆ, ಇರುವ

ಹಣವು ವೆಚ್ಚವಾಗಿ ಹೋಗುವುದು. ಮುಂದೆಯೂ ವಿಪತ್ತುಗಳು ಸಂಭವಿಸುವುದಾದರೆ, ಕಯ್ಯಲ್ಲಿ ಕಾಸಿಲ್ಲದೆ ನಾನು ಮಾಡುವುದೇನು? ಬಂದುದೆಲ್ಲಾ ಬರಲಿ; ನಾನು ಈ ಹಣವನ್ನು ಮಟ್ಟಿಗೆ ವೆಚ್ಚಮಾಡಲಾರೆನು. ನನಗೆ ಜಹಗೀರ್ದಾರಿಯ ಆಸೆಯು ತಪ್ಪಿದಂತೆಯೇ ಸರಿ. ಈ ಹಣವನ್ನಾದರೂ ಇಟ್ಟುಕೊಂಡು ಎಲ್ಲಿಗಾದರೂ ಓಡಿಹೋಗಿ ನಾನು ಬದುಕಿಕೊಳ್ಳಬೇಕು. ಇನ್ನು ನಾನು ಬ್ಯಾಂಕಿನಿಂದ ಹಣವೆಲ್ಲವನ್ನೂ ತರಿಸಿಕೊಳ್ಳದೆ ಇಲ್ಲಿಯೇ ತಡಮಾಡುವುದಾದರೆ ಇಂದು ನಾಳೆಯೊಳಗಾಗಿಯೇ ನಾನು ಮುಳುಗಿಯೇ ಹೋಗುವೆನು. ಅಂತೂ ನನ್ನ ಯೋಗವು ಇಂದಿಗೆ ಕಳೆದುದು. ಮುಂದೆ ನನಗೆ ಮತ್ತಾವ ಅಪಾಯವೂ ಸಂಭವಿಸದೇ ಇರುವುದಾದರೆ ಅದೇ ನನಗೆ ಪರಮ ಮಂಗಳವು."

ಕಲ್ಯಾಣಮಲ್ಲನು ಹೀಗೆ ಚಿಂತಿಸಿ ಬ್ಯಾಂಕಿನ ಹಣವನ್ನು ಬರಮಾಡಿಕೊಳ್ಳುವುದಕ್ಕಾಗಿ ಕಾಗದವನ್ನು ಬರೆಯಲು ಸಿದ್ಧನಾದನು. ಆದರೆ ಬರೆಯಲು ಅವನ ಕೈ ಬರಲಿಲ್ಲ. ಆತನು ಇದನ್ನು ನೋಡಿ ತನ್ನಲ್ಲಿ ತಾನೇ ಮಾತನಾಡಿಕೊಂಡನು:— "ಒಂದು ವರ್ಷಕ್ಕೆ ಹನ್ನೆರಡು ಲಕ್ಷ ರೂಪಾಯಿಗಳ ಆದಾಯವಿರತಕ್ಕ ಈ ಜಹಗೀರನ್ನು ಒಂದೇ ತಡವೆಗೆ ತ್ಯಾಗಮಾಡಿ ಒಂದು ಲಕ್ಷ ರೂಪಾಯಿಗಳನ್ನು ನಾನು ತೆಗೆದುಕೊಂಡು ಓಡಿಹೋಗುವುದಾದರೆ, ನಾನು ಈ ಹಣದಿಂದ ಎಷ್ಟು ದಿನಗಳು ಬದುಕಿರಬಹುದು? ತಿಂಗಳಿಗೊಂದುಲಕ್ಷ ರೂಪಾಯಿಗಳನ್ನು ನೀರಿನಂತೆ ಚೆಲ್ಲುತ್ತಿದ್ದ ನನಗೆ ಈ ಬಿಕಾರಿ ಹಣವು ಸಾಯುವ ವರೆಗೂ ಸಾಕಾಗುವುದೆಂದರೇನು? ಸಾಕಾಗಲಾರದು, ಎಂದಿಗೂ ಸಾಕಾಗಲಾರದು—ಎಂದ ಮೇಲೆ, ಮುಂದೆ ನನ್ನ ಗತಿ? ಬಳಿಕ ನಾನೆಲ್ಲಿರಬೇಕು? ಶ್ರೀಕುಮಾರನು ಜಹಗೀರುದಾರನಾಗುವುದಾದರೆ, ನಾನು ಹೋಗುವುದೆಲ್ಲಿ?" ಎಂದು ಆತನು ಆಲೋಚಿಸಿದಾಗ ಅದಕ್ಕೆ ಉತ್ತರವಾಗಿ "ಕಾರಾಗೃಹದಲ್ಲಿ" ಎಂದು ಆರೋ ಕಿವಿಯಲ್ಲಿ ಉಸುರಿದಂತಾಯಿತು.

ಮತ್ತೆ ಆಲೋಚಿಸಿದನೇನೆಂದರೆ:—"ಅಪರಿಚಿತನಾದವನು ನನಗೆ ಕಾಗದ ಬರೆಯಲು ಕಾರಣವೇನು? ಈ ನಮ್ಮ ಜಹಗೀರಿಗೆ ಸಂಬಂಧಪಟ್ಟವನೇನೂ ಅಲ್ಲ. ಹಾಗಿದ್ದರೆ ಆ ಮಾರ್ಗವೇ ಬೇರೆಯಾಗಿದ್ದಿತು. ಅವನೋ ನೀಚನು ನನ್ನಿಂದ ಹಣವನ್ನು ಕಿತ್ತುಕೊಳ್ಳುವುದಕ್ಕಾಗಿ ಹೂಡಿದ ಹೂಟವಾಗಿದೆ. ಎಲ್ಲರ ಕಣ್ಣೂ ಹಣದ ಮೇಲಿರುವುದು. ನಾನೂ ಆ ಹಣಕ್ಕಾಗಿಯೇ ಬಲೆಯನ್ನು ಬೀಸಿದುದು. ನಾನು ಅನ್ಯಾಯವಾಗಿ ಸಂಪಾದಿಸಿದ ಹಣದಲ್ಲಿ ಈತನೂ ಕೈಹಾಕಿರುವನು. ಆರಾರಿಗೆ ಎಷ್ಟೆಷ್ಟು ಸಲ್ಲಬೇಕೋ ಅಷ್ಟಷ್ಟನ್ನು ಅವರವರಿಗೆ ಸಲ್ಲಿಸಿಯೇ ತೀರಬೇಕು. ನಾನು ಈ ನೀಚನ ಬಾಯಿಗೂ ಇಷ್ಟು ಹಾಕಿಬಿಡುವು

ದಾದರೆ, ನನಗೆ ಈ ತೊಂದರೆಯು ತಪ್ಪಬಹುದು. ಶ್ರೀಕುಮಾರನು ಬದುಕಿರುವ ವರೆಗೂ ಇಂತಹ ತೊಂದರೆಗಳು ಬಂದೇ ಬರುವುವೆಂದು ತಿಳಿದೇ ನಾನು ವೈದ್ಯ ವಾಗೀಶನಿಗೆ ಅಷ್ಟೊಂದು ಬಗೆಯಿಂದ ಕೇಳಿಕೊಳ್ಳುತ್ತಿರುವೆನು. ಅವನಿಗೇಕೆ ಇನ್ನೂ ದಯೆಬರಲಿಲ್ಲವೋ ದೇವರೇ ಬಲ್ಲನು. ಈ ಅಪರಿಚಿತನು ಎಷ್ಟನ್ನು ಕೇಳುವನೋ? ಕೇಳಿದಷ್ಟು ಕೊಡದೇ ಹೋದಲ್ಲಿ, ಸಾಲಗಾರರಗಿಂತಲೂ ಶತಾಧಿಕ ವಾಗಿ ಈತನು ರೇಗಿ ಕುಳಿತುಕೊಳ್ಳುವನು. ಕೊಡುವುದಕ್ಕೆ ಕುಳಿತ ಮೇಲೆ ಮೇರುವಿನಷ್ಟು ಇದ್ದರೂ ಸಾಲದಲ್ಲಾ! ನನ್ನಲ್ಲಿರುವುದು ತಾನೇ ಏನು? ಏನೂ ಇಲ್ಲವೆಂದು ನಾನು ಹೇಳಿದರೆ ನನ್ನನ್ನು ನಂಬುವರಾರು? ಅಂತೂ ನಾನು ಜಹಗೀರನ್ನು ಕಟ್ಟಿಕೊಂಡರೂ ಸುಖವಿಲ್ಲದೇ ಹೋಯಿತು. ದುರಾಶೆಯಿಂದ ಎಂಥೆಂಥಹ ಕಷ್ಟನಷ್ಟಗಳುಂಟೆಂಬುದನ್ನು ನಾನು ಈಗೀಗ ತಿಳಿಯುತ್ತಿರು ವೆನು."

ಕಲ್ಯಾಣಮಲ್ಲನು ಹೀಗೆಲ್ಲಾ ಚಿಂತಿಸಿದ ಬಳಿಕ, ಸಲ್ಲಾಪ ಯಂತ್ರದ ಹತ್ತಿರಕ್ಕೆ ಬಂದು ವೈದ್ಯವಾಗೀಶನ ಮನೆಗೆ ಸಂಬಂಧವನ್ನು ಕಲ್ಪಿಸಿಕೊಂಡು— "ಮಹಾಶಯ! ನಾನು ಕಲ್ಯಾಣಮಲ್ಲನು. ನನ್ನ ಗುಟ್ಟಿನ ಕಾಗದಗಳೆಲ್ಲವೂ ರಟ್ಟಾಗಿರುವುವು. ಸಂಗ್ರಾಮ ಸಿಂಹನಿಂದ ನನಗೆ ಈ ವಿಚಾರವು ತಿಳಿದು ಬಂದಿ ರುವುದು. ತಾವು ಕೂಡಲೆಯೇ ನನ್ನನ್ನು ಬಂದು ನೋಡಬೇಕು. ವಿಪತ್ತೆಂ ಬುದು ನನ್ನೊಬ್ಬನಿಗೆ ಅಲ್ಲ. ಇದು ಜ್ಞಾಪಕವಿರಲಿ," ಎಂದು ಯಂತ್ರದಿಂದ ತಿಳಿಸಿದನು.

ಇಷ್ಟಾದ ಬಳಿಕ ಕಲ್ಯಾಣಮಲ್ಲನು ತನ್ನ ಆಸನದಲ್ಲಿ ಬಂದುಕುಳಿತು ಶ್ರಮಾಪಹಾರಿಯಾದ ತೀವ್ರ ಮದ್ಯವನ್ನು ಒಂದು ಪಾತ್ರೆಗೆ ಬಗ್ಗಿಸಿಕೊಂಡು ಹೀರಿಬಿಟ್ಟನು. ತರುವಾಯ ಸಂಗ್ರಾಮಸಿಂಹನ ಕಾಗದವನ್ನು ಮತ್ತೊಂದು ಸಲ ಓದಿದನು. ಪತ್ರವನ್ನು ಓದಿದ ಕೂಡಲೆ ಅವನ ಮುಖವು ವಿವರ್ಣವಾಗಲು, ಆತನು ಕಾಗದವನ್ನು ಒತ್ತಟ್ಟಿಗಿಟ್ಟು ಕೋಣೆಯಲ್ಲಿ ಸಂಚರಿಸಲಾರಂಭಿಸಿದನು.

ಆ ಸಮಯದಲ್ಲಿ ಭೃತ್ಯನು ಬಂದು—ಪ್ರಭೂ! ತಮ್ಮನ್ನು ನೋಡುವು ದಕ್ಕೆಂದು ಆರೋ ಬಂದಿರುವರು. ವಿಚಾರ ಮಾಡಿದುದರಲ್ಲಿ ಅವರ ಹೆಸರು ಕಾಲಕಾಂತ ಮಹಾಶಯರೆಂದು ಗೊತ್ತಾಯಿತು. ಅಪ್ಪಣೆಯಾದಂತೆ ನಡೆದು ಕೊಳ್ಳುವೆನು, ಎಂದನು.

ಕಲ್ಯಾಣಮಲ್ಲ—(ಅಧೀರಭಾವದಿಂದ ಹುಂಕರಿಸುತ್ತಾ) ನನಗೆ ತುಂಬಾ ಕೆಲಸವಿರುವುದು. ಆತನನ್ನು ನೋಡುವುದಕ್ಕಾಗಲಾರದೆಂದು ಹೇಳಿ ಆತನನ್ನು ಕಳುಹು.

ಭೃತ್ಯ—ಪ್ರಭೂ! ಅವರು ದೊಡ್ಡ ಮನುಷ್ಯರಾಗಿ ಕಾಣಿಸಿಕೊಳ್ಳುವರು. ಅವರು ತಮ್ಮನ್ನು ಅಗತ್ಯವಾಗಿ ನೋಡಿಹೋಗಬೇಕೆಂಬ ಕಾರ್ಯಗೌರವವನ್ನು ಸೂಚಿಸಿರುವರು.

ಕಲ್ಯಾಣ—ಹಾಗಾದರೆ ಅವರನ್ನು ಕರೆದುಕೊಂಡು ಬಾ.

ಭೃತ್ಯನು 'ಅಪ್ಪಣೆ' ಎಂದು ಹೋಗಿ ಆಗಂತುಕಮಹಾಶಯನನ್ನು ಒಳಗೆ ಕರೆತಂದು ಬಿಟ್ಟು ತೆರಳಿದನು. ಕಲ್ಯಾಣಮಲ್ಲನು ಆತನಾರೆಂದು ನೋಡಿದ ಕೂಡಲೆ, ಆತನೇ ವೇಷಾಂತರವನ್ನು ತಾಳಿದ್ದ ವೈದ್ಯವಾಗೀಶನಾಗಿದ್ದನು. ಕಲ್ಯಾಣಮಲ್ಲನು ಆತನನ್ನು ನೋಡಿ—ಸ್ವಾಮಿ! ತಮ್ಮನ್ನೇ ನೋಡಬೇಕೆಂದು ನಾನು ಸಲ್ಲಾಪ ಯಂತ್ರದಲ್ಲಿ ಈಗತಾನೇ ಮಾತನಾಡಿ ಬಂದೆನು, ಎಂದು ಮಾತನಾಡಿಸಿದನು.

ವಾಗೀಶ—ನಾನೇ ತಮ್ಮನ್ನು ನೋಡಬೇಕೆಂದು ಬಂದೆನು. ತಮಗೂ ಆ ಉದ್ದೇಶವೇ ಇದ್ದುದಕ್ಕಾಗಿ ತುಂಬಾ ಸಂತೋಷಪಡುವೆನು. ವಿಷಯವೇನು?

ಕಲ್ಯಾಣ—ಅದನ್ನೇ ತಿಳಿಸುವೆನು. ಈ ಕಾಗದವನ್ನು ಮೊದಲು ಓದೋಣವಾಗಲಿ. (ಸಂಗ್ರಾಮಸಿಂಹನ ಕಾಗದವನ್ನು ಆತನ ಕೈಗೆ ಕೊಟ್ಟನು.)

ವಾಗೀಶನು ಆ ಕಾಗದವನ್ನು ದಡಬಡನೆ ಓದಿದ ಬಳಿಕ ಅದನ್ನು ಕಲ್ಯಾಣ ಮಲ್ಲನ ಕೈಗೆ ಕೊಟ್ಟನು. ಆಗ ಆತನ ಮುಖದಲ್ಲಿ ಅನಿರ್ವಚನೀಯವಾದ ಭಾವ ವೊಂದು ಆವರಿಸಿಕೊಂಡು ಬರುತ್ತಿದ್ದಿತು, ಆದರೆ ಆತನು ಆವ ಮಾತನ್ನೂ ಆಡಲಿಲ್ಲ.

ಕಲ್ಯಾಣ—ಸ್ವಾಮಿ! ಸಂಗ್ರಾಮಸಿಂಹನಾರೆಂಬುದು ತಮಗೆ ಗೊತ್ತಾ ಗಲಿಲ್ಲವೇ? ನಮ್ಮ ತಲೆಯನ್ನು ತಿನ್ನುವುದಕ್ಕಾಗಿ ಈತನೊಬ್ಬನು ಹುಟ್ಟಿ ಕೊಂಡನು. ಇನ್ನು ನಮಗೆ ಗತಿಗೋತ್ರ ವಿರಲಾರದು. ಪಲಾಯನ ಹೊರತು ನಮಗೆ ಬೇರೊಂದು ಮಾರ್ಗವಿಲ್ಲ. ನಾನೇನೋ ಓಡಿಹೋಗುವೆನು; ತಾವು—

ವಾಗೀಶ—(ಅಡ್ಡಗಿಸಿ) ನಿಮಗಿಂತಲೂ ಹುಚ್ಚರಾರಿರುವರು? ನಿಮಗೂ ನನ್ನ ವೈದ್ಯಶಾಲೆಯಲ್ಲಿ ಒಂದು ಸ್ಥಲವನ್ನು ಏರ್ಪಡಿಸಬೇಕಾದೀತು! ನೀವು ಹೇಡಿಗಳು. ಆವುದೋ ಗುಡ್ಡು ಬೆದರಿಕೆಯ ಕಾಗದಕ್ಕೆ ಇಷ್ಟು ಹೆದರಿದಲ್ಲಿ, ನಿಮ್ಮಿಂದ ದೊಡ್ಡ ಕೆಲಸಗಳು ಆದಂತೆಯೇ ಸರಿ. ಕಾಗದ ಬರೆದವನು ಎಂಥ ವನೋ, ಅವನ ಶಕ್ತಿಯೆಂಥದೋ ಇದನ್ನು ಅರಿತುಕೊಳ್ಳದೆಯೇ, ಒಂದು ಕಾಗದಕ್ಕೆ ಹೆದರಿ ವಿಪುಲವಾದ ಸಂಪತ್ತನ್ನು ತ್ಯಾಗಮಾಡಿ ಓಡಿಹೋಗುವು

ದೆಂದರೇನು ? . ಓಡಿ ಹೋಗಿ ಭಿಕ್ಷೆಯೆತ್ತಿ ಬದುಕಬೇಕೆಂದು ಸಂಕಲ್ಪಮಾಡಿರುವಿರಾ, ಹೇಗೆ ? ಒಳ್ಳೆಯ ಸಂಕಲ್ಪ ! ತಾವು ಹಾಗೆ ಮಾಡುವುದಾದರೆ ನನ್ನ ಅಡ್ಡಿಯೇನೂ ಇರುವುದಿಲ್ಲ. ನನಗೆ ಬರಬೇಕಾದುದನ್ನು ಮಟ್ಟಿಗೆ ನಾನು ಪಡೆದುಕೊಳ್ಳದೇ ಬಿಡೆನು. ಇದರಿಂದ ಪ್ರಾಣಹೋದರೂ ಸರಿ, ನಾನು ಹೆದರತಕ್ಕವನಲ್ಲ.

ಕಲ್ಯಾಣ—(ಹತಾಶನಾಗಿ) ನಮ್ಮ ಹಠವು ಸಾಗದು. ಇದರಿಂದ ನಮ್ಮ ಮೋಸವು ಬಯಲಾಗಿ ನಾವೇ ಕೆಡುವೆವು. ಸರಕಾರವು ನಮ್ಮನ್ನು ದಂಡಿಸುವುದು, ಪ್ರಜಾವರ್ಗವು ನಮ್ಮನ್ನು ಅನಂತಕಾಲದ ವರೆಗೂ ನಿಂದಿಸುತ್ತಿರುವುದು. ನಾವು ವಾಸಮಾಡುವುದಕ್ಕೆ ಮತ್ತೆಲ್ಲಿಯೂ ಸ್ಥಲವಿಲ್ಲದೆ ಕಾರಾಗೃಹದಲ್ಲಿಯೇ ವಾಸಮಾಡಬೇಕಾದೀತು. ಇದು ಸರ್ವಪ್ರಕಾರದಿಂದಲೂ ನನಗೆ ಇಷ್ಟವಿಲ್ಲ. ನಾನು ಸಂಗ್ರಾಮ ಸಿಂಹನನ್ನು ನೋಡುವುದಕ್ಕೆ ಎಂದಿಗೂ ಹೋಗಲಾರೆನು. ಅಲ್ಲಿಗೆ ಹೋಗುವುದಕ್ಕೆ ನನಗೆ ಹೆದರಿಕೆಯಿಂದ ಕಾಲೇ ಬಾರದು.

ವಾಗೀಶ—(ದೃಢವಾದ ಸ್ವರದಿಂದ) ಆತನು ಮಾಡುವುದೆಲ್ಲಾ ಮಾಡಲಿ. ನಾವೂ ಮಾಡಿ ನೋಡುವ, ಈ ರಾತ್ರಿ ನಾವು ತಪ್ಪದೇ ಅಲ್ಲಿಗೆ ಹೋಗಬೇಕು. ಆ ಮೋಸಗಾರನು ಲಂಚವನ್ನು ಹೊಡೆಯುವುದಕ್ಕಾಗಿ ನಿಮ್ಮನ್ನು ಹೆದರಿಸಿ ಬರೆದಿರುವನು. ಅವನು ಬಯಸುವ ಹಣವನ್ನು ನೀವು ಕೊಟ್ಟರಾಯಿತು. ಬಳಿಕ ಅವನೇ ಸುಮ್ಮನಾಗಿಬಿಡುವನು. ಒಂದು ವೇಳೆ ಅವನು ಲಂಚವನ್ನು ಬಯಸದ ಪಕ್ಷದಲ್ಲಿ ನಾವು ಉಪಾಯಾಂತರದಿಂದ ಅವನ ಹುಟ್ಟನ್ನೇ ಅಡಗಿಸಿ ಬಿಡಬಹುದು. ಅನೇಕವಾದ ಉಪಾಯಗಳನ್ನರಿತ ನಮಗೆ ಭಯವೇತರದು ?

ಕಲ್ಯಾಣ—ವಾಗೀಶ ! ನಿಮ್ಮ ಅಭಿಪ್ರಾಯವು ಗೊತ್ತಾಯಿತು, ಆದರೆ ಅದರ ಫಲವು ಅನಿಶ್ಚಿತವಾದುದು, ಆತನು ಧನಾಭಿಲಾಷಿಯಾಗಿದ್ದಲ್ಲಿ, ಅವನು ಕೇಳುವಷ್ಟು ಹಣವನ್ನು ಕೊಟ್ಟು ನಾನು ಬದುಕಿಬರುವೆನು. ಇಷ್ಟರಿಂದಲೇ ನಾನು ಧನ್ಯನಾದೆನೆಂದು ತಿಳಿದು ಸಂತೋಷದಿಂದಿರಲಾಗುವುದಿಲ್ಲ. ಕಾರಣವೇನೆಂದರೆ—ನಾವು ಕೊಡುವುದಕ್ಕೆ ಪ್ರಾರಂಭಮಾಡಿದರೆ, ಹಣದ ರುಚಿಯನ್ನು ಕಂಡವನು ನಮ್ಮನ್ನು ಸುಲಿಯದೇ ಬಿಟ್ಟಾನೆ ! ಹೀಗಾಗುವುದಾದರೆ ನಮ್ಮ ಪರಿಣಾಮವಾದರೂ ಏನು ? ಪಕ್ಷಾಂತರದಲ್ಲಿ, ಆತನು ಸರಕಾರದ ಗೂಢಚಾರನಾಗಿದ್ದುಕೊಂಡು ನಮಗೆ ಕಾಗದ ಬರೆದಿರುವುದಾದರೆ, ನಾವು ಆತನ ಮಾತಿನಂತೆ ಅಲ್ಲಿಗೆ ಹೋದೊಡನೆಯೇ ನಮ್ಮ ಪರಿಣಾಮವು ಮುಗಿದೇ ಹೋಗುವುದು. ಅದುಕಾರಣ ನಿಮ್ಮ ಇಷ್ಟದಂತೆ ನಾನು ನಡೆಯಲಾಗಲಾರದು.

ವಾಗೀಶ—ಅವನು ನಿಮ್ಮನ್ನು ಎಷ್ಟು ದಿವಸ ಪೀಡಿಸಿಯಾನು? ಅವನೇನು ದೇವತೆಯೇ? ಅಯ್ಯೋ ಪಾಪ! ಒಂದೆರಡು ತಿಂಗಳುಗಳ ಮಟ್ಟಿಗೆ ಬದುಕಿರುವ ಆ ಪ್ರಾಣಿಯು ಹೀಗೇಕೆ ಪ್ರಯತ್ನಪಟ್ಟಿತೋ, ನಾನು ಕಾಣೆನು. ವೈದ್ಯವಿದ್ಯಾವಿಶಾರದನಾದ ನಾನು ನಿಮಗೆ ಒತ್ತಾಸೆಯೆಂಬುದನ್ನು ನೀವು ಮರೆತ ಮೇಲೆ ಉಳಿದಿರುವುದೇನು?

ಕಲ್ಯಾಣ—(ಭಯದಿಂದ) ಏನು, ನೀವು ಅವನನ್ನು ಕೊಂದುಹಾಕಬೇಕೆಂದು ಅಭಿಪ್ರಾಯ ಪಡುವಿರಾ?

ವಾಗೀಶ—ಹಾಗೆ ಹೇಳಿದವರಾರು? ಮಾನವನಿಗೆ ಅಡಿಗಡಿಗೂ ವಿಪತ್ತುಗಳು ಸಂಭವಿಸುವುದರಿಂದ, ಆಯುವನ್ನು ಸಿದ್ಧಾಂತ ಪಡಿಸುವುದು. ಆರಿಗೂ ಸಾಧ್ಯವಿಲ್ಲ. ಮರಣವೆಂಬುದು ಆವಾಗಲೂ ನಮ್ಮ ಹೆಗಲನ್ನು ಏರಿಯೇ ಇರುವುದು. ಹೀಗಿರುವಲ್ಲಿ ಮಾನವನು ಬದುಕುವನೆಂಬುದೇ ಆಶ್ಚರ್ಯವು!

ಮಹಾಶಯ! ಈ ಹೆಂಗುಸರ ಮಾತೆಲ್ಲಾ ಹಾಗಿರಲಿ. ನೀವು ಈ ರಾತ್ರಿಯೇ ಆತನನ್ನು ನೋಡುವುದಕ್ಕೆ ಹೋಗಲೇ ಬೇಕು. ಈಗಲೇ ಹೊತ್ತಾಗುತ್ತಾ ಬಂದಿರುವುದು. ಒಂಬತ್ತು ಗಂಟೆಗೆ ಸರಿಯಾಗಿ ನೀವು ಆತನನ್ನು ನೋಡಬೇಕು. ನೀವು ಮಟ್ಟಿಗೆ ಅಧೀರರಾಗಬೇಡಿರಿ. ಏನು ಬಂದರೂ ನಾನು ನೋಡಿಕೊಳ್ಳುವೆನು.

ಕಲ್ಯಾಣ—(ಕೊಂಚ ಹೊತ್ತು ಚಿಂತಿಸಿ) ನಾನು ತಮ್ಮ ಇಷ್ಟದಂತೆಯೇ ನಡೆದುಕೊಳ್ಳುವೆನು. ನೀವು ನನಗೆ ಒತ್ತಾಸೆಯಾಗಿ ನಿಲ್ಲುವ ಭರವಸೆಯ ಮೇಲೆ ನಾನು ಈ ರಾತ್ರಿ ಅಲ್ಲಿಗೆ ಹೋಗುವೆನು.

ವಾಗೀಶ—(ನಗುತ್ತಾ) ನೀವು ಹೆದರ ಬೇಕಾದುದಿಲ್ಲ. ನಾನು ಆವಾಗಲೂ ನಿಮಗೆ ಬೆನ್ನು ಹತ್ತಿದ ಬೇತಾಳನಂತಿರುವೆನು.

ವೈದ್ಯನು ಹೀಗೆ ಹೇಳಿ ತೀವ್ರವಾದ ಮದ್ಯವನ್ನು ತರಿಸಿ ಕಲ್ಯಾಣಮಲ್ಲನಿಗೆ ಪಾನಮಾಡಿಸಿದನು. ಅದರಿಂದ ಕಲ್ಯಾಣಮಲ್ಲನು ಕೊಂಚ ಧೈರ್ಯವನ್ನು ತೆಗೆದುಕೊಂಡು ಮುಂದಣಕಾರ್ಯಕ್ಕೆ ಸಿದ್ಧನಾದನು.

---

*

## ನಾಲ್ಕನೆಯ ವಿಲಾಸ

ಚಾತುರ್ಯ ಚಮತ್ಕಾರ.

ಇತ್ತ ಕಡೆ ರಾಜರಾಜೇಶ್ವರೀ ಮಂದಿರದಲ್ಲಿ ಸಂಗ್ರಾಮಸಿಂಹನು ತನ್ನ ಕೋಣೆಯಲ್ಲಿ ಕುಳಿತುಕೊಂಡು ಆ ಎರಡು ಪತ್ರಗಳಂತೆಯೇ ಪತ್ರಗಳನ್ನು ನಿರ್ಮಾಣಮಾಡಿದನು. ಭಿಲ್ಲನು ಪ್ರತಿ ನಿರ್ಮಾಣದಲ್ಲಿ ಸಿದ್ಧಹಸ್ತನಾದುದರಿಂದ ಆ ಪತ್ರಗಳಲ್ಲಿ ಸಹಜವಾದುದಾವುದು, ಕೃತ್ರಿಮವಾದುದಾವುದು, ಎಂದು ನಿಶ್ಚಯಮಾಡುವುದಕ್ಕೆ ಎಂತಹ ಸೂಕ್ಷ್ಮಗ್ರಾಹಿಗೂ ಸಾಧ್ಯವಿರಲಿಲ್ಲ. ಸಂಗ್ರಾಮಸಿಂಹನು ಕೌಶಲದಿಂದ ಪತ್ರಗಳ ಪ್ರತಿಯನ್ನು ನಿರ್ಮಾಣಮಾಡಿ ವಿಶ್ರಾಂತಿಗಾಗಿ ಕುಳಿತುಕೊಂಡನು. ಆತನು ಕೊಂಚ ಹೊತ್ತು ವಿಶ್ರಾಂತಿಯನ್ನು ಪಡೆದುಕೊಂಡ ಬಳಿಕ, ಕೃತ್ರಿಮವಾದ ಪತ್ರಗಳನ್ನು ತನ್ನ ಕಿಶೆಯಲ್ಲಿಟ್ಟುಕೊಂಡು, ಸಹಜವಾದ ಪತ್ರಗಳನ್ನು ಒಂದು ಲಕೋಟೆಯಲ್ಲಿಟ್ಟು ಅದಕ್ಕೆ ಅರಗಿನ ಮೊಹರು ಮಾಡಿ, ಅದನ್ನು ಮಂದಿರದ ಯಜಮಾನನ ಕೈಗೆ ಕೊಟ್ಟು ಕಬ್ಬಿಣದ ಪೆಟ್ಟಿಗೆಯಲ್ಲಿ ಭದ್ರಪಡಿಸುವಂತೆ ಕೇಳಿಕೊಂಡನು. ಮಂದಿರದ ಯಜಮಾನನು ಸಂಗ್ರಾಮಸಿಂಹನ ಇಷ್ಟದಂತೆಯೇ ಆ ಲಕೋಟೆಯನ್ನು ತನ್ನ ಪೆಟ್ಟಿಗೆಯಲ್ಲಿ ಭದ್ರಪಡಿಸಿದನು.

ಈ ಕೆಲಸವು ಸಾಂಗವಾಗಿ ನೆರವೇರಿದ ಬಳಿಕ ಸಂಗ್ರಾಮಸಿಂಹನು ಧೂಮ್ರವರ್ಣದ ಕನ್ನಡಕವನ್ನು ಕಣ್ಣಿಗೆ ಹಾಕಿಕೊಂಡು ಧೂಮಪಾನ ಮಾಡುತ್ತಾ ಕುಳಿತುಕೊಂಡನು. ಅಲ್ಲಿನ ಗಡಿಯಾರದಲ್ಲಿ ಎಂಟೂವರೆ ಗಂಟೆಯಾದುದನ್ನು ನೋಡಿ ಸಂಗ್ರಾಮಸಿಂಹನು ಮೇಜಿನ ಹತ್ತಿರ ಮತ್ತೊಂದು ಕುರ್ಚಿಯನ್ನು ಇರಿಸಿ, ತನ್ನ ಕುರ್ಚಿಯನ್ನು ಮತ್ತೊಂದು ಕಡೆಯಲ್ಲಿ ದೀಪಕ್ಕೆ ಕೊಂಚ ಮರೆಯಾಗುವಂದದಿ ಏರ್ಪಡಿಸಿದನು. ಬಳಿಕ ಐದು ಗೋಲಿಗಳ ತೀಕ್ಷ್ಣವಾದ ಪಿಸ್ತೂಲನ್ನು ತೆಗೆದು ತನ್ನ ಜೇಪಿನಲ್ಲಿಟ್ಟುಕೊಂಡನು.

ಇಷ್ಟೆನ್ನುವುದರೊಳಗಾಗಿ ಒಂಬತ್ತು ಗಂಟೆಯ ಹೊತ್ತಾಯಿತು. ಆ ಸಮಯಕ್ಕೆ ಸರಿಯಾಗಿ ಭೃತ್ಯನು ಬಂದು—ಪ್ರಭೂ! ಇಬ್ಬರು ದೊಡ್ಡ ಮನುಷ್ಯರು ತಮ್ಮ ದರ್ಶನವನ್ನು ಬಯಸಿ ಬಂದಿರುವರು, ನಾನು ಹೆಸರೇನೆಂದು ಅವರನ್ನು ಕೇಳಿದೆನು. ಅವರು ತಮ್ಮ ಹೆಸರನ್ನು ಹೇಳಲು ಇಷ್ಟಪಡಲಿಲ್ಲ. ತಮ್ಮ ಅಪ್ಪಣೆಯಾದರೆ ಅವರನ್ನು ಕರೆದುಕೊಂಡು ಬರುವೆನು, ಎಂದನು.

ಸಂಗ್ರಾಮಸಿಂಹನು ಆಗಬಹುದೆಂದು ಹೇಳಿ ಮತ್ತೊಂದು ಕುರ್ಚಿಯನ್ನು ಸಿದ್ಧಪಡಿಸಿದನು. ಉತ್ತರ ಕ್ಷಣದಲ್ಲಿಯೇ ಆ ದೊಡ್ಡ ಮನುಷ್ಯರಿಬ್ಬರೂ ಬಂದು

ಬಾಗಿಲಲ್ಲಿ ನಿಂತುಕೊಂಡರು. ಸಂಗ್ರಾಮಸಿಂಹನು ಕೂಡಲೆಯೇ ಅವರನ್ನು ಇದಿರುಗೊಂಡು, ಸಮಯಕ್ಕೆ ಸರಿಯಾಗಿ ಬಿಜಯ ಮಾಡಿಸೋಣವಾಯಿತೆಂದು ಹೇಳಿ ಮರ್ಯಾದೆಯೊಡನೆ ಕೋಣೆಯೊಳಗೆ ಕರೆದುಕೊಂಡು ಬಂದು ಆಸನಗಳ ಮೇಲೆ ಕುಳ್ಳಿರಿಸಿದನು.

ಬಳಿಕ ಸಂಗ್ರಾಮಸಿಂಹನು ತನ್ನ ಆಸನದ ಮೇಲೆ ಕುಳಿತುಕೊಂಡು—ಕಲ್ಯಾಣಮಲ್ಲ ಮಹಾಶಯ! ಈಗ ನಿಮ್ಮ ಮನಸ್ಸು ಬಹುತರವಾಗಿ ಶಾಂತವಾಗಿರುವುದಷ್ಟೇ? ಎಂದು ಕೇಳಿ ಮತ್ತೊಬ್ಬ ದೊಡ್ಡ ಮನುಷ್ಯರನ್ನು ಕುರಿತು,—ವೈದ್ಯ ಮಹಾಶಯ! ಪಿಸ್ತೂಲಿನ ಹಿಡಿಯೇಟು ಪ್ರಬಲವಾದುದಾದರೂ, ಈಗ ತಮಗೆ ಅದರ ಬಾಧೆಯೇನೂ ಇಲ್ಲವೆಂದು ತೋರುವುದು, ಎಂದನು.

ಕಲ್ಯಾಣಮಲ್ಲನು ಈ ಮಾತನ್ನು ಕೇಳಿದ ಕೂಡಲೆ ಥರಥರನೆ ನಡುಗುತ್ತಾ ಕುಳಿತನು. ಆತನ ಮುಖವು ಕಂಗೆಟ್ಟಿತು, ಕಣ್ಣುಗಳು ಶೂನ್ಯವನ್ನು ನೋಡಲಾರಂಭಿಸಿದುವು. ವೈದ್ಯವಾಗೀಶನಾದರೋ ಪಿಶಾಚನ ಅಪರಾವತಾರವೇ ಆಗಿದ್ದುದರಿಂದ, ಹೆದರದೆಯೇ ಕುಳಿತಿದ್ದನು. ಎಂತಹ ಸಂಕಟದಲ್ಲಿಯೂ ಆತನ ಎದೆಯು ನಡುಗಿದುದೆಂಬುದೇ ಇಲ್ಲ; ವಿಪತ್ತಿನಲ್ಲಿ ಆತನ ಬುದ್ಧಿಯು ಮಂಕಾದುದೆಂಬುದನ್ನು ಕಂಡು ಕೇಳಿದವರೇ ಇಲ್ಲ. ಇಂತಹ ಭಯಂಕರನಾದ ವೈದ್ಯನು ಸಂಗ್ರಾಮಸಿಂಹನ ಮಾತನ್ನು ಕೇಳಿ ಹೆದರದೆ ಶಾಂತರೂಪದಿಂದ—ಅತಿಥಿ ಸತ್ಕಾರಕ್ಕೆ ತಕ್ಕ ಪ್ರತಿಫಲವೇ ದೊರೆತಂತಾಯಿತು. ನನ್ನ ಪೆಟ್ಟಿಗೆಯಿಂದ ಬೇಕಾದಷ್ಟು ಹಣವನ್ನೂ ಅವೆರಡು ಪತ್ರಗಳನ್ನೂ ಕದ್ದುಕೊಂಡು ಬಂದು ಇಲ್ಲಿ ವೇಷಾಂತರದಿಂದ ಹೊಸ ರಾಜ್ಯವನ್ನು ಹೂಡಿರುವೆಯಾ? ಇದೆಂತಹ ಚಮತ್ಕಾರ!—ನಿನ್ನ ವೇಷಗಳಿಂದ ನಿನ್ನನ್ನು ಗುರುತಿಸುವುದೇ ಅಸಾಧ್ಯವಾಗಿರುವುದು, ಎಂದನು.

ಸಂಗ್ರಾಮ—(ಆವಭಾವವನ್ನೂ ತೋರ್ಪಡಿಸದೆ) ಇದೆಲ್ಲಾ ಹಾಗಿರಲಿ; ತಾವು ಧೂಮಪಾನಮಾಡುವುದಕ್ಕೇನೂ ಅಡ್ಡಿಯಿಲ್ಲವಷ್ಟೇ?

ಕಲ್ಯಾಣ—(ರೋಷದಿಂದ) ನಿನ್ನ ಧೂಮವರ್ತಿಯು ಆರಿಗೆ ಬೇಕಾಗಿರುವುದು. ನಮ್ಮನ್ನು ಇಲ್ಲಿಗೆ ಬರಮಾಡಿಕೊಳ್ಳುವುದಕ್ಕೆ ನಿನ್ನ ಅಭಿಪ್ರಾಯವಾದರೂ ಏನು? ವ್ಯರ್ಥವಾಗಿ ಕಾಲಕಳೆವುದು ನನಗೆ ಇಷ್ಟವಿಲ್ಲ.

ಸಂಗ್ರಾಮ—ದೊಡ್ಡ ಮನುಷ್ಯರಿಗೆ ತಕ್ಕ ಹಾಗೆಯೇ ಮಾತನಾಡೋಣವಾಯಿತು. ಅದು ಹಾಗಿರಲಿ. ನನ್ನ ಅಭಿಪ್ರಾಯವು ಇಷ್ಟರಿಂದಲೇ ತಮಗೆ ಗೊತ್ತಾಗದೇ ಇರದು. ನಿಮಗೆ ಇಷ್ಟು ಅಹಂಭಾವವಿರುವುದೆಂದು ನನಗೆ ಮೊದಲು ಗೊತ್ತಾಗಲಿಲ್ಲ, ಕಲ್ಯಾಣ ಮಹಾಶಯ!

ಸಂಗ್ರಾಮಸಿಂಹನು ಹೀಗೆ ಹೇಳಿ ವೈದ್ಯವಾಗೀಶನನ್ನು ನೋಡುವಲ್ಲಿ, ವೈದ್ಯನು ತನ್ನ ಕಿಶೆಯಲ್ಲಿ ಕೈಹಾಕುವುದರಲ್ಲಿದ್ದನು. ಸಂಗ್ರಾಮನು ಮುಗುಳು ನಗೆಯನ್ನು ನಕ್ಕು ಇಂತೆಂದನು :—"ವಾಗೀಶ ಮಹಾಶಯ! ಕಿಶೆಯಿಂದ ಪಿಸ್ತೂಲನ್ನು ಹೊರಗೆ ತೆಗೆಯುವುದು ದುರಭ್ಯಾಸವು. ಪಿಸ್ತೂಲಿನಿಂದ ಕೊಲೆ ಪಾತಕನೆಂಬ ಹೆಸರು ನಿಮಗೆ ಏರ್ಪಟ್ಟು ಹೋಗುವುದು. ಒಂದು ವೇಳೆ ನಿಮ್ಮ ಉದ್ದೇಶವು ವಿಫಲವಾಗುವುದಾದರೆ, ನಿಮ್ಮ ಪರಿಣಾಮವೇನಾಗುವು ದೆಂಬುದನ್ನಾದರೂ ಚಿಂತಿಸಿರುವಿರಾ? ನಿಮ್ಮ ಪಿಸ್ತೂಲು ನಿಶ್ಶಬ್ಧವಾಗಿ ಕೆಲಸ ಮಾಡುವುದರಿಂದ, ಗಲಭೆಗೆ ಅವಕಾಶವಿಲ್ಲದ ಹಾಗೆ ಶತ್ರುವನ್ನು ನಿರ್ಮೂಲ ಮಾಡಿಬಿಡಬಹುದೆಂದು ನೀವು ತಿಳಿದಿರುವಂತಿದೆ; ಈಶ್ವರೀ ದುರ್ಗದ ಕಲ್ಯಾಣ ಮಲ್ಲ ಮಹಾಶಯನು ನನ್ನನ್ನು ನೋಡುವುದಕ್ಕಾಗಿ ಇಲ್ಲಿಗೆ ಈ ಸಮಯದಲ್ಲಿ ಬರುವ ಸಂಗತಿಯು ಈ ಮಂದಿರದಲ್ಲಿರತಕ್ಕ ಎಲ್ಲರಿಗೂ ವೇದ್ಯವೇ ಇರುವುದು. ನೀವೂ ಅವರ ಜತೆಯಲ್ಲಿಯೇ ಬಂದಿರುವಿರಿ. ಒಂದು ವೇಳೆ ನೀವು ನನ್ನನ್ನು ಕೊಂದು ಓಡಿಹೋಗುವುದಾದರೆ, ಈ ಕಲ್ಯಾಣ ಮಹಾಶಯರಿಗೆ ಕಲ್ಯಾಣವಾಗ ಲಾರದು. ನೀವು ಮಾಡುವ ಕೆಲಸದಿಂದ ಅವರ ತಲೆಯ ಮೇಲೆ ಚಪ್ಪಡಿಯನ್ನು ಎಳೆದಂತಾಗುವುದು. ಇದನ್ನು ನೀವು ಆಲೋಚಿಸದಿರುವುದು ಆಶ್ಚರ್ಯವಾಗಿರು ವುದು. ಮುಂದಣ ದುಷ್ಪರಿಣಾಮವನ್ನರಿಯದೆಯೇ ಕಲ್ಯಾಣ ಮಹಾಶಯರು ದಿಗ್ವಿಜಯ ಮಾಡಿಬಿಡುವೆನೆಂದು ತಮ್ಮನ್ನು ಜತೆಯಲ್ಲಿಯೇ ಕರೆದುಕೊಂಡು ಬಂದಿರುವರು. ಅವರಿಗಿನ್ನೂ ಲೋಕಜ್ಞಾನವೇ ಉಂಟಾಗಿಲ್ಲ. ನೀವು ಅವರ ಮಂಗಳಾ ಕಾಂಕ್ಷಿಗಳಾಗಿದ್ದಿದ್ದರೆ, ಅವರಿಗೆ ಸತ್ಪರಾಮರ್ಶವನ್ನು ಕೊಡುತ್ತಿ ದ್ದಿರಿ. ಇದರಲ್ಲಿ ತಮ್ಮ ದೋಷವಾದರೂ ಏನಿರುವುದು?"

ವಾಗೀಶನು ತನ್ನ ಕಿಸೆಯಿಂದ ಕೈಯನ್ನು ಹೊರಗೆ ತೆಗೆದುಕೊಂಡು ಸಾವಧಾನವಾಗಿ ಮಾತನಾಡಿದನು :—"ಗುಟ್ಟಿನ ಎರಡು ಪತ್ರಗಳು ತಮ್ಮ ಕೈ ಸೇರಿರುವುದಾಗಿ ತಾವು ಕಲ್ಯಾಣಮಲ್ಲರಿಗೆ ಕಾಗದ ಬರೆದಿರುವಿರಿ. ತಮ್ಮ ಮಾತು ಸತ್ಯವೆಂದು ನಾವು ಹೇಗೆ ನಂಬತಕ್ಕುದಿದೆ? ಇದಕ್ಕೆ ಪ್ರಮಾಣವಾದರೂ ಏನು? ನೀವು ಆರಿಂದ ಈ ವಿಷಯವನ್ನು ತಿಳಿದಿರೋ, ಅವರು ನಿಮಗೆ ಮೋಸಮಾಡುವು ದಕ್ಕಾಗಿ ಸುಳ್ಳನ್ನೇ ಹೇಳಿರುವರು. ಪ್ರತ್ಯಕ್ಷವಾದರೂ ಪರೀಕ್ಷಿಸಿ ನೋಡಬೇಕೆಂದಿರು ವುದರಿಂದ, ಪ್ರಮಾಣವಿಲ್ಲದೆಯೇ ನಾವು ನಿಮ್ಮ ಮಾತನ್ನು ನಂಬತಕ್ಕವ ರಾಗಿಲ್ಲ."

ಸಂಗ್ರಾಮ—ನೀವು ಹೇಳುವ ಮಾತು ಸತ್ಯವಾದುದು. ಪ್ರಮಾಣ ವಿಲ್ಲದಿರುವುದನ್ನು ನಂಬಬೇಕೆಂದು ನಿಮಗೆ ಹೇಳಿದವರಾರು? ಪ್ರಮಾಣವಿಲ್ಲದೆಯೇ

ನಾನು ಈ ಕೆಲಸಕ್ಕೆ ಕೈಹಾಕುವಷ್ಟು ದಡ್ಡನಲ್ಲ. ಆ ಎರಡು ಕಾಗದಗಳೂ ಈಗ ನನ್ನಲ್ಲಿಯೇ ಇರುವುವು. ತಾವು ಅದನ್ನು ನೋಡಿದ ಕೂಡಲೆ, ನನ್ನ ಮಾತು ನಿಜವೋ ಸುಳ್ಳೋ ಎಂಬುದನ್ನು ತಾವೇ ಅರಿತುಕೊಳ್ಳುವಿರಿ.

ಸಂಗ್ರಾಮಸಿಂಹನು ಹೀಗೆ ಹೇಳಿ ಆ ಎರಡು ಕಾಗದಗಳನ್ನೂ ಪರೀಕ್ಷೆಗಾಗಿ ವೈದ್ಯನ ಮುಂದಿರಿಸಿದನು. ವೈದ್ಯನು ಅವನ್ನು ದೀಪದ ಬೆಳಕಿನಲ್ಲಿ ಓದುವುದಕ್ಕೆ ಪ್ರಾರಂಭಿಸಿದನು. ಕಲ್ಯಾಣಮಲ್ಲನು ಪಕ್ಕದಲ್ಲಿ ಕುಳಿತುಕೊಂಡು ಅವು ತಾನು ಬರೆದ ಕಾಗದಗಳೋ—ಇಲ್ಲವೇ, ಕೃತ್ರಿಮವಾದುವುಗಳೋ ಎಂದು ಪರೀಕ್ಷಿಸ ತೊಡಗಿದನು. ಕಾಗದಗಳನ್ನು ಎಷ್ಟು ಬಗೆಯಲ್ಲಿ ನೋಡಿದರೂ, ಆತನಿಗೆ ತಾನು ಬರೆದಂತೆಯೇ ಹೊಳೆಯಿತು. ಇವುಗಳು ಕೃತ್ರಿಮವಾದ ಪತ್ರಗಳೇ ಆಗಿದ್ದರೂ, ಸಹಜವಾದುದಕ್ಕೂ ಕೃತ್ರಿಮವಾದುದಕ್ಕೂ ಅವ ವ್ಯತ್ಯಾಸವೂ ಆರಿಗೂ ಕಂಡುಬರಲಿಲ್ಲ.

ವಾಗೀಶ—ಸಂಗ್ರಾಮಸಿಂಹ! ನಿಮ್ಮ ಮಾತು ಸುಳ್ಳಲ್ಲ. ಕಲ್ಯಾಣಮಲ್ಲ ಮಹಾಶಯ! ಇವುಗಳು ನೀವು ಬರೆದ ಕಾಗದಗಳೇ ಆಗಿರುವುವು. ನೋಡೋಣವಾಗಲಿ.

ವಾಗೀಶನು ಹೀಗೆ ಹೇಳಿ ಕಾಗದಗಳನ್ನು ಕಲ್ಯಾಣಮಲ್ಲನ ಕೈಗೆ ಕೊಟ್ಟನು. ಕಲ್ಯಾಣನು ಕಾಗದಗಳನ್ನು ಕೈಗೆ ತೆಗೆದುಕೊಂಡ ಕೂಡಲೆಯೇ ಕಣ್ಣುಮುಚ್ಚಿ ತೆಗೆಯುವುದರೊಳಗಾಗಿ ಅವನ್ನು ದೀಪಕ್ಕೆ ಹಿಡಿದು ಸುಟ್ಟು ಬೂದಿಮಾಡಿಬಿಟ್ಟನು, ಇಷ್ಟಾದ ಬಳಿಕ ಕಲ್ಯಾಣಮಲ್ಲನು ಧೈರ್ಯವನ್ನು ತೆಗೆದುಕೊಂಡು—ಏನಿರಯ್ಯಾ! ನಮ್ಮೊಡನೆ ಸರಸವಾಡುವುದಕ್ಕೆ ಬಂದಿರಾ? ಈ ಮನೆಹಾಳ ಬುದ್ಧಿಯನ್ನು ಎಷ್ಟು ದಿನಗಳಿಂದ ಅಭ್ಯಾಸಮಾಡಿದ್ದಿರಿ? ಎಚ್ಚರಿಕೆ! ಎಂದು ಮೂದಲಿಸಿದನು.

ಸಂಗ್ರಾಮಸಿಂಹನು ಇದೆಲ್ಲವನ್ನೂ ಕಣ್ಣಾರೆ ನೋಡುತ್ತಾ ತಾನಿದ್ದಲ್ಲಿಯೇ ಕುಳಿತುಕೊಂಡು ಪ್ರಶಾಂತವಾದ ಭಾವವನ್ನು ತಾಳಿ ಕಲ್ಯಾಣಮಲ್ಲನನ್ನು ಕುರಿತು—"ಕಲ್ಯಾಣ ಮಹಾಶಯ! ಸಮಾಧಾನಗೊಳ್ಳಿರಿ. ನಿಮ್ಮಂತಹ ದೊಡ್ಡ ಮನುಷ್ಯರು ದುಡುಕಿ ಮಾತನಾಡಬಾರದು. ಇಷ್ಟು ತುಟಿ ಮೀರಿ ಮಾತನಾಡುವುದಕ್ಕೆ ಕಾರಣತಾನೇ ಏನಿರುವುದು? ಈ ಎರಡು ಕಾಗದಗಳನ್ನು ಸುಟ್ಟಮಾತ್ರದಿಂದಲೇ ನಿಮ್ಮ ಇಷ್ಟಸಿದ್ಧಿಯಾಗಿ, ನೀವು ಆಪತ್ತಿನಿಂದ ಪಾರಾದಿರೇನು? ಊಹಾಪೋಹ ಜ್ಞಾನವಿಲ್ಲದ ಮೇಲೆ ನಿಮ್ಮಂತಹ ಅವಿವೇಕಿಗಳು ಇಂತಹ ದೊಡ್ಡ ಕೆಲಸಗಳಲ್ಲಿ ಕೈಹಾಕ ಬಾರದು, ಗೊತ್ತಾಯಿತೇ, ಮಹಾಶಯ! ನೀವು

ಇಷ್ಟು ಬೇಗನೆ ಬಣ್ಣವನ್ನು ಬದಲಾಯಿಸುವಿರೆಂದು ನಾನು ನಿಜವಾಗಿಯೂ ತಿಳಿದಿರಲಿಲ್ಲ. ನೀವು ಮಾಡಿದ ಕೆಲಸದಿಂದ ನನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆಯೇ ಆಯಿತು. ನೀವು ನನ್ನ ಕೆಲಸಕ್ಕೆ ಸಹಾಯರಾಗಿ ಇಷ್ಟು ಆಗ್ರಹವನ್ನು ತೋರಿಸಲೇಕೆ? ಮನಸ್ಸನ್ನು ಬಿಗಿ ಹಿಡಿದು ಕೊಂಚ ಶಾಂತರಾಗಿರಿ, ಎಂದು ಮಾತನಾಡಿದನು.

ಕಲ್ಯಾಣ—(ನಿರ್ಭಯನಾಗಿ) ನೀವು ಆವುದರ ಆಧಾರದ ಮೇಲೆ ನಮ್ಮನ್ನು ಹೆದರಿಸುವುದಕ್ಕೆ ಕುಳಿತಿರೋ ಅದರ ಗತಿ ಯೇನಾಯಿತೆಂಬುದನ್ನು ನೀವು ಕಣ್ಣಾರೆಯೇ ನೋಡಿದಿರಿ. ಇನ್ನು ನಿಮ್ಮಿಂದಾಗುವುದೇನು? ನಿಮ್ಮ ಗುಡ್ಡು ಬೆದರಿಕೆಗೆ ನಾವು ಅಂಜತಕ್ಕವರಲ್ಲ. ನಮ್ಮನ್ನು ಆರೆಂದು ತಿಳಿದು ಮಾತನಾಡುವಿರಿ?

ಸಂಗ್ರಾಮ—(ಸಹಜವಾದ ಸ್ವರದಿಂದ) ಕಲ್ಯಾಣಮಹಾಶಯ! ನಿಮಗೇ ಇಷ್ಟು ಬುದ್ಧಿಯಿರುವಲ್ಲಿ, ನಿಮ್ಮಂಥವರನ್ನು ಏಕಾಪೋಶನ ಮಾಡತಕ್ಕ ನನ್ನಂತಹವನಿಗೆ ಎಷ್ಟು ಬುದ್ಧಿಯಿರಬೇಕು? ನಾನಾರೆಂಬುದು ನಿಮಗೆ ಇನ್ನೂ ತಿಳಿವಿಗೆ ಬಂದಿಲ್ಲ. ಇಷ್ಟರಲ್ಲಿಯೇ ನನ್ನ ಮಹಿಮೆಯು ನಿಮಗೆ ಚೆನ್ನಾಗಿಯೂ ಗೋಚರಕ್ಕೆ ಬರುವುದು. ಇದಕ್ಕಾಗಿ ಈಗಲೇ ದುಡುಕಬೇಡಿರಿ.

ಪಂಚಾಂಗ ಹೋದರೆ ನಕ್ಷತ್ರ ಹೋದೀತೇ? ಕೃತ್ರಿಮದ ಪತ್ರಗಳು ಸುಟ್ಟುಹೋದುವು. ಇದರಿಂದ ಸಹಜವಾದ ಪತ್ರಗಳಿಗುಂಟಾದ ಕುಂದುಕೊರತೆ ಯಾದರೂ ಏನು? ನೀವು ಹೀಗೆಲ್ಲಾ ಮಾಡುವಿರೆಂದು ನಾನು ಮೊದಲೇ ಬಲ್ಲೆನು. ಇದಕ್ಕಾಗಿ ನನಗೆ ಕೊಂಚವಾದರೂ ಆಗ್ರಹವೆಂಬುದೇ ಇಲ್ಲ. ಹೀಗಿರುವಲ್ಲಿ ನೀವು ಹಾರಾಡುವುದರಿಂದ ಏನೂ ಆಗಲಾರದು.

ಈ ಮಾತನ್ನು ಕೇಳಿದ ಮೇಲೆ ಕಲ್ಯಾಣಮಲ್ಲನಿಗೆ ಮುಂದೆ ಆವ ಮಾತನಾಡುವುದಕ್ಕೂ ದಿಕ್ಕೇ ತೋರಲಿಲ್ಲ. ಆತನು ಮೂಕನಂತಾಗಿ ಸಂಗ್ರಾಮಸಿಂಹನ ಮುಖವನ್ನೇ ನೋಡುತ್ತಾ ಕುಳಿತುಬಿಟ್ಟನು.

ವಾಗೀಶ—ನಿಮಗೂ ಬುದ್ಧಿಯಿರುವುದೆಂದು ನನಗೆ ಗೊತ್ತಾಯಿತು. ಈಗ ನಿಮ್ಮ ಉದ್ದೇಶವಾದರೂ ಏನು, ತಿಳಿಸೋಣವಾಗಲಿ?

ಸಂಗ್ರಾಮ—ನನ್ನ ಉದ್ದೇಶವಾದರೋ ಸಾಮಾನ್ಯವಾದುದಲ್ಲ. ನನಗೆ ಐವತ್ತುಸಾವಿರ ರೂಪಾಯಿಗಳ ಆವಶ್ಯಕತೆಯಿರುವುದು. ಇಂದು ನಾಳೆಯೆನ್ನುವುದರೊಳಗಾಗಿ ನಾನು ಕಲ್ಯಾಣಮಲ್ಲ ಮಹಾಶಯರಿಂದ ಬರಮಾಡಿಕೊಳ್ಳುವೆನು. ಇದು ನನ್ನ ಪ್ರಕೃತದ ಉದ್ದೇಶವಾಗಿರುವುದು. ಗೊತ್ತಾಯಿತೆ, ಮಹಾಶಯ!

ಕಲ್ಯಾಣಮಲ್ಲನು ಎದೆಯೊಡೆದವನಾಗಿ ವಾಗೀಶನ ಮುಖವನ್ನು ನೋಡಿದನು.

ಸಂಗ್ರಾಮಸಿಂಹನು ಕಲ್ಯಾಣಮಲ್ಲನ ಭಾವಭಂಗಿಯನ್ನು ಅರಿತು, ಮುಖದಿಂದ ಆನಂದವನ್ನು ತೋರ್ಪಡಿಸುತ್ತಾ—ಕಲ್ಯಾಣ ಮಹಾಶಯ! ಕೊಬ್ಬಿದ ಹಣಗಾರರಾದ ನಿಮ್ಮಲ್ಲಿ ನಾನು ಈ ತುಚ್ಛವಾದ ಮೊಬಲಗನ್ನು ಕೇಳಿದುದಕ್ಕಾಗಿ ನಿಮಗೆ ತುಂಬಾ ಸಂಕೋಚವಾಗಿರಬಹುದು ನನಗೆ ಪ್ರಕೃತದಲ್ಲಿ ಇದಕ್ಕಿಂತಲೂ ಹೆಚ್ಚಾಗಿ ಬೇಕಿಲ್ಲವಾದುದರಿಂದ, ತಮಗೆ ವಿಶೇಷವಾಗಿ ತೊಂದರೆ ಕೊಡಲು ನಾನು ಇಷ್ಟಪಡುವುದಿಲ್ಲ. ತಮಗೆ ಇಷ್ಟವಿರುವುದಾದರೆ ಮುಂದಣ ಕಾಲಗಳಲ್ಲಿ ತಮ್ಮ ಯೋಗ್ಯತೆಗೆ ತಕ್ಕ ಹಾಗೆ ಉಪಕರಿಸಬಹುದು. ನಾನು ಆವಾಗಲೂ ತಮ್ಮ ಆಶ್ರಿತನಾಗಿಯೇ ಇರುವೆನು, ಎಂದು ನುಡಿದನು.

ವಾಗೀಶ—(ತಿರಸ್ಕಾರ ಭಾವದಿಂದ) ನಿಮ್ಮ ಮಾತ ಕೇಳಿದರೆ, ನೀವು ಇಷ್ಟರಿಂದಲೇ ತೃಪ್ತರಾಗತಕ್ಕವರಲ್ಲವೆಂದು ತೋರುವುದು. ನೀವು ನಮ್ಮನ್ನು ಕಾಲಿನಿಂದ ಹೊಸಕಿ ಹಾಕುವ ಕೀಟಗಳೆಂದೇನಾದರೂ ಭಾವಿಸಿರುವಿರಾ, ಹೇಗೆ? ನೀವು ಭಾವಿಸಿರುವಂತೆ ನಾವಲ್ಲ. ನೀವು ಧೂರ್ತರೇನೋ ಅಹುದು; ಆದರೆ ನಾವು ನಿಮಗೇನೂ ಕಡಮೆಯಾಗಿಲ್ಲ. ಇದು ಚೆನ್ನಾಗಿಯೂ ನಿಮ್ಮ ಜ್ಞಾಪಕದಲ್ಲಿರಲಿ; ಮರೆಯ ಬೇಡಿರಿ, ಕಂಡಿರಾ?

ಸಂಗ್ರಾಮ—(ನಗುತ್ತಾ) ನೀವು ಧೂರ್ತರೆಂದು ನಾನು ಬಲ್ಲೆನು. ಅದಕ್ಕೆ ಕೊಂಚ ಪ್ರಮಾಣವು ಸಿಕ್ಕಿರುವುದು. ಆದರೆ ಸಂಗ್ರಾಮಸಿಂಹನಿಗಿಂತಲೂ ನೀವು ಹೆಚ್ಚಿನ ಧೂರ್ತರೆಂಬುದಕ್ಕೆ ತಕ್ಕ ಪ್ರಮಾಣವು ದೊರೆತಿಲ್ಲವಾಗಿ, ನಾನದನ್ನು ನಂಬತಕ್ಕವನಾಗಿಲ್ಲ.

ಮಹಾಶಯರಿರಾ! ನನ್ನ ಪರಿಚಯವು ತಮಗಿಲ್ಲವೆಂದು ತೋರುವುದು. ನಾನಾರೆಂಬುದನ್ನು ತಮಗೆ ತಿಳಿಸುವೆನು; ಕೇಳೋಣವಾಗಲಿ; ನಮ್ಮ ಈ ಭಾರತ ಭೂಮಿಯಲ್ಲಿ ತಾಂತಿಯಾ ಭಿಲ್ಲನೆಂಬ ಸುಪ್ರಸಿದ್ಧನಾದ ಚೋರವೀರ ಚೂಡಾಮಣಿಯನ್ನು ಕಾಣದವರಾರಿರುವರು? ಆತನ ದೇಹ ಶಕ್ತಿಯೂ ಆತನ ಬುದ್ಧಿ ಶಕ್ತಿಯೂ, ಆತನ ಕಲಾಕೌಶಲವೂ, ಆತನ ಕಾರ್ಯ ನಿಪುಣತೆಯೂ, ಆತನ ಸಾಹಸವೂ, ಆತನ ಸ್ಥಿರಸಂಕಲ್ಪವೂ ಈ ಪ್ರಪಂಚದಲ್ಲಿ ಎಲ್ಲೆಡೆಗಳಲ್ಲಿಯೂ ಸರ್ವಜನ ವಿದಿತವಾಗಿಯೇ ಇರುವುವು. ಉಳಿದ ಎಲ್ಲಾ ಬಗೆಯ ಕಳ್ಳರೂ ಆತನನ್ನು ಚೋರಾಗ್ರೇಸರ ಚಕ್ರವರ್ತಿಯೆಂದು ಒಪ್ಪಿಕೊಂಡು ಆತನ ವಿಷಯದಲ್ಲಿ ಭಯ ಭಕ್ತಿಗಳಿಂದ ನಡೆದುಕೊಳ್ಳುತ್ತಿರುವರು. ತಾಂತಿಯಾ ಭಿಲ್ಲನ ಭಯದಿಂದ ಹಣ

ಗಾರರು ತಮ್ಮ ಸಂಪತ್ತನ್ನು ಮನೆಯಲ್ಲಿಟ್ಟುಕೊಂಡು ಒಂದು ದಿನವಾದರೂ ಮೈ ಮರೆತು ನಿದ್ದೆಮಾಡಿದವರಲ್ಲ. ಆತನ ಹೆಸರನ್ನು ಕೇಳಿದ ಕೂಡಲೆ ಅಳುವ ಮಕ್ಕಳು ಕೂಡ ಅಳುವನ್ನು ತಟ್ಟನೆ ನಿಲ್ಲಿಸಿ ಬಿರುನೋಟವನ್ನು ನೋಡುತ್ತಾ ಬೆರಗಾಗಿ ಬಿಡುವರೋ ಅಂತಹ ತಾಂತಿಯಾ ಭಿಲ್ಲನೇ ನಿಮ್ಮೆದಿರಿನಲ್ಲಿ ಕುಳಿತಿರುವನು. ನಾನೇ ಜಗತ್ಪ್ರಸಿದ್ಧನಾದ ಆ ತಾಂತಿಯಾ ಭಿಲ್ಲನು.

ಕಲ್ಯಾಣಮಲ್ಲನ ತಲೆಯು ತಿರುಗಿ ಆತನ ಕಣ್ಣುಗಳು ಮುಚ್ಚಿಯೇ ಹೋದುವು. ವೈದ್ಯವಾಗೀಶನು ಸ್ತಂಭೀಭೂತನಾಗಿ ರಪ್ಪೆಹಾಕದ ಕಣ್ಣುಗ ಳಿಂದ ನೋಡುತ್ತಾ—ತಾಂತಿಯಾ ಭಿಲ್ಲರು ತಾವೆಯೇ! ಎಂದು ನಡುಗಿದ ದನಿ ಯಿಂದ ಮಾತನಾಡಿದನು.

ಸಂಗ್ರಾಮ—ಅಹುದು ಮಹಾಶಯ! ನಾನೇ ಆ ಪಾಮರನಾದ ತಾಂತಿ ಯಾ ಭಿಲ್ಲನು. ನನ್ನನ್ನು ದಸ್ತಗಿರಿ ಮಾಡುವುದಕ್ಕಾಗಿ ಪೋಲೀಸಿನವರನ್ನು ಕರೆಯಿಸಬಹುದು; ನಿಮಗೆ ಅವಕಾಶವಿಲ್ಲವಾದರೆ, ಪಿಸ್ತೂಲಿನಿಂದಾದರೂ ನನ್ನನ್ನು ಸುಟ್ಟು ಬೂದಿ ಮಾಡಬಹುದು. ನಾನು ಈಗ ನಿಮ್ಮ ಕೈಯಲ್ಲಿ ಸಿಕ್ಕಿಬಿದ್ದಿರುವೆನು. ನನ್ನ ಮೇಲೆ ಅನೇಕ ವಾರಂಟುಗಳು ಹುಟ್ಟಿರುವುವು. ತಮ್ಮದನ್ನೂ ಅವುಗಳ ಜತೆಯಲ್ಲಿಯೇ ಸೇರಿಸಬಹುದು. ಈಗ ನನ್ನನ್ನು ನೀವು ದಸ್ತಗಿರಿ ಮಾಡಿಸುವು ದಾದರೆ, ನಾನೊಬ್ಬನೇ ಸಿಕ್ಕಿಬೀಳುವ ಸಂಭವವಿಲ್ಲ. ನೀವು ತಪ್ಪಿಸಿಕೊಳ್ಳುವು ದಾಗಿ ತಿಳಿದಿರಬಹುದು. ಅದೆಂದಿಗೂ ಆಗಲಾರದು. ನಿಮ್ಮಿಬ್ಬರನ್ನು ಪ್ರಬಲ ವಾದ ಇಕ್ಕಟ್ಟಿನಲ್ಲಿ ಸಿಕ್ಕಿಸಿ ನಾನು ಹೇಗಾದರೂ ಮಾಡಿ ತಪ್ಪಿಸಿಕೊಳ್ಳುವೆನು. ನಿಮಗೆ ಮಟ್ಟಿಗೆ ಉತ್ತಾರಣೆಯೆಂಬುದೇ ಇಲ್ಲ. ಈ ವ್ಯವಹಾರದಲ್ಲಿ ನಾನು ಎಂತಹ ಬೆನ್ನ ಹತ್ತಿದ ಬೇತಾಳನೆಂಬುದನ್ನಾದರೂ ಅರಿತುಕೊಳ್ಳಿರಿ. ನನ್ನ ಮುಖನೋಡಿದ ಮೇಲೆ ನಿಮಗೆ ಆಯುಸ್ಸು ಮುಗಿದು ಬಂದಿದೆಯೆಂದೇ ಸಿದ್ಧಾಂ ತವು.

ವಾಗೀಶ—(ಕ್ಷಣಕಾಲ ಚಿಂತಿಸಿ) ನಿಮ್ಮೆದಿರಿನಲ್ಲಿ ನಾವು ಸೋಲನ್ನು ಒಪ್ಪಿಕೊಂಡಿರುವೆವು. ನಾಳೆಯ ಬೆಳಗಾಗುವುದರೊಳಗಾಗಿ ಕಲ್ಯಾಣಮಲ್ಲರು ತಮಗೆ ಐವತ್ತು ಸಾವಿರ ರೂಪಾಯಿಗಳನ್ನು ತಾವಿದ್ದಲ್ಲಿಯೇ ತಂದೊಪ್ಪಿಸುವರು. ತಾವು ಶಾಂತರಾಗೋಣವಾಗಲಿ.

ಸಂಗ್ರಾಮ—(ನಗುತ್ತಾ) ಈಗ ಸರಿಹೋಯಿತು. ಈಗಳೀಗ ನೀವು ವಿವೇಕಿಗಳಂತೆ ಕೆಲಸಮಾಡಿರುವಿರಿ. ಪ್ರಕೃತದಲ್ಲಿ ನಮ್ಮ ನಿಮ್ಮ ವ್ಯವಹಾರವು ಮತ್ತೇನೂ ಉಳಿದಿರಲಾರದು. ಮತ್ತೇನಾದರೂ ಇದ್ದಲ್ಲಿ ತಿಳಿಸೋಣವಾಗಲಿ.

ವಾಗೀಶ—ಮತ್ತೇನೂ ಇಲ್ಲ.

ವಾಗೀಶ ಕಲ್ಯಾಣಮಲ್ಲರು ಹೊರಡುವುದಕ್ಕೆ ಸಿದ್ಧರಾಗಿ ಎದ್ದು ನಿಂತರು. ಬಳಿಕ ಇಬ್ಬರಿಗೂ ವಂದನ ಪ್ರತಿ ವಂದನಗಳು ನಡೆದ ಮೇಲೆ, ವಾಗೀಶ ಕಲ್ಯಾಣ ಮಲ್ಲರು ಮಂದಿರದಿಂದ ಹೊರಗೆ ಬಂದು ತಮ್ಮ ಗಾಡಿಯಲ್ಲಿ ಕುಳಿತು ತೆರಳಿದರು. ದಾರಿಯಲ್ಲಿ ಕಲ್ಯಾಣಮಲ್ಲನು ನಿಟ್ಟುಸಿರನ್ನು ಬಿಟ್ಟು—ಮಹಾಶಯ! ಆತನು ಹೂಡಿದ ಹೂಟವನ್ನು ನೋಡೋಣವಾಯಿತೇ? ನಮಗೆ ಈ ದಿವಸ ಇಲ್ಲಿ ಇಂತಹ ಸಂಕಟವುಂಟಾಗುವುದೆಂದು ಆರು ತಾನೇ ಬಲ್ಲವರಾಗಿದ್ದರು? ಎಂದನು.

ವಾಗೀಶ—(ಅಸ್ಫುಟ ಸ್ವರದಿಂದ) ಹಣವನ್ನು ಕಿತ್ತುಕೊಳ್ಳುವುದಕ್ಕೆ ಇದು ಒಳ್ಳೆಯ ಉಪಾಯ! ಈ ಬಗೆಯ ಚಾತುರ್ಯದಿಂದ ನಮ್ಮನ್ನು ಆವಾಗಲೂ ಮೋಸಮಾಡುವುದಾಗಿ ಆತನು ತಿಳಿದಿರಬಹುದು. ಅವನಿಗಿನ್ನೂ ತಿಳಿವಳಿಕೆ ಸಾಲದು. ಈ ಅಹಂಕಾರದಿಂದಲೇ ಅವನು ಎಂದಾದರೊಂದು ದಿನ ಸರಕಾರ ದವರ ಕೈಗೆ ಸಿಕ್ಕದೇ ಇರಲಾರನು.

ಕಲ್ಯಾಣ—(ನೀರಸಭಾವದಿಂದ) ತಮ್ಮ ಮಾತಿನಿಂದ ನನಗೆ ಆಶ್ಚರ್ಯ ವೇ ತೋರುವುದು.

ವಾಗೀಶ—ಈಗ ಆಶ್ಚರ್ಯ ತೋರಿದರೂ ತೋರಬಹುದು. ನಾವು ಅವನ ಕೈಗೆ ಸುಲಭವಾಗಿ ಸಿಕ್ಕಿಕೊಳ್ಳತಕ್ಕವರೆಂದು ನಂಬಿದೆಯಾ?

ಇವರಿಬ್ಬರೂ ಈ ರೀತಿಯಾಗಿ ಮಾತನಾಡುತ್ತಿರುವಲ್ಲಿ ಗಾಡಿಯು ಕಲ್ಯಾಣ ಮಲ್ಲನ ಉಪ್ಪರಿಗೆ ಮನೆಯಮುಂದೆ ಬಂದು ನಿಂತಿತು. ಇಬ್ಬರೂ ಗಾಡಿಯಿಂ ದಿಳಿದು ವಿಶ್ರಾಂತಿ ಮಂದಿರಕ್ಕೆ ಬಂದರು. ಬಂದ ಕೂಡಲೆ ಕಲ್ಯಾಣಮಲ್ಲನು ತನ್ನ ಚೌಪದಿಯಲ್ಲಿ ಕುಳಿತುಕೊಂಡು ದಿಕ್ಕು ತೋರದವನಾಗಿ ಮೌನಭಾವವನ್ನು ತಾಳಿದನು. ವೈದ್ಯನು ಕುಳಿತುಕೊಳ್ಳದೆಯೇ ಕೋಣೆಯಲ್ಲಿ ವ್ಯಸ್ತಭಾವದಿಂದ ಸಂಚರಿಸ ತೊಡಗಿದನು. ಅವನ ಮುಖವು ಕಂಗೆಟ್ಟಿರುವುದು; ಬೆವರು ಸುರಿಯು ತ್ತಿರುವುದು; ಹುಬ್ಬು ಗಂಟಿಕ್ಕಿರುವುದು; ಕಣ್ಣುಗಳು ತೇಲಿಕೊಂಡು ಹೋಗು ತ್ತಿರುವುವು; ತುಟಿಗಳು ಅದುರುತ್ತಿರುವುವು. ಆತನ ಗಂಟಲು ಒಣಗಿಹೋಗಿ ಬಾಯಿಂದ ಮಾತೇ ಹೊರಡದು.

ಹೀಗೆಯೇ ಅರ್ಧಘಂಟೆಯ ಕಾಲವು ಕಳೆದ ಬಳಿಕ, ವೈದ್ಯನು ಮತ್ತೊಂದು ಚೌಪದಿಯ ಮೇಲೆ ಬಂದು ಕುಳಿತುಕೊಂಡು—ಮಹಾಶಯ! ತಾಂತಿಯಾ ಭಿಲ್ಲನು ಸಾಧಾರಣ ಮನುಷ್ಯನಲ್ಲ. ಅವನು ನಮ್ಮನ್ನು ನಿರ್ಮೂಲಮಾಡುವುದಕ್ಕಾಗಿಯೇ

ಅವತಾರಮಾಡಿರುವನು. ನಾವು ಅವನಿಗೆ ಪ್ರತಿಯಾಗಿ ಆಚರಿಸದೇ ಆತನು ಹೇಳಿದ ಹಾಗೆ ಕುಣಿಯುತ್ತಾ ಬಂದರೆ ನಮ್ಮ ಪಾಡು ನಾಯ ಪಾಡಾಗುವುದರಲ್ಲಿ ಆವ ಸಂಶಯವೂ ಇರುವುದಿಲ್ಲ, ಎಂದು ಸೊಟ್ಟಮುಖದಿಂದ ಮಾತನಾಡಿದನು.

ಕಲ್ಯಾಣ—ಅದು ಹೇಗೆ ಸಾಧ್ಯ, ಮಹಾಶಯ? ನನಗೆ ಆವ ಉಪಾಯವೂ ತೋರುವುದೇ ಇಲ್ಲ. ಈಗ ನಾವು ಅವನ ಇಷ್ಟವನ್ನು ಪೂರಣಮಾಡದಿದ್ದಲ್ಲಿ, ನಮ್ಮ ಗುಟ್ಟೆಲ್ಲವೂ ರಟ್ಟಾಗುವುದು. ಆಮೇಲೆ ನಮ್ಮ ಪರಿಣಾಮವು ಕಂಡೇ ಇದೆ.

ವಾಗೀಶ—ನಮ್ಮ ಉದ್ದೇಶವು ಸಿದ್ಧಿಯಾಗುವ ಬಗೆಗೆ ನಾವು ಉಪಾಯವನ್ನು ಕಂಡು ಹಿಡಿಯಲೇ ಬೇಕು. ನಾವು ಹೀಗೆ ತಲೆಯ ಮೇಲೆ ಕೈಯನ್ನು ಹೊತ್ತುಕೊಂಡು ಕುಳಿತರೆ ನಮಗೆ ಗತಿ ಗೋತ್ರವಿಲ್ಲ. ನಾನು ಚಿಂತಿಸಿ ಹೇಳುವುದಕ್ಕೆ ಬಂದುದೇನೆಂದರೆ—

ತಾಂತಿಯ ಭಿಲ್ಲನು ನಮಗೆ ಮಾತ್ರಕ್ಕೆ ಶತ್ರುವೆಂದು ತಿಳಿಯಬಾರದು. ಆತನು ಸಮಾಜಕ್ಕೆ ಶತ್ರು, ಆತನು ದೇಶಕ್ಕೆಲ್ಲಾ ಶತ್ರು. ಅವನನ್ನು ದಸ್ತಗಿರಿ ಮಾಡುವುದಕ್ಕಾಗಿ ಪೋಲೀಸಿನವರು ಆನಾಗಲೂ ಕಾದಿರುವರು. ಆದರೆ ಈ ಧೂರ್ತನು ಇಂದಿನ ವರೆಗೂ ಎಲ್ಲರ ಕಣ್ಣಿಗೆ ಮಣ್ಣೆರಚಿಕೊಂಡೇ ಬಂದಿರುವನು. ನಾವು ಆವಬಗೆಯಲ್ಲಾದರೂ ಆತನನ್ನು ಕೊಂದುಬಿಡುವುದಾದರೆ, ನಮಗೆ ಕ್ಷೇಮವುಂಟಾಗುವುದು ಮಾತ್ರವೇ ಅಲ್ಲದೆ ಲೋಕಕ್ಕೆಲ್ಲಾ ಕ್ಷೇಮವುಂಟಾಗುವುದು. ಇದರಿಂದ ನಮಗೆ ಲೋಕದಲ್ಲಿ ಖ್ಯಾತಿ ಗೌರವಗಳು ಬರುವುವು.

ಕಲ್ಯಾಣ—(ಔದಾಸೀನ್ಯದಿಂದ) ಒಳ್ಳೆಯ ಆಲೋಚನೆಯೇ ಸರಿ. ಆದರೆ ಬೆಕ್ಕಿನ ಕತ್ತಿನಲ್ಲಿ ಗಂಟೆ ಕಟ್ಟುವವರಾರು?

ವಾಗೀಶ—ಅದನ್ನು ಕುರಿತು ನೀವು ಚಿಂತಿಸಬೇಕಾದುದಿಲ್ಲ. ನಾನು ಕೆಲವು ದಿನಗಳ ಕೆಳಗೆ ಈಶ್ವರೀದುರ್ಗಕ್ಕೆ ಹೋಗಿದ್ದೆನು. ಆ ದುರ್ಗಕ್ಕೂ ಹೊಗೆ ಬಂಡಿಯ ನಿಲ್ದಾಣಕ್ಕೂ ಪ್ರಾಯಿಕವಾಗಿ ಹತ್ತೆಂಟು ಮೈಲಿಗಳ ಅಂತರವಿರುವುದು ನಿಮಗೂ ತಿಳಿದ ವಿಷಯವೇ ಆಗಿರುವುದು. ದುರ್ಗಮಾರ್ಗವಾದರೋ ಅತ್ಯಂತ ದುರ್ಗಮವಾಗಿರುವುದು. ಕೆಲವೆಡೆಗಳಲ್ಲಿ ಕಣಿವೆಗಳ ಮೂಲಕವಾಗಿಯೇ ನಾವು ಹೋಗಬೇಕಾಗುವುದು. ಆಗ ಅಲ್ಲಿ ಎಂತಹವನಿಗಾದರೂ ಎದೆ ನಡುಗದೇ ಇರದು. ಇದನ್ನು ನೀವು ಎಂದಾದರೂ ಅನುಭವಿಸಿರುವಿರಾ?

ಕಲ್ಯಾಣ—ನೀವು ಹೇಳುವುದೆಲ್ಲವೂ ನಿಜವಾದುದು. ಹೊಗೆ ಬಂಡಿಯ ನಿಲ್ದಾಣಕ್ಕೆ ಐದು ಮೈಲಿಗಳ ದೂರದಲ್ಲಿಯೇ ಆ ಭಯಂಕರವಾದ ಪ್ರದೇಶವಿರು

ವುದು. ಅಲ್ಲಿ ಕಾಲದಾರಿಯು ಸಣ್ಣನಾಗಿರುವುದು. ದಾಯ ತಪ್ಪಿತೆಂದರೆ, ಮನುಷ್ಯನು ಅಧಃಪಾತಾಲಕ್ಕೆ ಬಿದ್ದು ನುಚ್ಚುನೂರಾಗಿ ಹೋಗುವನು.

ವಾಗೀಶ—ಆ ಪ್ರದೇಶವು ನನಗೆ ಚೆನ್ನಾಗಿಯೂ ಗೊತ್ತು. ನಾನು ತಾಂತಿಯಾ ಭಿಲ್ಲನನ್ನು ಚೆನ್ನಾಗಿಯೂ ಬಲ್ಲೆನು. ಅವನು ಎಂದಾದರೊಂದು ದಿನ ಈಶ್ವರೀದುರ್ಗಕ್ಕೆ ಹೋಗಬೇಕಾದ ಸಂದರ್ಭದಲ್ಲಿ, ಹೊಗೆ ಬಂಡಿಯಲ್ಲಿ ಸಂಚರಿಸದೆ ಒಂದು ಗಾಡಿಯನ್ನು ಬಾಡಿಗೆಗೆ ತೆಗೆದುಕೊಂಡು ಅದರಲ್ಲಿ ತಾನೊಬ್ಬನೇ ಕುಳಿತುಕೊಂಡುಬರುವನು. ಆತನು ಸಾಮಾನ್ಯವಾಗಿ ಆರನ್ನೂ ನಂಬತಕ್ಕವನಲ್ಲ.

ಕಲ್ಯಾಣ—ಆತನು ಈಶ್ವರೀದುರ್ಗಕ್ಕೆ ಏತಕ್ಕೆ ಬರುವನು ? ನಮ್ಮಂತೆ ಯೇ ಆತನಿಗೂ ಪ್ರಾಣಭಯವಿದ್ದೇ ಇರುವುದು. ಅದರಲ್ಲಿಯೂ ನಾವು ಆತ ನಿಗೆ ಎಂತಹ ಹಿತೈಷಿಗಳೆಂಬುದನ್ನು ಅವನು ಚೆನ್ನಾಗಿಯೂ ಅರಿತುಕೊಂಡೇ ಇರುವನು. ಹೀಗಿರುವಲ್ಲ ನಾವು ಆವ ಯುಕ್ತಿಯನ್ನು ಅವಲಂಬಿಸಿ ಆತನನ್ನು ಅಲ್ಲಿಗೆ ಬರಮಾಡಿಕೊಳ್ಳಬಹುದು ? ಹೇಳೋಣವಾಗಲಿ.

ವಾಗೀಶ—ತಾಂತಿಯನು ಭಿಲ್ಲಜಾತಿಗೆ ಸೇರಿದವನಾದುದರಿಂದ, ಅವನಿಗೆ ಬೇಟೆಯಾಡುವುದರಲ್ಲಿ ತುಂಬಾ ಅಭಿಲಾಷೆಯುಂಟು. ಆತನು ಪರಾಕ್ರಮಶಾಲಿಗ ಳಂತೆ ಸಹಜವಾದ ಸಾಹಸಿಯು ; ಆತನು ಸಾಮಾನ್ಯರಂತೆ ಹೇಡಿಯಲ್ಲ. ಆತನು ಕಳ್ಳನಾದರೂ ದೊಡ್ಡ ಮನುಷ್ಯನಾಗಿರುವನು. ನಾಳೆ ಬೆಳಗಾದ ಕೂಡಲೆ ನೀವು ಸ್ನೇಹ ಭಾವವನ್ನು ನಟಿಸಿ ನಿಮ್ಮ ಜಹಗೀರಿಯಲ್ಲಿ ಬೇಟೆಯಾಡುವುದ ಕ್ಕಾಗಿ ಅವನಿಗೆ ಆಹ್ವಾನ ಪತ್ರಿಕೆಯೊಂದನ್ನು ಕಳುಹೋಣವಾಗಲಿ. ಬೇಟೆ ಯಾಡಿದ ಕೂಡಲೆ ಭೋಜನಮಾಡಿದ ಬಳಿಕ ಹಣವನ್ನು ಸಲ್ಲಿಸಿ ಮರ್ಯಾದೆ ಯೊಡನೆ ಕಳುಹುವೆನೆಂಬ ಮುಖ್ಯವಾದ ಅಂಶವನ್ನು ಮಟ್ಟಿಗೆ ಆ ಕಾಗದದಲ್ಲಿ ಬರೆವುದನ್ನು ಮರೆಯಬೇಡಿರಿ. ಕಂಡಿರಾ ? ಈ ಕಾಗದವನ್ನು ನೋಡಿದ ಕೂಡಲೆ ಆತನು ತಮ್ಮ ಪ್ರಾರ್ಥನೆಯನ್ನು ತಿರಸ್ಕರಿಸಲಾರನು.

ಕಲ್ಯಾಣ—ನಿಮ್ಮ ಮಾತು ಬಕಬಂಧನ ಕೌಶಲವೇ ಹೊರತು ಬೇರ ಯಲ್ಲ. ಇಷ್ಟು ಸುಲಭವಾಗಿ ಅವನು ಹಳ್ಳಕ್ಕೆ ಬೀಳತಕ್ಕವನಲ್ಲ.

ವಾಗೀಶ—ನಾವು ಹೀಗೆ ಮಾಡುವುದಕ್ಕಾದರೂ ಏನ ಕಷ್ಟಪಡಬೇಕು ? ಅವನು ಇದನ್ನು ಸಮ್ಮತಿಸದೇ ಹೋದರೆ, ಬೇರೊಂದುಪಾಯವನ್ನು ಚಿಂತಿಸಿದ ರಾಯಿತು.

ಕಲ್ಯಾಣ—(ನಡುಗಿದವನಾಗಿ) ಇದಕ್ಕಿಂತಲೂ ಬೇರೆಯಾದ ಉಪಾಯವನ್ನು ಚಿಂತಿಸೋಣವಾಗಲಿ. ನಾವು ಅವನನ್ನು ಕೊಲ್ಲುವುದಕ್ಕೆ ಯುಕ್ತಿ ಮಾಡುವುದರೊಳಗಾಗಿ ಆತನೇ ನಮ್ಮನ್ನು ಕೊಂದುಬಿಟ್ಟಿರುವನು. ನನಗೇನೋ ಭಯವೇ ಆಗುತ್ತಿರುವುದು. ಆತನನ್ನು ಕರೆವುದು "ಬೀದಿಯ ಮಾರಮ್ಮ ಮನೆ ಹೊಕ್ಕು ಹೋಗಮ್ಮ" ಎಂಬ ಗಾದೆಗೆ ಸರಿಹೋಗುವುದು.

ವಾಗೀಶ—ಉಪಾಯಗಳಿಗೇನೂ ದರಿದ್ರವಿಲ್ಲ. ಅವನು ಇಲ್ಲಿಗೆ ಬರಲಿ, ಬಳಿಕ ನಾವು ಅವನನ್ನು ಹಿಡಿದುಕೊಂಡು ಹೋಗಿ ನಮ್ಮ ಸೌಭಾಗ್ಯ ಮಂದಿರದಲ್ಲಿ ನಿರ್ಬಂಧಿಸಿ ಬಿಡೋಣ. ಆ ಮೇಲೆ ಅವನ ಮುಂದಣ ಪರಿಣಾಮವನ್ನು ನಾನು ನೋಡಿಕೊಳ್ಳುವೆನು.

ಕಲ್ಯಾಣ—ಕೆಲಸವು ಎಂತಹ ಕಠಿನವೆಂಬುದನ್ನಾದರೂ ಆಲೋಚಿಸಿರುವಿರಾ? ಇಷ್ಟು ಅಸಾಧ್ಯವಾದುದನ್ನು ಸಾಧಿಸುವುದಕ್ಕೆ ನಿಮಗೆ ಸಾಹಸವೆಲ್ಲಿಯದು?

ವಾಗೀಶ—ಸಾಹಸವೇ! ನನ್ನೊಡನೆ ತಮಗೆ ಇಷ್ಟು ಪರಿಚಯವಿದ್ದರೂ, ನನ್ನ ಸಾಹಸವು ನಿಮಗಿನ್ನೂ ಗೊತ್ತಾಗದಿರುವುದಕ್ಕಾಗಿ ನಾನು ವ್ಯಸನಪಡುವೆನು. ನಿಮ್ಮ ಹಾಗೆ ನನಗೂ ಹಣವಿದ್ದಿದ್ದರೆ ಆ ದಾರಿಯೇ ಬೇರೆಯಾಗಿರುತ್ತಿದ್ದಿತು. ಆದರೆ ನಾನು ದಟ್ಟದರಿದ್ರನು. ಈಗ ಅದನ್ನಾಡಿಕೊಂಡು ಫಲವೇನು?

ಕಲ್ಯಾಣಮಲ್ಲನು ಮಹಾ ಪಾಪಿಷ್ಠನಾದರೂ, ನರಹತ್ಯೆಯನ್ನು ಅವನು ಆವಾಗಲೂ ಮಾಡಿದವನಲ್ಲ. ಅದುಕಾರಣ ವೈದ್ಯನ ನರಹತ್ಯಾ ವಿಷಯಕವಾದ ದುರಭಿಸಂಧಿಯನ್ನು ಕೇಳಿ ತಲ್ಲಣಿಸಿಹೋದನು. ಈ ವಿಷಯದಲ್ಲಿ ವೈದ್ಯನೊಡನೆ ಹೆಚ್ಚಾಗಿ ಮಾತನ್ನು ಬಳೆಯಿಸುವುದಕ್ಕೆ ಅವನ ಮನವು ಒಡಂಬಡಲಿಲ್ಲ. ಶತ್ರು ಆವರೀತಿಯಲ್ಲಾದರೂ ನಿರ್ಮೂಲಮಾಡಿ ತಾನು ನಿಷ್ಕಂಟಕನಾಗಬೇಕೆಂದು ಅವನ ಅಭಿಪ್ರಾಯವು. ತನ್ನ ಕೈಯಿಂದಲೇ ನರಹತ್ಯೆಯನ್ನು ಮಾಡಲು ಆತನು ಸಮ್ಮತಿಸದೇ ಹೋದನು.

ಕಲ್ಯಾಣಮಲ್ಲನು ಕೊಂಚ ಹೊತ್ತು ಸುಮ್ಮನಿದ್ದು ಬಳಿಕ ಇಂತೆಂದನು:—"ತಾವು ಆವ ರೀತಿಯಿಂದಾದರೂ ಶತ್ರುವನ್ನು ನಿಪಾತಮಾಡೋಣವಾಗಲಿ. ಅದರಲ್ಲಿ ನನ್ನ ಅಡ್ಡಿಯೇನೂ ಇರುವುದಿಲ್ಲ. ಒಬ್ಬ ಬೀದಿಯ ಬಿಕಾರಿಗೆ ನನ್ನ ಐಶ್ವರ್ಯವೆಲ್ಲವನ್ನೂ ಕೊಟ್ಟು ಬಿಟ್ಟು ನಾನು ಬೀದಿಯ ಬಿಕಾರಿಯಾಗುವು

ದಲ್ಲದೇ ಕಾರಾಗೃಹದಲ್ಲಿಯೂ ವಾಸಮಾಡಬೇಕಾದೀತು. ಇದು ನನ್ನಿಂದಾಗ ಲಾರದು, ಎಂದು ತನ್ನ ಅಭಿಪ್ರಾಯವನ್ನು ಸೂಚಿಸಿದನು.

ವಾಗೀಶ—(ನಕ್ಕು) ಬೀದಿಯ ಬಿಕಾರಿಯಾಗಬೇಕೆಂದು ನಿಮಗೆ ಹೇಳಿ ದವರಾರು? ನಿಮ್ಮ ಸ್ವಾರ್ಥದೊಡನೆ ನನ್ನ ಸ್ವಾರ್ಥವೂ ಸೇರಿಕೊಂಡಿರುವು ದಲ್ಲವೇ? ನೀವು ಬಿಕಾರಿಯಾದ ಕೂಡಲೆ ನನ್ನ ಪ್ರಯೋಜನದ ಬಾಯಿಗೆ ಮಣ್ಣು ಬಿದ್ದೇ ಹೋಗುವುದು. ಆದುದರಿಂದ ನಿಮ್ಮ ಸ್ವಾರ್ಥದ ರಕ್ಷಣೆಗಾಗಿ ನಾನು ಪ್ರಾಣನಿರುವ ವರೆಗೂ ಯತ್ನಮಾಡಿ ನೋಡುವೆನು. ಇಂದು ನನ್ನ ಮನಸ್ಸು ಅಷ್ಟಾಗಿ ಶಾಂತವಾಗಿಲ್ಲ. ಮನೋವಿನೋದನಕ್ಕಾಗಿ ಆವುದಾದ ರೊಂದು ನಾಟಕಕ್ಕಾದರೂ ಹೋಗುವ ನಡೆಯಿರಿ.

ಕಲ್ಯಾಣ—ನನ್ನ ಮನಸ್ಸಂತೂ ಕೆಟ್ಟೇ ಹೋಗಿರುವುದು. ಈ ಸಮ ಯದಲ್ಲಿ ಮನೆಯಲ್ಲಿರುವುದಕ್ಕೆ ನನಗೆ ತುಂಬಾ ಬೇಸರವಾಗಿ ಹೋಗಿರುವುದು. ನಾವು ಎಲ್ಲಿಗಾದರೂ ಹೋಗಿ ಈ ತಾಂತಿಯಾ ಭಿಲ್ಲಿನ ಹೆದರಿಕೆಯನ್ನು ಮರೆಯಲೇ ಬೇಕು. ಇಲ್ಲವಾದರೆ ನನಗೆ ಹುಚ್ಚೇ ಹಿಡಿದು ಹೋಗುವುದು.

---

## ಐದನೆಯ ವಿಲಾಸ

### ದುಃಖಿನಿಯ ದುಃಖವೃತ್ತಾಂತ

ಸಂಧ್ಯೆಯು ಕಳೆದು ರಾತ್ರಿಯಾಗಿ ಹೋಗಿರುವುದು. ಅಂದು ಎಂದೂ ಇಲ್ಲದ ಶೀತವು ಜನರನ್ನು ಕೊರೆಯುತ್ತಿರುವುದು. ಮಂಜು ಮಳೆಯಂತೆ ಸುರಿ ಯುತ್ತಿರುವುದು. ಇದನ್ನು ಕಣ್ಣಿನಿಂದ ನೋಡಿದವರಿಗಲ್ಲದೆ ಇತರರಿಗೆ ಇದರ ರೀತಿ ನೀತಿಗಳು ಎಷ್ಟು ವರ್ಣಿಸಿದರೂ ಬುದ್ಧಿಗೆ ಗೋಚರಿಸಲೊಲ್ಲದು. ಇದ್ದು ದನ್ನು ಇದ್ದಹಾಗೆ ವರ್ಣಿಸುವುದಕ್ಕೂ ನಮ್ಮ ಭಾಷಾ ಪ್ರಪಂಚದಲ್ಲಿ ಸರಿಯಾದ ಮಾತುಗಳೇ ಸಿಕ್ಕಲಾರವು—ಎಂದ ಮೇಲೆ, ನಾವು ಮಾಡತಕ್ಕುದೇನಿರುವುದು.

ಇಂತಹ ರಾತ್ರಿಯಲ್ಲಿ ರಾಜನಗರದ ನಾಯಕನ ಪೇಟೆಯ ಪ್ರಸಿದ್ಧ ಪತ್ತೇ ದಾರನಾದ ಅರಿಂದಮನು ತನ್ನ ಶಿಷ್ಯನಾದ ದೇವೇಂದ್ರ ವಿಜಯನೊಡನೆ ಲೋಕ ಸ್ಥಿತಿಯನ್ನು ಕುರಿತು ಆವಾವುದೋ ಮಾತನ್ನಾಡುತ್ತಿದ್ದನು. ದೇವೇಂದ್ರನು ಮಾತ ನಾಡುತ್ತಿದ್ದ ಹಾಗೆಯೇ ವಾತಾಯನದ ಬಳಿಗೆ ಬಂದು ಹೊರಗಣ ಪರಿಸ್ಥಿತಿಯನ್ನು ನೋಡಿದನು. ಉಜ್ಜ್ವಲವಾದ ದೀಪಮಾಲೆಯು ಮಂಜಿನಿಂದ ವಸ್ತ್ರಾವೃತವಾ ಗಿದ್ದಂತೆ ತೋರಿಬಂದಿತು. ಆತನು ಇದನ್ನು ನೋಡಿ ಅಚ್ಚರಿಗೊಂಡವನಾಗಿ ಗುರು

ಮಹಾಶಯನನ್ನು ಕುರಿತು—ದೇವ! ಇದೆಂತಹ ಭಯಾನಕವಾದ ರಾತ್ರಿಯು! ಮಂಜಿನ ಪ್ರಭಾವದಿಂದ ಹೊರಗೆ ಸಂಚರಿಸುವವರ ಒಬ್ಬರ ಮುಖ ಒಬ್ಬರಿಗೆ ಕಾಣಿಸಲೊಲ್ಲದು. ಕಳ್ಳಕಾಕರ ಹಾವಳಿಗೆ ಇದು ತಕ್ಕ ಕಾಲವೇ ಆಗಿರುವುದು. ಈ ರಾತ್ರಿಯಲ್ಲಿ ಎಷ್ಟು ಜನರು ತಮ್ಮ ತಮ್ಮ ಆಸ್ತಿಪಾಸ್ತಿಗಳನ್ನು ಕಳೆದುಕೊಂಡು ಸಂಕಟಪಡುವರೋ ದೇವರೊಬ್ಬನೇ ಬಲ್ಲನು, ಎಂದನು.

ಅರಿಂದಮ—ಕಳ್ಳರ ಹಣೆಯ ಬರೆಹ! ಇಂತಹ ರಾತ್ರಿಯಲ್ಲಿಯೂ ಕಳ್ಳತನಕ್ಕೆ ಹೋಗಬೇಕಾದರೆ, ಅವನಿಗೆ ನಿಜವಾಗಿಯೂ ಒಪ್ಪೊತ್ತಿನ ಕೂಳಿಗೂ ಮಾರ್ಗವಿಲ್ಲದೇ ಇರಬೇಕು. ಅಕಟ! ಹೊಟ್ಟೆಗೆ ದಯಾ ದಾಕ್ಷಿಣ್ಯಗಳೇ ಇಲ್ಲ. ಹೊಟ್ಟೆಯು ತನ್ನವರಲ್ಲಿಯೇ ಹೀಗೆ ವರ್ತಿಸುತ್ತಿರುವಲ್ಲಿ, ಇತರರ ವಿಷಯದಲ್ಲಿ ಅದಕ್ಕೆ ಮರುಕವೆಂದರೇನು. ನಾವು ಅಂತಹ ದಯಾದರಿದ್ರವಾದ ಹೊಟ್ಟೆಯನ್ನು ನಂಬಿ ಕೆಡುತ್ತಿರುವೆವು.

ಆ ದಿನ ಅರಿಂದಮನಿಗೆ ಮಾಡುವುದಕ್ಕೆ ವಿಶೇಷವಾದ ಕೆಲಸವೇನೂ ಇರಲಿಲ್ಲವಾಗಿ, ಆತನು ದೇವೇಂದ್ರನೊಡನೆ ಸರಸಸಲ್ಲಾಪಗಳಿಂದ ಕಾಲವನ್ನು ಕಳೆಯುತ್ತಿದ್ದನು. ದೇವೇಂದ್ರನಾದರೋ ರಾತ್ರಿ ಪ್ರಕೃತಿಯ ಸೌಂದರ್ಯವನ್ನು ನೋಡಿ ಭಗವಂತನ ಲೀಲಾವಿಲಾಸವನ್ನು ಕೊಂಡಾಡಿಕೊಳ್ಳುತ್ತಿದ್ದನು. ಆಗ ಯುವತಿಯೊಬ್ಬಳು ಬೀದಿಯಲ್ಲಿ ಸಂಚರಿಸುತ್ತಾ ಆ ಕಿಟಕಿಯ ಬಳಿ ಬಂದು ನಿಂತಳು. ದೇವೇಂದ್ರನು ಆಕೆ ಆರಿರಬಹುದೆಂದು ನೋಡಿದನು. ಆ ಯುವತಿಯು ಒಂದು ಸಣ್ಣ ಮಗುವನ್ನು ಎತ್ತಿಕೊಂಡು ಆ ಕಿಟಕಿಯ ಬಳಿಯಿದ್ದ ದೀಪಸ್ತಂಭದ ಹತ್ತಿರ ನಿಂತಿದ್ದಳು. ಇಂತಹ ದಾರುಣವಾದ ಚಳಿಯ ಹೊತ್ತಿನಲ್ಲಿ ಒಬ್ಬ ಹೆಂಗುಸು ಸಣ್ಣಮಗುವನ್ನು ಎತ್ತಿಕೊಂಡು ನಿಂತಿರುವುದನ್ನು ನೋಡಿ ವಿಸ್ಮಿತನಾಗಿ, ಗುರುವನ್ನು ಕುರಿತು—ದೇವ! ಒಬ್ಬ ರಮಣಿಯು ಮಗುವನ್ನು ಎತ್ತಿಕೊಂಡು ನಮ್ಮ ಕಿಟಕಿಯ ಹತ್ತಿರ ನಿಂತು ಅಡಿಗಡಿಗೆ ನಮ್ಮ ಕಡೆಯೇ ನೋಡುತ್ತಿರುವಳು. ಅವಳಾರೋ? ಅವಳು ಏತಕ್ಕೆ ಬಂದಿರುವಳೋ? ಅವಳ ಉದ್ದೇಶವಾದರೂ ಏನೋ? ಒಂದೂ ಗೊತ್ತಾಗಲೊಲ್ಲದು, ಎಂದು ತಿಳಿಸಿದನು.

ಅರಿಂದಮ—ಬಹುತರವಾಗಿ ಆಕೆಯು ನಮ್ಮನ್ನು ನೋಡಬೇಕೆಂದೇ ಇಲ್ಲಿಗೆ ಬಂದಿರಬಹುದು. ಈ ಅಕಾಲದಲ್ಲಿ ಮನೆಯೊಳಗೆ ಬರಲು ಆಕೆಗೆ ಸಂಕೋಚವಾಗಿ ಹೊರಗೇ ನಿಂತಿರಬೇಕು. ನೀನು ಆಕೆಯ ಬಳಿಗೆ ಹೋಗಿ, ಆಕೆಯ ಉದ್ದೇಶವೇನೆಂಬುದನ್ನು ತಿಳಿದುಕೊಂಡು ಬಾ. ಇಷ್ಟು ಹೊತ್ತಿನಲ್ಲಿ

ಆಕೆಯು ಮನೇ ಬಿಟ್ಟು ಹೊರಗೆ ಬರಬೇಕಾದರೆ ಅವಳಿಗೇನೋ ವಿಪತ್ತು ಸಂಭವಿಸಿರಬೇಕು. ಹೇಗಾದರೂ ಆಗಲಿ : ನೀನು ಹೋಗಿ ಆಕೆಯನ್ನು ಇಲ್ಲಿಗೆ ಕರೆದುಕೊಂಡು ಬಾ.

ದೇವೇಂದ್ರನು ತಡಮಾಡದೆ ಕೆಳಗಿಳಿದು ಹೋಗಿ ಆ ಹೆಂಗುಸನ್ನು ಜತೆಯಲ್ಲಿಯೇ ಕರೆದುಕೊಂಡು ಬಂದು ಅರಿಂದಮನ ಬಳಿಯಲ್ಲಿ ಬಿಟ್ಟನು.

ರಮಣಿಯು ಇನ್ನೂ ಚಿಕ್ಕವಯಸ್ಸಿನ ಯುವತಿಯು. ಆಕೆಯು ಎರಡು ವರ್ಷ ವಯಸ್ಸಿನ ಮಗುವನ್ನು ಕೌಂಕುಳಲ್ಲಿ ಎತ್ತಿಕೊಂಡಿರುವಳು. ಹೊದೆಯುವುದಕ್ಕೆ ಶಾಖವಾದ ಬಟ್ಟೆಗಳಿಲ್ಲದಿರುವುದರಿಂದ ಮಗುವು ಒಂದೊಂದು ವೇಳೆ ನಡುಗುತ್ತಲೂ ಒಂದೊಂದು ವೇಳೆ ಅಳುತ್ತಲೂ ಇರುವುದು. ಯುವತಿಗೂ ಇದೇ ಅವಸ್ಥೆಯಾಗಿದ್ದಿತು. ಅರಿಂದಮನು ಹೆಂಗುಸಿನ ಈ ಅವಸ್ಥೆಯನ್ನು ನೋಡಿ, ಈಕೆಯು ದರಿದ್ರಳೂ ವಿಪನ್ನಳೂ ಆಗಿರಬೇಕೆಂದು ಆಲೋಚಿಸಿದ ಕೂಡಲೆ ಅವನ ಮನಸ್ಸು ಕರಗಿ ಕರಗಿ ನೀರಾಗಿ ಹರಿದು ಹೋಯಿತು. ಬಳಿಕ ಆತನು ಆಕೆಯನ್ನು ಕುಳಿತುಕೊಳ್ಳುವಂತೆ ಹೇಳಿ, ಆಕೆಗೆ ಬಿಸಿಬಿಸಿಯಾದ ಟೀಯನ್ನು ತಂದುಕೊಡುವಂತೆ ದೇವೇಂದ್ರನಿಗೆ ಅಪ್ಪಣೆಮಾಡಿದನು.

ದೇವೇಂದ್ರನು ಟೀಯನ್ನು ತರಲು ತೆರಳಿದನು.

ಯುವತಿಯು ಒಂದೆಡೆಯಲ್ಲಿ ಕುಳಿತುಕೊಂಡು ಕಾತರಭಾವದಿಂದ — ಸ್ವಾಮಿ ! ತಾವು ಪರಮದಯಾಳುಗಳೆಂದು ಜನರು ಆಡಿಕೊಳ್ಳುತಿದ್ದುದನ್ನು ನಾನು ಎಷ್ಟೋ ಸಲ ಕೇಳಿದ್ದೆನು. ನಾನು ಇಲ್ಲಿಗೆ ಬಂದ ಮೇಲೆ ಅದು ಸ್ಥಿರಪಟ್ಟಿತು. ನಾನು ಹೆಂಗುಸು ; ಆವ ರೀತಿಯಲ್ಲಿ ನಿಮ್ಮ ಉಪಕಾರವನ್ನು ಸ್ಮರಿಸಬೇಕೋ ನನಗೆ ತಿಳಿಯದು. ನಾನು ನಿಮಗೆ ಅನೇಕ ಸಂಗತಿಗಳನ್ನು ತಿಳಿಸಬೇಕೆಂದು ಇಲ್ಲಿಗೆ ಬಂದೆನು, ಆದರೆ ನಿಮ್ಮ ಮನೆಯೊಳಗೆ ತಟ್ಟನೆ ನುಗ್ಗಿ ಬರುವುದಕ್ಕೆ ನನಗೆ ಧೈರ್ಯವುಂಟಾಗಲಿಲ್ಲ, ಎಂದು ಮೃದುವಾಗಿ ಮಾತನಾಡಿದಳು.

ಅರಿಂದಮ—ತಾಯಿ ! ನನ್ನ ಮನೆಯು ಎಲ್ಲರಿಗೂ ತೆರದ ಬಾಗಿಲಾಗಿರುವುದರಿಂದ, ನೀನು ನಿಶ್ಶಂಕವಾಗಿ ನಮ್ಮ ಮನೆಗೆ ಬರಬಹುದಮ್ಮ. ಒಳಗೆ ಬರಲು ಅಡ್ಡಿಮಾಡುವುದಕ್ಕೆ ದೊಡ್ಡ ಮನುಷ್ಯರ ಮನೆಯ ಹಾಗೆ ಆಳುಕಾಳುಗಳು ನನ್ನಲ್ಲಿಲ್ಲ. ನನ್ನ ಮನೆಗೆ ಆರು ಆವಾಗಲಾದರೂ ಬರಬಹುದು. ಅಡ್ಡಿಯೇನೂ ಇರಲಾರದು. ನೀನು ನನ್ನನ್ನು ನೋಡುವುದಕ್ಕಾಗಿಯೇ ಬಂದಿರಬಹುದೆಂದು ತಿಳಿದೇ ನಾನು ನಿನ್ನನ್ನು ಇಲ್ಲಿಗೆ ಬರಮಾಡಿಕೊಂಡೆನು. ನೀನು

ನನ್ನಲ್ಲಿಗೆ ಬಂದಿರುವ ಕಾರಣವೇನೆಂಬುದನ್ನು ಸಂಕೋಚವಿಲ್ಲದೆಯೇ ಹೇಳಬಹುದು.

ಇಷ್ಟೆನ್ನುವುದರೊಳಗಾಗಿ ದೇವೇಂದ್ರನು ಬಿಸಿಬಿಸಿ ಟೀಯನ್ನು ತಂದನು. ಅರಿಂದಮನು ಅದನ್ನು ಆಕೆಯ ಮುಂದಿರಿಸಿ—ತಾಯೇ! ನೀನು ಚಳಿಯಿಂದ ನಡುಗುತ್ತಿರುವೆ. ಇದನ್ನು ನೀನು ಕುಡಿದು ಕೊಂಚ ಹೊತ್ತು ವಿಶ್ರಮಿಸಿಕೊಂಡ ಬಳಿಕ ನಿನ್ನ ಹೇಳಿಕೆಯೆಲ್ಲವನ್ನೂ ಸಾವಧಾನವಾಗಿ ಕೇಳುವೆನು. ನೀನು ಸಂಕೋಚಪಡದೇ ಸ್ವಂತ ಮನೆಯಲ್ಲಿದ್ದಂತೆಯೇ ಭಾವಿಸಿಕೊಳ್ಳು, ಎಂದನು.

ಯುವತಿಯು ಟೀಯನ್ನು ಕುಡಿದು ಶರೀರವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಮಗುವನ್ನು ತೊಡೆಯ ಮೇಲೆ ಮಲಗಿಸಿ ಅರಿಂದಮನನ್ನು ಕುರಿತು ಇಂತೆಂದಳು:—"ಚಳಿಯಿಂದ ಹೋಗಿದ್ದ ಪ್ರಾಣವು ತಮ್ಮ ದಯೆಯಿಂದ ಮತ್ತೆ ಬಂದಂತಾಯಿತು. ಇನ್ನು ನನ್ನ ವಿಷಯವನ್ನು ಅರಿಕೆಮಾಡಿಕೊಳ್ಳುವೆನು. ನಾನು ತಮ್ಮ ಅನುಗ್ರಹವನ್ನು ಕೇಳಿ ಪಡೆದುಕೊಳ್ಳುವುದಕ್ಕಾಗಿ ಇಲ್ಲಿಗೆ ಬಂದಿರುವೆನು. ನಾನು ಅತ್ಯಂತ ದುಃಖಿನಿ. ತಾವು ಪರದುಃಖದುಃಖಿತರೆಂದು ತಿಳಿದೇ ತಮ್ಮಲ್ಲಿಗೆ ಬಂದಿರುವೆನು. ನಾನು ದರಿದ್ರಳು, ಅದರ ಜತೆಯಲ್ಲಿ ವಿಪನ್ನಳೂ ಆಗಿರುವೆನು, ಎಂದು ನುಡಿದಳು.

ಅರಿಂದಮ—ವಿಪನ್ನರಿಗೆ ಒತ್ತಾಸೆಯಾಗುವುದೇ ನನ್ನ ವ್ರತವು. ಅಲ್ಲದೆಯೂ ದರಿದ್ರರಿಗೆ ಸಾಹಾಯ್ಯವನ್ನೆಸಗುವುದೇ ನನ್ನ ಧರ್ಮವು. ನಿನ್ನ ವಿಪತ್ತಾದರೂ ಎಂಥದೆಂಬುದನ್ನು ಸಂಕೋಚವಿಲ್ಲದೆಯೇ ತಿಳಿಸಮ್ಮ.

ಯುವತಿ—(ಕ್ಷಣಕಾಲ ಸುಮ್ಮನಿದ್ದು) ಪೂಜ್ಯ ಮಹಾಶಯ! ನನ್ನ ಹೆಸರು ನಿತ್ಯಮಂಗಳಾ. ಇದು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗು.

ಯುವತಿಯು ಹೀಗೆ ಹೇಳಿ ಉಕ್ಕಿಬಂದ ಕಣ್ಣೀರನ್ನು ಸೀರೆಯ ಸೆರಗಿನಿಂದ ತೊಡೆದುಕೊಂಡು ಮತ್ತೆ ಮಾತನಾಡತೊಡಗಿದಳು. "ಮಹಾಶಯ! ಈ ಮಗುವೂ ಹುಟ್ಟಿತು, ಇದರ ಜತೆಯಲ್ಲಿಯೇ ನನ್ನ ದುಃಖಪರಂಪರೆಯೂ ಪ್ರಾರಂಭವಾಯಿತು. ಈಗ ನನಗೆ ಹದಿನೆಂಟು ವರ್ಷ ವಯಸ್ಸು. ಇಂದಿಗೆ ನಾಲ್ಕು ವರ್ಷಗಳ ಹಿಂದೆ ನನಗೆ ವಿವಾಹವಾಯಿತು. ವಿವಾಹಕಾಲದಲ್ಲಿ ನನ್ನ ಸ್ವಾಮಿಗೆ ಇಪ್ಪತ್ತಾರು ವಯಸ್ಸಾಗಿದ್ದಿತು. ನನ್ನ ಸ್ವಾಮಿಯ ರೂಪಗುಣಗಳನ್ನು ನೋಡಿದರೆ, ನಾನು ಆತನಿಗೆ ಅನುರೂಪಳಾದ ಹೆಂಡಿತಿಯಾಗುವುದಕ್ಕೆ ತಕ್ಕವಳೇ ಅಲ್ಲ. ಆದರೂ ಆತನು ನನ್ನನ್ನು ಮೋಹಿಸಿ ವರಿಸಿದನು. ನಾನು ನನ್ನ ಸ್ವಾಮಿಯನ್ನು ಪರದೇವತೆಯೆಂದೇ ತಿಳಿದಿರುವೆನು. ಆತನ ಅನುರಾಗ ವಿಶೇಷದಿಂದ ಸಂಸಾರ

ದಲ್ಲಿ ನನಗುಂಟಾದ ಸುಖಕ್ಕೆ ಎಲ್ಲೆಯೇ ಇರಲಿಲ್ಲ. ಆತನು ಒಂದಾನೊಂದು ದಿನ ನನ್ನನ್ನು ಕುರಿತು—ಪ್ರಿಯೇ! ನಿನ್ನನ್ನು ನಾನು ಮದುವೆಯಾಗಿ ನನ್ನ ಕುಲದವರನ್ನು ತ್ಯಾಗಮಾಡಬೇಕಾಯಿತು, ಎಂದು ತಿಳಿಸಿದ್ದನು

ಆತನು ನನ್ನನ್ನು ಗೋಪ್ಯವಾಗಿ ವಿವಾಹ ಮಾಡಿಕೊಂಡನು. ಈ ಸುದ್ದಿಯನ್ನು ಆತನು ತನ್ನವರಿಗೆ ತಿಳಿಸಲು ಸಾಹಸಿಯಾಗಲಿಲ್ಲ. ಇಷ್ಟಾದರೂ ನನ್ನ ಸ್ವಾಮಿಯು ನನ್ನನ್ನು ಮದುವೆಯಾಗಿ ಒಂದು ದಿನವಾದರೂ ದುಃಖಪಟ್ಟುದೇ ಆಗಲಿ, ಪಶ್ಚಾತ್ತಾಪ ಪಟ್ಟುದೇ ಆಗಲಿ, ಅಪ್ರೀತಿಯನ್ನು ತೋರಿಸಿದುದೇ ಆಗಲಿ ನನಗೆ ತಿಳಿಯದು. ಆತನು ನನಗಾಗಿ ದಾರಿದ್ರ್ಯವನ್ನು ಕೋರಿಕೊಂಡು ಬಂದವನಾದರೂ ಒಂದು ದಿನವೂ ಆ ಮಾತನ್ನು ಎತ್ತಿ ಆಡಿದವನೇ ಅಲ್ಲ. ಪಾಪೀಯಸಿಯಾದ ನನಗಾಗಿ ಅನೇಕ ಸಂಕಟಗಳನ್ನು ಅಡಗಿಸಿಕೊಂಡು ಸಂಸಾರದಲ್ಲಿ ನನಗೆ ಕೊಂಚವೂ ದುಃಖವುಂಟಾಗದ ಹಾಗೆ ಜೀವನ ಮಾಡುತ್ತಿದ್ದ ನನ್ನ ಸ್ವಾಮಿಯ ವಿಷಯದಲ್ಲಿ ನನ್ನ ಮನವು ಬಲುವಾಗಿ ವ್ಯಸನ ಪಡುತ್ತಿರುವುದು. ನನ್ನಿಂದಲೇ ಆತನಿಗೆ ಪರಿಪರಿಯಾಗಿ ದುಃಖವೇರ್ಪಟ್ಟಿತಾದಕಾರಣ, ಆತನು ನನ್ನನ್ನು ಮದುವೆಯಾಗದಿದ್ದರೆ ಚೆನ್ನಾಗಿದ್ದಿತೆಂದು ಅಡಿಗಡಿಗೆ ತೋರಿ ಬರುತ್ತಿರುವುದು. ಆತನ ಯೋಗಕ್ಷೇಮದಲ್ಲಿಯೇ ನನ್ನ ಮನವು ಬದ್ಧಾದರವಾಗಿರುವುದರಿಂದ, ನಾನು ಹೀಗೆಲ್ಲಾ ಮಾತನಾಡಬೇಕಾಯಿತು. ಸಂಸಾರದಲ್ಲಿ ನಮ್ಮಿಬ್ಬರ ಪ್ರೀತಿಯು ಅನನ್ಯಸಾಮಾನ್ಯವಾದುದು. ನಮ್ಮ ಪ್ರೀತಿಗೆ ಸರಿಯಾದ ಹೋಲಿಕೆಯನ್ನು ಕೊಡೋಣವೆಂದರೆ, ಇಹ ಲೋಕದಲ್ಲಿ ನಿರ್ದುಷ್ಟವಾದ ವಸ್ತುಗಳೇ ಇಲ್ಲ. ಇದು ಹಾಗಿರಲಿ.

ನಮ್ಮಿಬ್ಬರ ವಿವಾಹವು ಗೋಪ್ಯವಾಗಿ ನಡೆದುದರಿಂದಲೂ, ನನ್ನ ಸ್ವಾಮಿಯ ದೇಹಾನುಬಂಧಿಗಳು ಇದನ್ನು ಅರಿಯದೇ ಇದ್ದುದರಿಂದಲೂ, ಮದುವೆಯಾದ ಮೇಲೆ ಆತನು ತನ್ನ ಸಂಬಂಧಿಗಳನ್ನು ಕಣ್ಣೆತ್ತಿಯೂ ನೋಡದಿದ್ದುದರಿಂದಲೂ, ಆತನ ಬಂಧು ಬಾಂಧವರೆಲ್ಲರೂ ನನ್ನ ಸ್ವಾಮಿಯು ತಿನ್ನುವುದಕ್ಕೆ ಮಾರ್ಗವಿಲ್ಲದೆ ದೇಶಭ್ರಷ್ಟನಾಗಿ ಹೊರಟುಹೋದನೆಂದು ತಿಳಿದಿರುವರು. ಧನವಿಲ್ಲದೆ ಬಂಧುಗಳಲ್ಲಿ ಬಾಳಬಾರದೆಂದೂ, ವಿದ್ಯಾಗೌರವಗಳನ್ನು ಸಂಪಾದಿಸಿದಲ್ಲದೆ ಅವರನ್ನು ನೋಡಲೂ ಬಾರದೆಂದು ಆತನು ಆಗಿಂದಾಗ ನನಗೆ ಹೇಳುತ್ತಿದ್ದನು. ಇಂದಿನ ವರೆಗೂ ದುರ್ದೈವಯೋಗದಿಂದ ಅವುದೂ ಫಲಕ್ಕೆ ಬರಲಿಲ್ಲ. ಪರಮೇಶ್ವರನ ಇಚ್ಛೆಯಲ್ಲಿಲ್ಲದ್ದು ಲಭಿಸಬೇಕೆಂದರೆ, ಅದು ಹೇಗೆ ತಾನೇ ಲಭಿಸೀತು?"

ಯುವತಿ ಇಷ್ಟು ಮಾತನಾಡಿ ಮಗುವಿನ ಮುಖವನ್ನು ಒಂದು ತಡವೆ ನೋಡಿದ ಬಳಿಕ ಅರಿಂದಮನ ಮನೋಭಾವವನ್ನು ಅರಿವುದಕ್ಕಾಗಿ ಆತನನ್ನು

ನೋಡಿದಳು. ಅರಿಂದಮನು ಔತ್ಸುಕ್ಯದಿಂದ—ಮುಂದಣ ಸಂಗತಿಯಾದರೂ ಏನು? ಎಂದು ಪ್ರಶ್ನೆಮಾಡಿದನು.

ಯುವತಿಯು ಹೇಳತೊಡಗಿದಳು:—

ವಿವಾಹವಾದ ಮೇಲೆ ಎರಡು ವರ್ಷಗಳ ಕಾಲವು ಸುಖದಿಂದ ಎರಡು ದಿನಗಳಂತೆ ಕಳೆದು ಹೋಯಿತು. ನನ್ನ ಸ್ವಾಮಿಯು ಜೀವನಕ್ಕಾಗಿ ಪರಸೇವೆಯನ್ನು ಮಾಡಿ ಅದರಿಂದ ಬಂದ ಎರಡು ಕಾಸಿನಿಂದ ಮಾನವಾಗಿ ಸಂಸಾರವನ್ನು ನಿರ್ವಹಿಸುತ್ತಿದ್ದನು. ಮಿತವ್ಯಯದಿಂದ ಆತನು ಕೊಂಚ ಹಣವನ್ನೂ ಗಳಿಸಿಟ್ಟಿದ್ದನು. ಕೆಲವು ದಿವಸಗಳಾದ ಮೇಲೆ ಅವುದೋ ಕಾರಣದಿಂದ ಆತನಿಗಿದ್ದ ಕೆಲಸವೂ ಹೋಯಿತು. ಮತ್ತೊಂದು ಕೆಲಸವನ್ನು ಹುಡುಕುವುದಕ್ಕಾಗಿ ಆತನು ಎಷ್ಟೋ ಪ್ರಯತ್ನಮಾಡಿನೋಡಿದನು. ದುರ್ಯೋಗದಿಂದ ಆತನಿಗೆ ಅವ ಕೆಲಸವೂ ಸಿಕ್ಕದೇ ಹೋಯಿತು. ಇದನ್ನು ಕಂಡುಕೊಂಡು ಬಾಡಿಗೆಯವನು ಮನೆಯ ಬಾಡಿಗೆಗಾಗಿ ಪ್ರಾಣವನ್ನು ಹಿಂಡಿದನು. ಬಳಿಕ ನಮ್ಮಿಂದ ಬಾಡಿಗೆಯು ಕ್ಲುಪ್ತವಾಗಿ ಬರಲಾರದೆಂದು ತಿಳಿದು ಆತನು ನಮ್ಮನ್ನು ಮನೆಯಿಂದ ಹೊರಡಿಸಿಬಿಟ್ಟನು. ಅಲ್ಲಿಂದ ಮುಂದಕ್ಕೆ ಹೆಚ್ಚು ಬಾಡಿಗೆಯನ್ನು ಕೊಡಲು ಚೈತನ್ಯವಿಲ್ಲದವರಾಗಿ, ಕೊಂಚ ಬಾಡಿಗೆಗೆ ಒಂದು ಸಣ್ಣ ಕೋಣೆಯನ್ನು ಏರ್ಪಡಿಸಿಕೊಂಡು ವಾಸಮಾಡತೊಡಗಿದೆವು. ಜೀವನಕ್ಕೆ ಬೇರೊಂದುಪಾಯವಿಲ್ಲದುದರಿಂದ, ಕೂಡಿಟ್ಟ ಕುಡುಕೆ ಹಣವೆಲ್ಲವೂ ವೆಚ್ಚವಾಗಿ ಹೋಯಿತು. ಒಪ್ಪೊತ್ತಿನ ಕೂಳಿಗೂ ಮಾರ್ಗವಿಲ್ಲದೇ ಹೋಗಲು, ನನ್ನ ಸ್ವಾಮಿಯು ಎಲ್ಲಾದರೂ ಕೆಲಸವನ್ನು ಸಂಪಾದಿಸಿಕೊಂಡು ಬರುವ ನಿಮಿತ್ತದಿಂದ ಹೊರಹೊರಟವನು ಮತ್ತೆ ಹಿಂದಿರುಗಲೇ ಇಲ್ಲ. ಅಂದು ಮೊದಲು ನಾನು ಈ ಗಂಡು ಮಗುವನ್ನು ಎತ್ತಿಕೊಂಡು ಬೀದಿಯ ಬಿಕಾರಿಯಂತಾದೆನು."

ಈ ಮಾತ ಹೇಳುತ್ತಿರುವಾಗಲೇ ನಿತ್ಯಮಂಗಳೆಯು ಕಣ್ಣುಗಳಿಂದ ನೀರು ಧಾರಾಕಾರವಾಗಿ ಸುರಿದು ಉಟ್ಟಿದ್ದ ಸೀರೆಯನ್ನು ತೋಯಿಸಿಬಿಟ್ಟಿತು.

ಅರಿಂದಮನು ಈ ಶೋಚನೀಯವಾದ ವೃತ್ತಾಂತವನ್ನು ಕೇಳಿ ಮನ ಕರಗಿದವನಾಗಿ—ತಾಯೇ! ಈಚೆಗೆ ನಿನ್ನ ಗಂಡನಿಂದ ಅವ ಲೇಖನವಾಗಲೀ ಯೋಗಕ್ಷೇಮದ ಸುದ್ದಿಯಾಗಲಿ ಬರಲಿಲ್ಲವೇ? ಎಂದು ಪ್ರಶ್ನೆ ಮಾಡಿದನು.

ಅದಕ್ಕೆ ಆಕೆಯು ಉತ್ತರ ಕೊಟ್ಟುದೇನೆಂದರೆ:—

"ಪೂಜ್ಯ ಮಹಾಶಯ! ಕೆಲವು ದಿನಗಳ ಮೇಲೆ ಆತನಿಂದ ಪತ್ರವೊಂದು ಬಂದಿತು. ಹಣವನ್ನು ಸಂಪಾದಿಸಿ ಎಲ್ಲರಂತೆ ಸ್ವತಂತ್ರವಾಗಿ ಜೀವನ ಮಾಡುವ

ಧೈರ್ಯವುಂಟಾಗುವ ವರೆಗೂ ಹೆಂಡಿತಿ ಮಗು ಇವರುಗಳ ಮುಖವನ್ನು ನೋಡು ವುದಿಲ್ಲವೆಂಬುದೇ ಅದರ ಮುಖ್ಯಾಭಿಪ್ರಾಯವು. ಗಂಡನ ಸಾನ್ನಿಧ್ಯದಲ್ಲ ದಾರಿ ದ್ರ್ಯವೂ ಮಂಗಳ ಕರವು. ಆತನ ಪರೋಕ್ಷನಲ್ಲಿ ನಾನು ಈ ಹಾಳು ಮಗುವನ್ನು ಕಟ್ಟಿಕೊಂಡು ಏನ ಮಾಡುವುದಕ್ಕಾದೀತು? ನಾನು ಗಂಡನನ್ನು ಹುಡುಕುವುದ ಕ್ಕಾಗಿ ಹೊರಟೆನು. ಎಲ್ಲಿಯೂ ಆತನ ಸುಳಿವೇ ಗೊತ್ತಾಗಲೊಲ್ಲದು. ಗಂಡನೇ ನನಗೆ ಸರ್ವಸ್ವ ಸ್ವರೂಪನಾದರೂ ಹೊಟ್ಟೆಯು ನನ್ನನ್ನು ಪೀಡಿಸಲಾರಂಭಿಸಿತು. ನಾನಾದರೂ ಉಪವಾಸಮಾಡಿ ಪ್ರಾಣವನ್ನು ತೊರೆಯಬಲ್ಲೆನು; ಆದರೆ ಹೊತ್ತು ಹೆತ್ತು ಸಾಕಿ ಸಲಹಿದ ಈ ಮಗುವು ಹಸಿವೆಯಿಂದ ಅಳುವುದಾದರೆ ನನ್ನ ಹೊಟ್ಟೆಯು ಈ ಸಂಕಟವನ್ನು ಹೇಗೆ ಸಹಿಸಿಕೊಂಡಿರಬಲ್ಲುದು? ಇನ್ನು ಮಾನಾಭಿ ಮಾನಗಳಿಂದ ಪ್ರಯೋಜನವಿಲ್ಲವೆಂದು ಜೀವನವನ್ನು ಹುಡುಕುವುದಕ್ಕಾಗಿ ಹೊರ ಬಿದ್ದೆನು. ನನಗೆ ಒಂದೆರಡು ಕೆಲಸಗಳು ಸಿಕ್ಕಿದುವು. ಅದರಿಂದ ಬಂದ ಹಣವು ಇಬ್ಬರ ಹೊಟ್ಟೆಗೆ ಸಾಲದೇ ಹೋದುದರಿಂದ, ನಾನು ದಿನ ಬಿಟ್ಟು ದಿನ ಒಪ್ಪೊ ತ್ತಿನ ಕೂಳನ್ನು ತಿಂದು, ಈ ಮಗುವನ್ನು ಸಾಕುತ್ತಿರುವೆನು. ಇಷ್ಟಾದರೂ ನನ್ನ ಮಗುವಿಗೆ ಹೊಟ್ಟೆತುಂಬಾ ಹಾಲನ್ನು ಕುಡಿಸುವುದಕ್ಕೂ ಯತ್ನವಿಲ್ಲದೇ ಹೋಗಿರುವುದು. ಆವ ಸಂಕಟವನ್ನಾದರೂ ಸಹಿಸಬಲ್ಲೆನು, ಆದರೆ ಈ ಸಂಕಟ ವನ್ನು ಮಟ್ಟಿಗೆ ಸಹಿಸುವುದು ನನ್ನಿಂದಾಗಲಾರದು. ಇದರ ಚಿಂತೆಯಲ್ಲಿಯೇ ನನ್ನ ರಕ್ತವೆಲ್ಲವೂ ನೀರಾಗಿಹೋಗಿರುವುದು. ಅನಾಹಾರದಿಂದಲೂ ಅಲ್ಪಾ ಹಾರದಿಂದಲೂ ಕುತ್ಸಿತಾಹಾರದಿಂದಲೂ ರೋಗವು ತಲೆದೋರಿ ಕೆಲಸಮಾಡು ವುದಕ್ಕೂ ಶಕ್ತಿಯಿಲ್ಲದೆ ಸೊಕ್ಕಿ ಸೊರಗಿ ಬೀಳುತ್ತಿರುವೆನು. ಇನ್ನು ನನ್ನ ಯತ್ನವೆಲ್ಲವೂ ಮೀರಿಹೋಯಿತು. ಮನೆಯ ಬಾಡಿಗೆಯನ್ನು ಕೊಡುವುದಕ್ಕೆ ಗತಿಯಿಲ್ಲದೇ ಹೋದುದರಿಂದ, ಮನೆಯ ಯಜಮಾನಿಯು ಕೊಂಚವಾದರೂ ಕನಿಕರವಿಲ್ಲದೆ ನನ್ನನ್ನು ಕುತ್ತಿಗೆ ಹಿಡಿದು ತಳ್ಳಿಬಿಟ್ಟಳು. ನಾನು ಈ ಲೋಕದಲ್ಲಿ ವಾಸಮಾಡುವುದಕ್ಕೆ ಗೋಪ್ಪದದಷ್ಟು ಸ್ಥಲವೂ ದೊರೆಯದೆ ಅಪಮಾನಕ್ಕೀಡಾಗಿ ಬೀದಿಗೆ ಬಂದಾಗ ನನ್ನ ಕೈಯಲ್ಲಿ ಒಂದಾಣೆ ಮಟ್ಟಿಗಿದ್ದಿತು. ಆ ಒಂದಾಣೆಗೆ ತಕ್ಕಷ್ಟು ಹಾಲನ್ನು ಕೊಂಡು ಮಗುವಿಗೆ ಕುಡಿಸಿ ನಾನು ಉಪವಾಸ ವ್ರತವನ್ನು ಕೈಕೊಂಡೆನು. ಮೊನ್ನೆಯ ಮಧ್ಯಾಹ್ನದಲ್ಲಿ ನಾನು ಅರೆ ಹೊಟ್ಟೆ ಊಟಮಾಡಿ ಕೈ ತೊಳೆದವಳು ಏತತ್ಕ್ಷಣ ಪರ್ಯಂತವೂ ಅನ್ನದ ವಾಸನೆಯನ್ನೇ ನೋಡಿದವ ಳಲ್ಲ. ನನ್ನ ಮಾತು ಹಾಗಿರಲಿ. ಈ ದುರಂತವಾದ ಚಳಿಯಲ್ಲಿ ಈ ಮಗುವನ್ನು ಎಲ್ಲಿಗೆ ಕರೆದುಕೊಂಡು ಹೋಗಲಿ? ಇಷ್ಟು ದೊಡ್ಡ ಪ್ರಪಂಚದಲ್ಲಿ ನನಗೆ ಮಟ್ಟಿಗೆ ನಿಲ್ಲುವುದಕ್ಕೆ ನೆರಳು ಇಲ್ಲದೇ ಹೋಯಿತೇ! ಹಾ ದೈವವೇ! ನನಗಿನ್ನೂ ಮರಣ ವೇಕೆ ಸಂಭವಿಸಲಿಲ್ಲ?

ನಿತ್ಯಮಂಗಳೆಯು ಹೀಗೆ ಹೇಳಿ ಮುಖವನ್ನು ಮುಚ್ಚಿಕೊಂಡು ಅಳುತ್ತಾ ಕುಳಿತಳು. ಅವಳ ಬಾಯಿಂದ ಮುಂದೆ ಮಾತೇ ಹೊರಡಲಿಲ್ಲ. ಅರಿಂದಮನು ಆಕೆಯ ವಿಷಯದಲ್ಲಿ ಕೇವಲವಾಗಿ ದುಃಖಪಟ್ಟವನಾಗಿ ಆವ ರೀತಿಯಿಂದ ಈಕೆಗೆ ಉಪಕಾರ ಮಾಡಬೇಕೆಂದು ಚಿಂತಿಸುತ್ತಾ ಕುಳಿತಿರುವಲ್ಲಿ, ನಿತ್ಯಮಂಗಳೆಯು ಕಣ್ಣುಗಳಲ್ಲಿ ನೀರ ತುಂಬಿಕೊಂಡು--ಅರಿಂದಮ ಮಹಾಶಯ! ನಾನು ತಮ್ಮಿಂದ ಹಣಕಾಸುಗಳನ್ನು ಭಿಕ್ಷೆಯೆತ್ತಿಕೊಂಡು ಹೋಗಬೇಕೆಂದು ಬಂದವಳಲ್ಲ. ತಾವು ಈ ವಿಷಯವನ್ನು ಕುರಿತು ಚಿಂತಿಸಬೇಕಾದುದಿಲ್ಲ. ನಾನು ಇಷ್ಟು ಹೀನ ಸ್ಥಿತಿಗೆ ಬಂದಿದ್ದರೂ, ಇಂದಿನ ವರೆಗೂ ಆರಲ್ಲಿಯೂ ಭಿಕ್ಷೆಯೆತ್ತಿಲ್ಲ, ಎತ್ತುವುದೂ ಇಲ್ಲ. ನಾನು ಈ ಮಗುವಿಗೋಸ್ಕರವಾಗಿ ಎಲ್ಲಿಯಾದರೂ ಕೆಲಸಮಾಡಿ ಜೀವಿಸ ಬೇಕೆಂದಿರುವೆನು. ತಾವು ನನ್ನಲ್ಲಿ ಕೃಪೆಯಿಟ್ಟು ನನ್ನ ಸ್ವಾಮಿಯನ್ನು ಪತ್ತೇ ಮಾಡಿ ನನಗೆ ತಂದುಕೊಡುವುದಾದರೆ, ನನಗೆ ಮೋಕ್ಷವೇ ಉಂಟಾದಂತಾಗುವುದು. ಅದರಿಂದ ನನ್ನ ಕಷ್ಟಗಳೆಲ್ಲವೂ ನಿವಾರಣೆಯಾದಾವು. ನನ್ನ ಪ್ರಿಯನು ಪ್ರಾಣ ದಿಂದಿರುವನೆಂದು ತಿಳಿದುಬಂದರೂ ನನಗೆ ಸಾಕು. ನಾನು ತಮ್ಮಲ್ಲಿ ಸೆರಗೊಡ್ಡಿ ಪತಿಭಿಕ್ಷೆಯನ್ನು ಬೇಡುವವಳಾಗಿರುವೆನು. ಇದು ಹೊರತಾಗಿ ನಾನು ತಮ್ಮಲ್ಲಿ ಮತ್ತಾವ ಪ್ರಾರ್ಥನೆಯನ್ನು ಮಾಡುವುದಕ್ಕೂ ಬಂದವಳಲ್ಲ, ಎಂದು ಮನಕರಗು ವಂದದಿ ಮಾತನಾಡಿದಳು.

ಅರಿಂದಮ—ತಾಯೀ! ನಿನ್ನ ಪ್ರಿಯನನ್ನು ಪತ್ತೇ ಮಾಡುವ ಭಾರವು ನನ್ನದಾಗಿರಲಿ. ಆತನ ವಿಷಯದಲ್ಲಿ ನನಗೆ ಹೆಚ್ಚಿನ ಸಂಗತಿಗಳೇನೂ ತಿಳಿದಿಲ್ಲ. ಆತನ ಹೆಸರೇನು, ತಾಯೀ!

ನಿತ್ಯಮಂಗಳಾ—(ನಾಚುಗೆಯಿಂದ) ಶ್ರೀಕುಮಾರ.

ಅರಿಂದಮ— ಆತನ ಮನೆಮಟಗಳೆಲ್ಲಿ?

ನಿತ್ಯ—ನನಗೆ ತಿಳಿಯದು. ಆ ವಿಷಯಗಳನ್ನು ಕುರಿತು ಆತನೂ ಹೇಳ ಲಿಲ್ಲ, ಗಂಡನಿಗೆ ಇಷ್ಟವಿಲ್ಲದುದನ್ನು ಕೇಳುವುದಕ್ಕೆ ನನಗೆ ಇಷ್ಟವೂ ಬರಲಿಲ್ಲ. ನನ್ನಲ್ಲಿ ಆತನ ಭಾವಚಿತ್ರವೊಂದಿರುವುದು. ಇಂತಹ ಚಿತ್ರವೊಂದು ಆತನ ಪಿತೃ ಮಂದಿರದಲ್ಲಿಯೂ ಒಂದಿರುವುದಾಗಿ ನಾನು ಕೇಳಿ ತಿಳಿದಿದ್ದೆನು.

ಅರಿಂದಮ—ಆ ಚಿತ್ರವು ನಿನ್ನಲ್ಲಿರುವುದೇನು?

ನಿತ್ಯ—ಅದು ಆವಾಗಲೂ ನನ್ನ ಬಳಿಯಲ್ಲಿಯೇ ಇರುವುದು. ನನ್ನ ಗಂಡನು ಕಣ್ಮರೆಯಾದಂದಿನಿಂದಲೂ ನಾನು ಅದನ್ನು ಹತ್ತಿರದಲ್ಲಿಯೇ ಇಟ್ಟು

ಕೊಂಡು ಅದನ್ನಾದರೂ ನೋಡಿ ದುಃಖವನ್ನು ನೀಗಿಕೊಳ್ಳುತ್ತಿರುವೆನು. ನನ ಗಾದರೋ ಈ ಜಗತ್ತಿನಲ್ಲಿ ಆತನ ಚಿತ್ರವೂ ಈ ಮಗುವೂ ಇವೆರಡೇ ಸ್ಮೃತಿ ಚಿಹ್ನೆಗಳು.

ನಿತ್ಯಮಂಗಳೆಯು ಹೀಗೆ ಹೇಳಿ ಮುಚ್ಚಿಟ್ಟಿದ್ದ ಚಿತ್ರವನ್ನು ಹೊರಗೆ ತೆಗೆದು ಅರಿಂದಮನ ಕೈಗೆ ಕೊಟ್ಟಳು. ಅರಿಂದಮನು ಆದರದೊಡನೆ ಅದನ್ನು ನೋಡಿದನು. ಆ ಚಿತ್ರದಲ್ಲಿ ಶ್ರೀಕುಮಾರನು ನಿಂತಿರುವನು. ಆತನ ಹಿಂದೆ ಪರ್ವತ ಶ್ರೇಣಿಯ ಸುಂದರವಾದ ದೃಶ್ಯವು ಮನೋಹರವಾಗಿ ಕಂಗೊಳಿಸುತ್ತಿರುವುದು. ಅರಿಂದಮನು ಚಿತ್ರವನ್ನು ನೋಡಿ ಯುವಕನು ರೂಪವಂತನೆಂದೂ, ಆತನ ದೇಹವು ರೂಪಾನುರೂಪವಾದುದೆಂದೂ, ವಯಸ್ಸು ಪ್ರಾಯಿಕವಾಗಿ ಇಪ್ಪತ್ತೆರಡು, ಇಪ್ಪತ್ತಮೂರಿರಬಹುದೆಂದೂ, ಆತನ ಮುಖದಲ್ಲಿ ಸದ್ವಂಶಲಕ್ಷಣವು ಕಾಣಬರುವುದೆಂದೂ, ಮನದಲ್ಲಿ ಸಿದ್ಧಾಂತ ಮಾಡಿಕೊಂಡ ಬಳಿಕ ಪರ್ವತ ಶ್ರೇಣಿಯ ಆಕಾರ ಪ್ರಕಾರಗಳನ್ನು ಪರೀಕ್ಷಿಸಲಾರಂಭಿಸಿದನು. ಆಗ ಅವನಿಗೆ ತೋರಿದುದೇನೆಂದರೆ—"ಈ ಪರ್ವತ ಶ್ರೇಣಿಯು ಅತ್ಯುನ್ನತವಾಗಿರದೆ, ಕ್ರೀಡಾ ಶೈಲದಂತೆ ವಿಹಾರಕ್ಕೆ ಅನುಕೂಲವಾದ ಪ್ರದೇಶವಾಗಿರುವುದು. ಇದು ನಮ್ಮ ಸೀಮೆಯ ಆವ ದಿಕ್ಕಿನಲ್ಲಿರಬಹುದು? ನಮ್ಮ ದೇಶದಲ್ಲಿ ಅನೇಕ ಬೆಟ್ಟಗುಡ್ಡಗಳಿರುವುವು. ಅವುಗಳೆಲ್ಲ ಇದು ಇಂಥದೇ ಎಂದು ಕಂಡುಹಿಡಿಯುವುದು ತಾನೇ ಹೇಗೆ? ಹಾಗೆ ಮಾಡುವುದಕ್ಕಾದರೂ ನನಗೆ ವ್ಯವಧಾನವೆಲ್ಲಿಯದು?"

ಅರಿಂದಮನು ಹೀಗೆ ಆಲೋಚಿಸಿದ ಬಳಿಕ ನಿತ್ಯಮಂಗಳೆಯನ್ನು ಕುರಿತು—ತಾಯಿ! ನಿನ್ನ ಗಂಡನ ವಿಚಾರವಾಗಿ ಮತ್ತಾವಾವ ಸಂಗತಿಗಳು ಗೊತ್ತಿದ್ದರೂ ಅವೆಲ್ಲವನ್ನೂ ವಿಶದವಾಗಿ ನನಗೆ ಅರುಹು, ಎಂದನು.

ನಿತ್ಯ—ಸತ್ಯವಾಗಿಯೂ ನನಗೇನೂ ಗೊತ್ತಿಲ್ಲ.

ಅರಿಂದಮ—ಗೊತ್ತಿಲ್ಲವೇನಮ್ಮ?

ಅರಿಂದಮನು ಉಭಯ ಸಂಕಟಕ್ಕೆ ಸಿಲುಕಿ ತನ್ನಲ್ಲಿ ತಾನೆ ಚಿಂತಿಸಿದನು:— "ಈ ಭಾವಚಿತ್ರವೊಂದರಿಂದಲೇ ಚಿತ್ರಗತ ವ್ಯಕ್ತಿಯನ್ನು ಕಂಡುಹಿಡಿಯುವುದು ಅಸಾಧ್ಯವು. ಕೆಲಸವನ್ನು ನೆರವೇರಿಸಿ ಕೊಡೋಣವೆಂದರೆ, ಅದಕ್ಕೆ ಸಾಕಾದಷ್ಟು ಕಾರಣಗಳಿಲ್ಲ. ಆಗುವುದಿಲ್ಲವೆಂದು ಹೇಳಿಬಿಡುವುದಾದರೆ, ಹೆಂಗುಸು ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೂ ಸಾಕು."

ಅರಿಂದಮನು ಬಲು ಹೊತ್ತು ಧರ್ಮಸಂಕಟದ ತೊಳಲಿನಲ್ಲಿ ಸಿಕ್ಕಿಕೊಂಡು ನರಳಾಡಿದ ಬಳಿಕ—ತಾಯೆ, ಸರ್ವಮಂಗಳೇ! ನಾನು ನಿನ್ನಲ್ಲಿ ಆವ ವಿಷಯ

ವನ್ನೂ ಮುಚ್ಚುಮರೆ ಮಾಡಲಾರೆನು, ನನ್ನ ಈ ಖಂಡಿತವಾದ ಮಾತನ್ನು ಕೇಳಿ ನೀನು ಬೇರೆಯಾಗಿ ತಿಳಿಯಲಾಗದು. ಇದಕ್ಕಾಗಿ ನೀನು ವ್ಯಸನವನ್ನೂ ಪಡ ಲಾಗದು. ನಿನ್ನ ಯಜಮಾನನು ಕಷ್ಟಕ್ಕೆ ಸಿಕ್ಕಿದೆನೆಂದು ತಿಳಿದು ನಿನ್ನನ್ನು ಪರಿತ್ಯಾಗಮಾಡಿ ಎಲ್ಲಿಯೋ ಓಡಿಹೋಗಿರುವುದಾಗಿ ನೀನು ಎಂದಾದರೂ ಸಂದೇಹ ಪಟ್ಟಿರುವೆಯ? ಇದ್ದ ಸಂಗತಿಯನ್ನು ಇದ್ದ ಹಾಗೆ ತಿಳಿಸು, ಎಂದು ಪ್ರಶ್ನೆ ಮಾಡಿದನು.

ಅರಿಂದಮನ ಈ ಪ್ರಶ್ನೆಯನ್ನು ಕೇಳಿ ಕಳವಳ ಗೊಂಡವಳಾಗಿ ದೃಢವಾದ ಸ್ವರದಿಂದ—ಮಹಾಸ್ವಾಮಿ! ನನ್ನ ಮನದಲ್ಲಿ ಇಂತಹ ಸಂದೇಹಕ್ಕೆ ಅವಕಾಶ ವೆಲ್ಲಿಯದು? ನನ್ನ ಪತಿಯು ಎಂದೆಂದಿಗೂ ವಿಶ್ವಾಸಘಾತುಕನಲ್ಲ. ಆತನು ನನ್ನನ್ನು ತನ್ನ ಪ್ರಾಣಕ್ಕಿಂತಲೂ ಅತಿಶಯವಾಗಿ ಪ್ರೀತಿಸುತ್ತಿದ್ದನು. ಆತನ ನಿರ್ದುಷ್ಟವಾದ ಪ್ರೇಮದಲ್ಲಿ ನಾನು ಸಂಶಯ ಪಡುವುದಾದರೆ, ನನಗಿಂತಲೂ ಪಿಶಾಚಿಗಳು ಮತ್ತಾರಿರುವರು, ಎಂದು ಉತ್ತರಪಿತ್ತಳು.

ಅರಿಂದಮ—ತಾಯಿ! ನಾನು ಮತ್ತೊಂದು ಇಷ್ಟವಲ್ಲದ ಪ್ರಶ್ನೆಯನ್ನು ಕೇಳುವೆನು. ನಿನ್ನ ಗಂಡನು ಸರಿಯಾದ ಮಾರ್ಗದಲ್ಲಿ ಜೀವನವನ್ನು ಸಂಪಾದಿ ಸುವುದಕ್ಕೆ ಸಾಧ್ಯವಾಗದೇ ಹೋದುದರಿಂದ, ದುರ್ಮಾರ್ಗದಲ್ಲಿ ಬಿದ್ದು ಸರಕಾರದ ದಂಡನೆಗೆ ಒಳಪಟ್ಟು ಕಾರಾಗೃಹದಲ್ಲೇನಾದರೂ ವಾಸಮಾಡುತ್ತಿರಬಹುದೇ?

ನಿತ್ಯ—(ವಿರಕ್ತಭಾವದಿಂದ) ಮಹಾಶಯ! ನನ್ನ ಸ್ವಾಮಿಯಾದರೋ ಸಚ್ಚರಿತ್ರನು. ಆತನು ಹೊಟ್ಟೆಗಿಲ್ಲವೆಂದು ಕಳ್ಳತನವನ್ನಾಗಲೀ ಸುಳ್ಳುತನ ವನ್ನಾಗಲೀ ಎಂದೂ ಅವಲಂಬಿಸಿದವನಲ್ಲ. ಆತನು ಆವ ಅನ್ಯಾಯದ ಮಾರ್ಗ ದಲ್ಲಿಯೂ ಎಂದೂ ಪದಾರ್ಪಣಮಾಡಿಲ್ಲವೆಂದು ನಾನು ಶಪಥಮಾಡಿ ಹೇಳುವೆನು. ಆತನು ಕಳ್ಳತನಕ್ಕೆ ಬಿದ್ದಿದ್ದರೆ ಸಿಕ್ಕಿಕೊಳ್ಳುವ ವರೆಗಾದರೂ ಸುಖವಾಗಿರಬಹು ದಾಗಿದ್ದಿತಲ್ಲವೇ? ಆತನಲ್ಲಿ ಇಂತಹ ಅಪವಾದವನ್ನು ಹೊರಿಸುವುದು ಎಂದಿಗೂ ತಕ್ಕುದಲ್ಲ. ಆತನು ಎಂದಿಗೂ ನನ್ನನ್ನು ಬಿಟ್ಟು ಹೋಗತಕ್ಕ ಸ್ಥಿತಿಯಲ್ಲಿರಲಿಲ್ಲ. ದಾರಿದ್ರ್ಯದಿಂದ ಪಲಾಯಿತನಾಗಿರುವನೆಂದು ನೀವು ಭಾವಿಸಿರಬಹುದು. ಆತನು ದಾರಿದ್ರ್ಯವನ್ನೇ ಜತೆಯಲ್ಲಿ ಕರೆದುಕೊಂಡು ಬಂದು ನನ್ನೊಡನೆ ಸಂಸಾರ ಮಾಡಿ ಕೊಂಡಿರುತಿದ್ದನು—ಎಂದ ಮೇಲೆ, ತಮ್ಮ ಈ ಭಾವನೆಯನ್ನು ನಾನು ಒಪ್ಪ ಲಾರೆನು. ಆತನು ಗುರುತರವಾದ ಆವುದೋ ನಿರ್ಬಂಧಕ್ಕೆ ಸಿಕ್ಕಿ ಕಣ್ಮರೆಯಾ ಗಿರಬೇಕೇ ಹೊರತು ಮತ್ತೇನೂ ಕಾರಣವಿರಲಾರದು. ಈ ಕಾರಣವನ್ನು ಕಂಡು ಹಿಡಿಯುವುದಕ್ಕಾಗಿಯೇ ನಾನು ನಿಮ್ಮ ಸಾಹಾಯ್ಯವನ್ನು ಬೇಡುವುದಕ್ಕಾಗಿ ಬಂದಿರುವೆನು. ಆತನ ಜೀವಮಾನದ ಆವ ಕಥೆಯೂ ನನಗೆ ಗೊತ್ತಿಲ್ಲ.

ಆತನು ಕೃಪೆಯಿಟ್ಟು ನನ್ನನ್ನು ವರಿಸಿದುದೊಂದೇ ನನಗೆ ಪರಮ ಸೌಭಾಗ್ಯವೆಂದು ತಿಳಿದುಕೊಂಡಿರುವೆನು.

ಅರಿಂದಮನು ಆವ ಮಾತನ್ನೂ ಆಡದೆ ತಲೆವಾಗಿ ಕುಳಿತುಬಿಟ್ಟನು. ನಿತ್ಯಮಂಗಳೆಯು ಇದನ್ನು ನೋಡಿ ಹೆದರಿದವಳಾಗಿ—ಸ್ವಾಮಿಾ! ತಾವು ಈ ಅನಾಥೆಗೆ ಸಾಹಾಯ್ಯಮಾಡಲು ಸಮ್ಮತಿಸುವಂತೆ ತೋರುತ್ತಿಲ್ಲ. ತಾವು ವಿಮುಖರಾಗುವುದಾದರೆ, ನಾನು ಈ ರಾತ್ರಿಯಲ್ಲಿಯೇ ಈ ಮಗುವಿನೊಡನೆ ದುಃಖದಿಂದ ಪಾರಾಗಿಬಿಡುವೆನು, ಎಂದು ನುಡಿದಳು.

ಅರಿಂದಮ—(ಮುಖವನ್ನು ಎತ್ತಿ) ನಾನು ಮೊದಲೇ ಹೇಳಿರುವಂತೆ ಯತ್ನಪೂರಿ ಕೆಲಸಮಾಡಿ ನೋಡುವೆನು. ನೀನು ಮಟ್ಟಿಗೆ ಹತಾಶೆಯಾಗಬೇಡ, ಕಂಡೆಯ? ನೀನು ಅನ್ನಾಭಾವದಿಂದ ರೋಗ ಪೀಡಿತೆಯಾಗಿರುವ ಕಾರಣ ಕೆಲಸ ಮಾಡಿ ಜೀವಿಸುವುದು ನಿನ್ನಿಂದಾಗಲಾರದು ನಿನ್ನ ಆಹಾರಕ್ಕೂ ವಾಸಕ್ಕೂ ತಕ್ಕ ಏರ್ಪಾಡನ್ನು ಕಲ್ಪಿಸಿಕೊಡುವೆನು. ನೀನು ಈ ವಿಷಯದಲ್ಲಿ ಹೆದರಬೇಕಾದುದೇನೂ ಇರುವುದಿಲ್ಲ ನನಗೆ ಪರಮ ಮಿತ್ರರಾದ ದೊಡ್ಡಮನುಷ್ಯರೊಬ್ಬರಿರುವರು. ಅವರು ದೊಡ್ಡ ಕುಟುಂಬದವರು. ಅವರಿಗೆ ಐಶ್ವರ್ಯವೂ ಅಪರಿಮಿತವಾಗಿರುವುದು. ನಾನು ನಿನ್ನನ್ನು ಅವರಲ್ಲಿಗೆ ಕಳುಹಿಸಿಕೊಡುವೆನು. ಅವರು ನಿನ್ನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗಳಂತೆ ಕಾಪಿಡುವರು. ನೀನೂ ಅವರಿಗೆ ಅಚ್ಚುಮೆಚ್ಚಾಗಿರುವುದಾದರೆ, ಅವರು ನಿನ್ನನ್ನು ಎಂದಿಗೂ ಕೈಬಿಡರು. ನಿನ್ನ ಸ್ವಾಮಿಯು ನಿನ್ನ ಕೈಸೇರುವ ವರೆಗೂ ನೀನು ಅಲ್ಲಿರುವುದಕ್ಕೆ ಆವ ತೊಂದರೆಯೂ ಇಲ್ಲವಷ್ಟೇ?

ನಿತ್ಯಮಂಗಳೆಯು ಈ ಮಾತನ್ನು ಕೇಳಿದಳು. ಅವಳ ತಲೆಯ ಮೇಲೆ ಅಮೃತವೇ ಮಳೆಗರೆದಂತಾಯಿತು. ಆಕೆಯ ಹೃದಯವು ಆನಂದ ಪರವಶವಾಗಿ ಹೋಗಲು, ಆಕೆಯು ಅತ್ತುಬಿಟ್ಟಳು. ಅರಿಂದಮನ ಮನಸ್ಸೂ ಕರಗಿ ಅವನ ಕಣ್ಣುಗಳಲ್ಲಿಯೂ ಕಂಬನಿದುಂಬಿತು.

ನಿತ್ಯಮಂಗಳೆಯು ಅರಿಂದಮನ ಉಪಕಾರಕ್ಕೆ ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ—ಮಹಾಶಯ! ತಾವೇ ಪರದುಃಖದುಃಖಿತರು; ತಾವೇ ಆಪದ್ಬಾಂಧವರು; ತಾವೇ ಮಹೋದಾರ ಚರಿತರು; ತಾವೇ ನಿರಾಶ್ರಯರಿಗೆ ಆಶ್ರಯಪ್ರದಾತರು. ತಮಗೆ ಭಗವಂತನು ನಿತ್ಯಮಂಗಳವನ್ನುಂಟುಮಾಡಲಿ. ನನಗೆ ಇನ್ನೇನೂ ಹೇಳುವುದಕ್ಕೆ ತಿಳಿಯದು, ಎಂದಳು.

ಅರಿಂದಮ—ತಾಯೇ! ನಾನು ಕರ್ತವ್ಯವನ್ನು ಮಾಡುವೆನೇ ಹೊರತು ಮತ್ತೇನೂ ಇಲ್ಲ. ಇದಕ್ಕಾಗಿ ನೀನು ನನ್ನನ್ನು ವಿಶೇಷವಾಗಿ ಸ್ತೋತ್ರ ಮಾಡಬೇಕಾದುದೇನೂ ಇರುವುದಿಲ್ಲ. ಈಗ ನಾನು ನನ್ನ ಸ್ನೇಹಿತನಿಗೆ ಕಾಗದವೊಂದನ್ನು ಬರೆದು, ಅದನ್ನೂ ನಿನ್ನನ್ನೂ ಶಿಷ್ಯನೊಡನೆ ಕಳುಹುವೆನು.

ಅರಿಂದಮನು ಅದಕ್ಕನುಸಾರವಾಗಿ ಕಾಗದವನ್ನು ಬರೆದು ಅದನ್ನು ದೇವೇಂದ್ರನ ಕೈಗೆ ಕೊಟ್ಟು ಗಾಡಿಯೊಂದನ್ನು ಬಾಡಿಗೆಗೆ ತರುವುದಾಗಿ ಅಪ್ಪಣೆ ಮಾಡಿದನು. ನಿಮಿಷಮಾತ್ರದಲ್ಲಿಯೇ ಗಾಡಿಯೂ ಸಿದ್ಧವಾಗಲು, ಅರಿಂದಮನು ಆಕೆಯನ್ನೂ ದೇವೇಂದ್ರನನ್ನೂ ಅದರಲ್ಲಿ ಕುಳ್ಳಿರಿಸಿ ಕಳುಹಿದನು.

ಬಳಿಕ ಅರಿಂದಮನು ವಾತಾಯನದ ಬಳಿಯಲ್ಲಿಯೇ ಕೊಂಚ ಹೊತ್ತು ನಿಂತು ನೋಡಿದ ಬಳಿಕ ಹೀಗೆ ಹೇಳಿಕೊಂಡನು:—"ಲೋಕದಲ್ಲಿ ಬಡವರಿಗೆ ಎಂತಹ ಕಷ್ಟಗಳು ಸಂಭವಿಸುವುವು! ಈ ಯುವತಿಯು ಸತ್ಯವಾಗಿಯೂ ದಯೆಗೆ ಪಾತ್ರವು. ಈಕೆಯ ಗಂಡನನ್ನು ಪತ್ತೆ ಮಾಡಿ ಗಂಡಹೆಂಡಿರಿಬ್ಬರನ್ನೂ ಸೇರಿಸಿ ನಾನು ನೇತ್ರಾನಂದವನ್ನು ಅನುಭವಿಸುವೆನು. ನನ್ನ ಪ್ರಯತ್ನವು ನ್ಯಾಯದ ಮಾರ್ಗದಲ್ಲಿರುವುದಾದರೆ ಭಗವಂತನು ನನಗೆ ಜಯವನ್ನು ದಯಪಾಲಿಸಲಿ. ಹೇ ಭಗವಂತ! ಸುತ್ತಲೂ ಅಂಧಕಾರವು ಆವರಿಸಿರುವುದು. ಈ ಘೋರಾಂಧಕಾರದಲ್ಲಿ ದಾರಿಯನ್ನು ತೋರಿ ಅಗತಿಕರಿಗೆ ಗತಿಯನ್ನು ಕಲ್ಪಿಸಿಕೊಡುವುದು ನನ್ನ ಭಾರವು. ನಾನು ನಿನ್ನ ಕೃಪಾಕಟಾಕ್ಷವನ್ನು ಅವಲಂಬಿಸಿಕೊಂಡೇ ಕೆಲಸಮಾಡುವೆನು. ನನ್ನ ಪ್ರಯತ್ನವು ಸಫಲವಾಗುವಂತೆ ಕರುಣಿಸು."

ಈ ರೀತಿಯಾಗಿ ಚಿಂತಿಸಿದ ಬಳಿಕ ಅರಿಂದಮನು ವಾತಾಯನವನ್ನು ಮುಚ್ಚಿ, ಕರಿಯ ಬಣ್ಣದ ನಿಲುವಂಗಿಯನ್ನು ತೊಟ್ಟುಕೊಂಡು ನಿಶ್ಶಬ್ದವಾಗಿ ಮನೆಯಿಂದ ಹೊರಹೊರಟನು. ಇಂತಹ ಶೀತರಾತ್ರಿಯಲ್ಲಿ ಹೊರಹೊರಡುವುದು ಸಾಧ್ಯವಲ್ಲವೆಂದು ಮನೆಯಲ್ಲಿ ಬೆಚ್ಚಗೆ ಹೊದೆದುಕೊಂಡು ಕುಳಿತಿದ್ದ ಅರಿಂದಮನು ಚಳಿಯನ್ನೂ ಮಂಜನ್ನೂ ಲೆಕ್ಕಿಸದೆ ಹೊರಟನು. ಮನುಷ್ಯನ ಇಚ್ಛೆಯೇ ಒಂದು; ದೈವದ ಇಚ್ಛೆಯೇ ಒಂದು.

ಅರಿಂದಮನು ಮನೆಯಿಂದ ಹೊರಟು ಆಟದ ಸಾಮಾನಿನ ಅಂಗಡಿಗೆ ಹೋಗಿ, ಅಲ್ಲಿ ಮಕ್ಕಳ ಆಟಕ್ಕೆ ಬೇಕುಬೇಕಾದ ಚಿತ್ರವಿಚಿತ್ರವಾದ ಬೊಂಬೆಗಳನ್ನೂ, ವಾದ್ಯವಿಶೇಷಗಳನ್ನೂ, ಆನೆ, ಕುದುರೆ, ಗಾಡಿ ಮುಂತಾದುವನ್ನೂ ಕ್ರಯಕ್ಕೆ ಕೊಂಡು ಅವುಗಳೆಲ್ಲವನ್ನೂ ತನ್ನ ಪರಮಮಿತ್ರನ ಮನೆಗೆ ಕಳುಹುವಂತೆ ಅಂಗಡಿಯವನಿಗೆ ಅಪ್ಪಣೆಮಾಡಿದನು. ಬಳಿಕ ಆ ಆಟದ ಸಾಮಗ್ರಿಯ

ಪೆಟ್ಟಿಗೆಯ ಮೇಲೆ "ನಿತ್ಯಮಂಗಳೆಯ ಮಗುವಿನ ಆಟದ ಸಾಮಗ್ರಿ" ಎಂದು ಅರಿಂದಮನು ಸ್ವಹಸ್ತದಿಂದಲೇ ಬರೆದುಕೊಟ್ಟು ಮನೆಗೆ ಬಂದುಬಿಟ್ಟನು.

ಆ ರಾತ್ರಿಯಲ್ಲಿಯೇ ಆ ಪದಾರ್ಥಗಳು ನಿತ್ಯಮಂಗಳೆಯ ಕೈಸೇರಿದ ಕೂಡಲೆ ಆಕೆಗೆ ಉಂಟಾದ ಸಂತೋಷವನ್ನು ನಮ್ಮ ಲೇಖನಿಯು ವರ್ಣಿಸಲಾರದಾಗಿರುವುದು. ಆಕೆಯು ಅರಿಂದಮನೇ ಇದೆಲ್ಲವನ್ನೂ ಕಳುಹಿರುವನೆಂದು ತಿಳಿದು ಭಗವಂತನ ಲೀಲಾವಿಲಾಸವನ್ನು ಪರಿಪರಿಯಾಗಿ ಕೊಂಡಾಡಿಕೊಂಡಳು:—

"ಹೇ ಆಪದ್ಬಾಂಧವ, ಅನಾಥರಕ್ಷಕ, ಭಗವಂತ! ಭಯಕೃದ್ಭಯನಾಶನನೆಂಬ ಬಿರುದು ನಿನಗಲ್ಲದೆ ಮತ್ತಾರಿಗೆ ಸಲ್ಲತಕ್ಕುದಿದೆ! ಒಂದು ಗಂಟೆಗೆ ಮೊದಲು ನನ್ನ ಅವಸ್ಥೆಯಾದರೂ ಏನಾಗಿದ್ದಿತು, ಈಗ ಆಲೋಚಿಸಿ ನೋಡಲಾಗಿ ಏನಾಗಿರುವುದು? ಇದೆಲ್ಲವೂ ನಿನ್ನ ಮಹಿಮೆಯ ಫಲವೇ ಆಗಿರುವುದು. ನಿನ್ನನ್ನು ಆರಾಧಿಸುವ ಮಾರ್ಗವೇ ನನಗೆ ಗೊತ್ತಿಲ್ಲದಿರುವಾಗ, ನನ್ನನ್ನು ರಕ್ಷಿಸಿದ ನಿನ್ನ ಅವ್ಯಾಜಕಾರುಣ್ಯವನ್ನು ಎಷ್ಟೆಂದು ಕೊಂಡಾಡಲಿ! ಹೇ ಪರಮೇಶ್ವರ! ಆವಾಗಲೂ ನಿನ್ನನ್ನು ಭಜಿಸುತ್ತಿರುವಂತೆ ನನಗೆ ಭಕ್ತಿಯನ್ನೂ ಶಕ್ತಿಯನ್ನೂ ದಯೆಪಾಲಿಸು, ಇದೇ ನನ್ನ ತ್ರಿಕರಣಶುದ್ಧವಾದ ಪ್ರಾರ್ಥನೆ."



*

# ದ್ವಿತೀಯಾವತಾರ

---

## ಮೊದಲನೆಯ ವಿಲಾಸ

### ಹತ್ಯಾ ವಿಪರ್ಯಯ

ಈ ಕಥೆಯ ಪ್ರಥಮಾವತಾರದಲ್ಲಿ ನಮ್ಮ ಪ್ರಿಯಪಾಠಕ ಮಹಾಶಯರು ಈಶ್ವರೀ ದುರ್ಗದ ಹೆಸರನ್ನು ಕೇಳಿರುವರು. ಈಶ್ವರೀ ದುರ್ಗವೆಂಬುದು ಅದೇ ಹೆಸರಿನ ಹೊಗೆ ಬಂಡಿಯ ನಿಲ್ದಾಣಕ್ಕೆ ಹತ್ತೆಂಟು ಮೈಲುಗಳ ದೂರದಲ್ಲಿರುವುದೆಂದು ನಾವು ಹಿಂದೆಯೇ ತಿಳಿಸಿರುವೆವು. ಅಂತಹ ಈಶ್ವರೀ ದುರ್ಗದ ಶಿಖರ ಪ್ರಾಂತದಲ್ಲಿ "ಶಿವ ಪ್ರಾಸಾದ" ಎಂಬ ಪ್ರಶಸ್ತವೆನಿಸಿದ ಅತಿ ವಿಶಾಲವಾದ ಸೌಧವು ನಿರ್ಮಿಸಲ್ಪಟ್ಟಿದ್ದಿತು. ಶಿವ ಪ್ರಾಸಾದಕ್ಕೂ ಬೆಟ್ಟದ ಅಡಿಗೂ ಒಂದು ಮೈಲಿಯುದ್ದದ ದಾರಿಯಿರುವುದು. ಈ ಸೌಧದ ಹಿಂದಕ್ಕೆ ಈ ಜಹಗೀರು ಬಹುದೂರದವರೆಗೂ ಹರಡಿಕೊಂಡಿರುವುದು. ಇದು ಪುರಾತನವಾದ ಜಹಗೀರೆನಿಸಿಕೊಂಡಿದ್ದರೂ, ಭರತ ಖಂಡದಲ್ಲಿ ಇದಕ್ಕಿಂತಲೂ ದೊಡ್ಡದಾದ ಜಮೀನ್ದಾರಿಯು ಅತಿ ವಿರಲವೆಂದೇ ಹೇಳಬಹುದು. ಈ ಜಹಗೀರಿನಲ್ಲಿ ನೂರಾರು ಗ್ರಾಮಗಳೂ, ಸಾವಿರಾರು ಕೊಪ್ಪಲುಗಳೂ, ಅನೇಕಾನೇಕ ತೋರಗಳೂ, ಅಪರಿಮಿತವಾದ ಕೆರೆ ಕುಂಟೆಗಳೂ, ದೊಡ್ಡ ದೊಡ್ಡ ಕಾಡುಗಳೂ, ಮನೋಹರವಾದ ಬೆಟ್ಟದ ಸಾಲೂ ನೋಟಕರಿಗೆ ಬ್ರಹ್ಮಾನಂದವನ್ನುಂಟುಮಾಡುತ್ತಿರುವುವು.

ಇದಕ್ಕೆ ಸೇರಿದ ಹಾಗೆ ರಾಜ ಘಟ್ಟವೆಂಬ ಮತ್ತೊಂದು ಜಹಗೀರು ಈಶ್ವರೀ ದುರ್ಗದ ದಕ್ಷಿಣ ದಿಗ್ಭಾಗವನ್ನು ಅಲಂಕರಿಸುತ್ತಿರುವುದು. ರಾಜಮಾರ್ತಾಂಡನೆಂಬ ದೊಡ್ಡ ಮನುಷ್ಯನೊಬ್ಬನು ರಾಜಘಟ್ಟದ ಸರ್ವಸ್ವತ್ವಾಧಿಕಾರಿಯಾಗಿರುತ್ತಿದ್ದನು. ರಾಜಘಟ್ಟವು ಈಶ್ವರೀದುರ್ಗದಷ್ಟು ವಿಶಾಲವಲ್ಲದಿದ್ದರೂ ನೋಡುವುದಕ್ಕೆ ಬಹು ರಮ್ಯವಾದ ಪ್ರದೇಶವಾಗಿದ್ದಿತು. ಇವೆರಡು ಜಹಗೀರುಗಳನ್ನು ಬೇರ್ಪಡಿಸಿದ್ದ ದೊಡ್ಡ ಅರಣ್ಯದಲ್ಲಿ ತೆರತೆರನಾದ ಮೃಗಗಳೂ, ಪಕ್ಷಿವಿಶೇಷಗಳೂ, ನಾನಾ ವೃಕ್ಷಗಳೂ ಹೇರಳವಾಗಿದ್ದುವು. ಅದು ಕಾರಣ ಈ ಎರಡು ಜಹಗೀರುಗಳ ಒಡೆಯರು ಆಗಿಂದಾಗ ಬೇಟೆಗಾಗಿ ಈ ಕಾಡಿನಲ್ಲಿ ಸಂಧಿಸುತ್ತಿದ್ದರು. ಇದೇ ನಿಮಿತ್ತವಾಗಿ ಈಶ್ವರೀ ದುರ್ಗದ ಗತಿಸಿದ ಯಜಮಾನನಿಗೂ ರಾಜಮಾರ್ತಾಂಡನಿಗೂ ವಿಶೇಷವಾಗಿ ಸ್ನೇಹವಿದ್ದಿತು. ಈಶ್ವರೀ ದುರ್ಗದ ಯಜಮಾನನು ಸತ್ತಮೇಲೆ ಕಲ್ಯಾಣಮಲ್ಲನಿಗೂ ರಾಜಮಾರ್ತಾಂಡನಿಗೂ ಹೊಂದದೇ ಹೋಯಿತು.

ಕಾರಣವೇನೆಂದರೆ—ಕಲ್ಯಾಣಮಲ್ಲನು ವ್ಯಸನಾಸಕ್ತನೂ, ಅವ್ಯವಸ್ಥಿತ ಚಿತ್ತನೂ, ದುಶ್ಚರಿತ್ರನೂ, ಅಶಿಕ್ಷಿತನೂ ಆಗಿದ್ದು ರಾಜಮಾರ್ತಂಡನನ್ನು ಗತಿಯಿಲ್ಲದ ದಾಂಭಿಕನೆಂದು ಹೀಯಾಳಿಸುತ್ತಾ ಅಂತರ್ಯದಲ್ಲಿ ಆತನನ್ನು ಪ್ರಬಲವಾಗಿ ದ್ವೇಷಿಸುವುದಕ್ಕೆ ಪ್ರಾರಂಭಿಸಿದನು. ಇದರ ಕಾರಣವನ್ನು ಕಲ್ಯಾಣಮಲ್ಲನೇ ಬಲ್ಲವನಾಗಿದ್ದನು. ದುಷ್ಟರು ಯೋಗ್ಯರನ್ನು ದೂಷಿಸುವುದು ಸಹಜವಾಗಿಯೇ ಇರುವುದಲ್ಲವೇ ?

ಈ ಪರ್ವತಮಾಲೆಯ ಪಕ್ಕದಲ್ಲಿಯೇ ರಾಜಮಾರ್ಗವು ಕಲ್ಪಿಸಲ್ಪಟ್ಟಿರುವುದು. ರಾಜಮಾರ್ಗವೆಂದರೆ ದೊಡ್ಡ ದಾರಿಯೆಂದು ಅರ್ಥಮಾಡಲಾಗದು ರಾಜನು ಹಕ್ಕನ್ನು ಪಡೆದುಕೊಂಡು ಪ್ರಜೆಗಳ ಉಪಕಾರಕ್ಕಾಗಿ ಕಲ್ಪಿಸಿದ ದಾರಿಯೆಂದು ಅರ್ಥಮಾಡಿಕೊಳ್ಳತಕ್ಕದ್ದಿದೆ. ಈ ಮಾರ್ಗದಿಂದಲೇ ಇಬ್ಬರು ಜಹಗೀರುದಾರರೂ ಗಮನಾಗಮನಗಳನ್ನು ಇಟ್ಟುಕೊಂಡಿದ್ದರು. ಈ ರಾಜಮಾರ್ಗವೆಂಬುದು ಅತ್ಯಂತ ದುರ್ಗಮವಾಗಿಯೂ ವಿಪತ್ತಿಗೆ ಆವಾಸಸ್ಥಾನವಾಗಿಯೂ ಇದ್ದಿತು. ಆದುದರಿಂದಲೇ ರಾತ್ರಿಯ ವೇಳೆಯಲ್ಲಿ ಜನರು ಅಲ್ಲಿ ಸಂಚಾರಮಾಡುವುದಕ್ಕೆ ಇಷ್ಟವುಳ್ಳವರಾಗಿರಲಿಲ್ಲ.

ಮೇಲೆ ಹೇಳಿದ ಈ ರಾಜಮಾರ್ಗದ ಮಧ್ಯದಲ್ಲ ಒಂದು ಕಡೆ ಬೆಟ್ಟವೂ ಮತ್ತೊಂದು ಕಡೆ ಕಮರಿಯೂ ಇದ್ದುದರಿಂದ, ಅಲ್ಲಿನ ದಾರಿಯು ಬಲು ಕಿರಿದಾಗಿದ್ದಿತು. ನಾವು ಆವ ದಿನದ ಘಟನಾವಳಿಯನ್ನು ಅವಲಂಬಿಸಿಕೊಂಡು ಈ ಗ್ರಂಥವನ್ನು ರಚಿಸುವುದಕ್ಕೆ ಕುಳಿತಿರುವೆವೋ ಅಂದು ಕಮರಿಗೆ ಒಂದು ನೂರು ಗಜಗಳ ದೂರದಲ್ಲ ಒಂದು ಉಜ್ಜ್ವಲವಾದ ದೀಪವು ಕಾಣಿಸುತ್ತಿದ್ದಿತು. ಅದು ಒಂದು ಲಾಂದ್ರದ ದೀಪವಾಗಿ ಕಾಣಿಸಿಕೊಳ್ಳುತ್ತಿದ್ದಿತು. ಅರ್ಧರಾತ್ರದ ಗಾಢಾಂಧಕಾರದಲ್ಲ ಲಾಂದ್ರದ ದೀಪಕ್ಕೆ ಕಾರಣವೇನಿರಬಹುದು ?

ಪ್ರಿಯ ಪಾಠಕ ಮಹಾಶಯ ! ಧೈರ್ಯವಿರುವುದಾದರೆ, ನಾವೆಲ್ಲರೂ ಸೇರಿಕೊಂಡು ಅಲ್ಲಿಗೆ ಹೋಗಿ ಅದರ ಕಾರಣವನ್ನು ಆಮೂಲಾಗ್ರವಾಗಿ ವಿಚಾರಿಸಿ ನೋಡುವ.

ಆ ದೀಪವು ಕಾಣಿಸಿಕೊಂಡ ಸ್ಥಲದಲ್ಲಿ ಇಬ್ಬರು ಸೇರಿಕೊಂಡು ಅದ್ಭುತವಾದ ಕಾರ್ಯವನ್ನು ನೆರವೇರಿಸುತ್ತಿರುವರು. ಒಬ್ಬನು ಲಾಂದ್ರವನ್ನು ಹಿಡಿದುಕೊಂಡು ನಿಂತಿರುವನು. ಮತ್ತೊಬ್ಬನು ಅಲ್ಲಿದ್ದ ಒಂದು ಮರಕ್ಕೆ ಏನನ್ನೋ ಕಟ್ಟುತ್ತಿದ್ದನು. ದೀಪವನ್ನು ಹಿಡಿದುಕೊಂಡಿದ್ದವನು ಚಳಿಬಂದವನಂತೆ ನಡುಗುತ್ತಿದ್ದನು. ಇದನ್ನು ಕಂಡು ಮತ್ತೊಬ್ಬನು—ಮಿತ್ರನೇ ! ಇಷ್ಟು ಹೆದರಲು ಕಾರಣವೇನು ? ಎಂದು ಪ್ರಶ್ನೆಮಾಡಿದನು.

ಉತ್ತರ—ಈ ರಾತ್ರಿ ತುಂಬಾ ಚಳಿಯಾಗಿರುವುದು. ಅದು ನನ್ನನ್ನು ನಡುಗಿಸುತ್ತಿರುವುದು.

ಪ್ರಶ್ನೆ—ಚಳಿಯೂ ಇಲ್ಲ, ಗಿಳಿಯೂ ಇಲ್ಲ; ನೀನು ಆವಾಗಲೂ ಅಂಜುಕುಳಿ. ನೀನು ಇಷ್ಟು ಭಯಪಟ್ಟು ಸಾಯುವೆಯೆಂದು ನಾನು ತಿಳಿದಿರಲಿಲ್ಲ. ನಮ್ಮಂಥವರು ನಿನ್ನಂತಹ ಹೇಡಿಗಳನ್ನು ಒತ್ತಾಸೆಯಾಗಿಟ್ಟುಕೊಂಡು ಕೆಲಸ ಮಾಡಿದರೆ ಕಾರ್ಯಸಿದ್ಧಿಯಾದಂತೆಯೇ ಸರಿ. ತಾಂತಿಯನು ನಿನ್ನ ಆಹ್ವಾನವನ್ನು ಅಂಗೀಕರಿಸಿ ನಿದ್ಯೋದ್ಯಾನದಲ್ಲಿ ಬರುವುದಾಗಿ ಪ್ರತ್ಯುತ್ತರ ಬರೆದಿರುವನು. ಅವನೆಲ್ಲಿ ಬಂದು ಬಿಡುವನೋ, ಏನಾಗಿಹೋಗುವುದೋ ಎಂದು ನೀನು ಹೆದರಿ ಹೆದರಿ ಸಾಯುತ್ತಿರುವೆ. ಇದು ನನಗೆ ಗೊತ್ತಿಲ್ಲವೇನು? ಶತ್ರು ನಿಪಾತವಾಗುವುದೆಂಬ ಸಂತೋಷವೇ ನಿನಗಿಲ್ಲವಲ್ಲಾ! ಶತ್ರುವನ್ನು ನಿರ್ಮೂಲಮಾಡಿ ಸುಖವಾಗಿರಬೇಕೆಂದು ಮುಟ್ಟಿಗೆ ಬಾಯಲ್ಲಿ ಹೇಳುತ್ತಿರುವೆ. ನಿನ್ನ ಕೆಲಸಕ್ಕೂ ಮಾತಿಗೂ ಕೊಂಚವಾದರೂ ಸಂಬಂಧವೇ ಇಲ್ಲ. ಹೇಡಿ! ದೀಪವನ್ನು ಸರಿಯಾಗಿ ಹಿಡಿ. ನಿನ್ನನ್ನು ಒಂದು ಪದಾರ್ಥವೆಂದು ತಿಳಿಯುವವರಿಗೆ ಬುದ್ಧಿಯೇ ಇಲ್ಲ.

ಈ ರೀತಿಯಾಗಿ ಪ್ರಶ್ನೆಮಾಡಿದವನೇ ವೈದ್ಯ ವಾಗೀಶನು. ದೀಪವನ್ನು ಹಿಡಿದಿದ್ದವನು ಕಲ್ಯಾಣಮಲ್ಲನೆಂದು ತಿಳಿಸಬೇಕಾದುದೇನೂ ಇರುವುದಿಲ್ಲ. ವಾಗೀಶನು ತಾಂತಿಯಾ ಭಿಲ್ಲನನ್ನು ಕೊಲ್ಲುವುದಕ್ಕಾಗಿ ಏರ್ಪಡಿಸಬೇಕೆಂದು ಇಲ್ಲಿಗೆ ಬಂದಿರುವನು. ಮತ್ತೊಬ್ಬರಿಗೆ ಸಂಶಯವುಂಟಾಗದಂತೆ ಕೊಲ್ಲುವುದರಿಂದ ತಾನು ಸುಖವಾಗಿ ಬದುಕಬಹುದೆಂದು ತಿಳಿದು ವಾಗೀಶನು ಕಲ್ಯಾಣಮಲ್ಲನನ್ನು ಜತೆಯಲ್ಲಿ ಕರೆದುಕೊಂಡು ಬಂದಿದ್ದನು.

ಕಲ್ಯಾಣಮಲ್ಲನು ದೀಪವನ್ನು ಹಿಡಿದುಕೊಂಡು ವಾಗೀಶನಿಗೆ ಒತ್ತಾಸೆಯಾಗಿದ್ದನು. ವಾಗೀಶನು ಮುಳ್ಳಿನ ತಂತಿಗಳನ್ನು ಒಂದು ಗಿಡಕ್ಕೆ ಬಲವಾಗಿ ಕಟ್ಟಿ 'ದೀಪವನ್ನು ರಸ್ತೆಯ ಆಚೆಯ ಕಡೆಗೆ ತೆಗೆದುಕೊಂಡು ಹೊರಡು' ಎಂದು ಕಲ್ಯಾಣಮಲ್ಲನಿಗೆ ಹೇಳಿ ತಾನು ತಂತಿಗಳನ್ನು ಹಿಡಿದುಕೊಂಡು ಆತನನ್ನು ಅನುಸರಿಸಿದನು.

ಆಗ ಕಲ್ಯಾಣಮಲ್ಲನು ವಾಗೀಶನನ್ನು ಕುರಿತು—ಮಹಾಶಯ! ಈ ಅನರ್ಥಕವಾದ ಪರಿಶ್ರಮದಿಂದಾಗುವುದೇನು? ಕಾರ್ಯಸಿದ್ಧಿಗೆ ಬೇರೊಂದುಪಾಯವನ್ನು ಹುಡುಕಬಾರದೆ? ಎಂದನು.

ವಾಗೀಶನು ಈ ಮಾತನ್ನು ಕೇಳಿ ಅಸಹ್ಯಪಟ್ಟವನಾಗಿ—ಅಯ್ಯಾ! ಉಪಾಯಗಳಿಗೇನೂ ನನ್ನಲ್ಲಿ ದಾರಿದ್ರ್ಯವಿಲ್ಲ. ನಾವು ಮಾಡಿದ ಕೆಲಸವು ಆರಿಗೂ

ಗೊತ್ತಾಗಬಾರದೆಂದು ನಾನು ಈ ಉಪಾಯವನ್ನು ಹುಡುಕಿರುವೆನು. ಇದರಿಂದ ಶತ್ರುವನ್ನು ಕೊಂದ ತಪ್ಪು ನಮ್ಮ ಮೇಲೆ ಒರಗಲಾರದು. ನಾನು ನಿನ್ನ ಅನುಕೂಲಕ್ಕಾಗಿ ಎಷ್ಟೋ ಶ್ರಮಪಡುತ್ತಿದ್ದರೂ ನೀನು ನನ್ನನ್ನೇ ಆಕ್ಷೇಪಿಸುತ್ತಿರುವೆಯಲ್ಲಾ ? ಇದರ ಮರ್ಮವಾದರೂ ಏನು? ಎಂದನು.

ಕಲ್ಯಾಣಮಲ್ಲನು ಮತ್ತೆ ಆವ ಮಾತನ್ನೂ ಆಡದೆ ವಾಗೀಶನ ಇಷ್ಟಾನುಸಾರವಾಗಿ ನಡೆದುಕೊಂಡನು, ಆದರೆ ಆಗಿಂದಾಗ ಭಯದಿಂದ ನಡುಗುತ್ತಿದ್ದನು. ವಾಗೀಶನು ಹೇಡಿಯಾದ ಕಲ್ಯಾಣಮಲ್ಲನ ಸ್ವಭಾವವೇ ಹೀಗೆಂದು ಆತನನ್ನು ಲೆಕ್ಕಿಸದೆಯೇ, ದಾರಿಯ ಮತ್ತೊಂದು ಪಕ್ಕಕ್ಕೆ ಬಂದು ಅಲ್ಲಿದ್ದ ಒಂದು ದೊಡ್ಡ ಗುಂಡುಕಲ್ಲಿಗೆ ಆ ತಂತಿಗಳನ್ನು ಚೆನ್ನಾಗಿ ಬಿಗಿದನು. ಇದರಿಂದ ದಾರಿಯಲ್ಲಿ ಬಂಡಿಯು ಹೋಗಿಬರುವುದಕ್ಕೆ ಅಡ್ಡಿಯುಂಟಾಯಿತು. ತಾಂತಿಯಾ ಭಿಲ್ಲನ ವಿದ್ಯುದ್ಯಾನವನ್ನು ಅಡ್ಡಗಿಸಿ ಅದನ್ನು ಕಮರಿಯಲ್ಲಿ ಉರುಳಿಸುವುದಕ್ಕಾಗಿಯೇ ವಾಗೀಶನು ಈ ಹೂಟವನ್ನು ಹೂಡಿದುದು. ಕೆಲಸವು ಮುಗಿದ ಮೇಲೆ ವಾಗೀಶನು—ಅಯ್ಯಾ! ನಮ್ಮ ಕೆಲಸವು ಮುಗಿದುದು. ತಾಂತಿಯಾ ಭಿಲ್ಲನು ವಿದ್ಯುದ್ಯಾನದಲ್ಲಿ ಬಂದು ಈ ಕಮರಿಯಲ್ಲಿ ಬಿದ್ದು ಸಶರೀರ ಸ್ವರ್ಗಸುಖವನ್ನು ಅನುಭವಿಸುವುದೊಂದೇ ಉಳಿದಿರುವುದು, ಎಂದು ಸಂತೋಷದಿಂದ ಮಾತನಾಡಿದನು.

ಕಲ್ಯಾಣ—ವಿದ್ಯುದ್ಯಾನದಲ್ಲಿ ಆತನೇ ಬರುವನೆಂದು ನಿಮಗೇನು ನಂಬುಗೆ? ಅದರಲ್ಲಿ ಮತ್ತಾರಾದರೂ ಕುಳಿತು ಬರುವುದಾದರೆ ಮುಂದೇನು ಗತಿ? ರಾಜಮಾರ್ತಂಡನ ಕಡೆಯವರು ಆಗಿಂದಾಗ ಈ ಮಾರ್ಗವಾಗಿ ಹೋಗಿ ಬರುತ್ತಿರುವರು. ಈ ಕುತಂತ್ರವು ಅವರಲ್ಲಿ ಫಲಿಸುವುದಾದರೆ ನಮ್ಮ ಪರಿಣಾಮವಾದರೂ ಏನು? ಇದನ್ನಾದರೂ ನಾವು ಆಲೋಚಿಸಬೇಡವೆ?

ವಾಗೀಶ—ನಾನು ಇದೆಲ್ಲವನ್ನೂ ಮೊದಲೇ ಆಲೋಚಿಸಿ ಅದಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಿರುವೆನು. ನಾನು ನಿನ್ನಂತೆ ದಡ್ಡತನದ ಕೆಲಸವನ್ನು ಮಾಡತಕ್ಕವನಲ್ಲ. ನಾನು ದಾರಿಯಲ್ಲಿ ಸೇವಕನೊಬ್ಬನನ್ನು ನಿಯಮಿಸಿರುವೆನು. ಆತನು ಗಾಡಿಗಳನ್ನು ಪರೀಕ್ಷಿಸಿ ಇತರರದಾಗಿದ್ದರೆ ಅವರಿಗೆ ದಾರಿಯನ್ನು ಬಿಡಿಸಿಕೊಡುವನು. ತಾಂತಿಯಾ ಭಿಲ್ಲನದಾಗಿದ್ದರೆ ಉದಾಸೀನನಾಗಿದ್ದುಬಿಡುವನು. ಇದರಿಂದ ಇತರರಿಗೆ ತೊಂದರೆಯೂ ಇಲ್ಲ; ನಮ್ಮ ಕೆಲಸವೂ ಕಿಡುವ ಹಾಗಿಲ್ಲ.

ವೈದ್ಯ ವಾಗೀಶನು ಹೀಗೆ ಹೇಳಿ ದೂರದಲ್ಲಿದ್ದ ಒಂದು ಗಿಡದ ಮರೆಯಲ್ಲಿ ಅವಿತುಕೊಂಡನು. ಕಲ್ಯಾಣಮಲ್ಲನೂ ಅವನ ಹಿಂದೆ ಹಿಂದೆಯೇ ನಿಂತುಕೊಂಡನು. ಇಬ್ಬರೂ ಕೊಂಚ ಹೊತ್ತು ಕಾದಿದ್ದ ಬಳಿಕ, ಕಲ್ಯಾಣಮಲ್ಲನು ವಾಗೀಶನನ್ನು ಕುರಿತು—ಮಹಾಶಯ! ಇನ್ನು ನನ್ನ ಕೆಲಸವೇನೂ ಇರುವುದಿಲ್ಲ.

ನಾನು ಮನೆಗಾದರೂ ಹೊರಟುಹೋಗುವೆನು. ನಾನು ಈ ಹತ್ಯೆಯನ್ನು ಕಣ್ಣಿನಿಂದ ನೋಡಲಾರೆನು. ನೀವು ನಿಮ್ಮ ಕೆಲಸವನ್ನು ತೀರಿಸಿಕೊಂಡು ಮನೆಗೆ ಬರಬಹುದು, ಎಂದನು.

ವಾಗೀಶನು ಈ ಮಾತನ್ನು ಕೇಳಿದ ಕೂಡಲೆ ರೇಗಿ ರೇಗಿ ಬಿದ್ದವನಾಗಿ— ಕಲ್ಯಾಣಮಲ್ಲ ಮಹಾಶಯ! ನೀವೆಲ್ಲಾ ಸ್ವಕಾರ್ಯವನ್ನು ಸಾಧಿಸಿಕೊಳ್ಳತಕ್ಕ ಬುದ್ಧಿವಂತರೆಂದು ನನಗೆ ಗೊತ್ತಾಯಿತು. ಕೊಲೆಯ ಫಲ ಮಟ್ಟಿಗೆ ನಿಮಗೆ ಬೇಕು, ಕೊಲೆಮಾಡುವುದು ನಿಮಗೆ ಬೇಡವೇನೋ! ಕೊಲೆಮಾಡುವುದನ್ನು ಕೂಡ ಕಣ್ಣಿನಿಂದ ನೋಡಲಾರದಂತಹ ನಿಮ್ಮ ಸುಕುಮಾರ ಶರೀರವನ್ನು ನಾನು ಎಲ್ಲಯೂ ಕಾಣೆನು. ಕೊಲೆಯನ್ನು ಕೇಳಿದ ಕೂಡಲೆ ನಿಮಗೆ ಮೂರ್ಛೆಬಂದುಬಿಡುವುದಲ್ಲವೇ? ಇಂತಹ ಚಾತುರ್ಯದ ಮಾತನ್ನು ಆರ ಮುಂದಾಡುವಿರಿ? ಯುಕ್ತಿಯಿಂದ ನೀವು ತಲೆಯನ್ನು ತಪ್ಪಿಸಿಕೊಂಡು ಅಪರಾಧವೆಲ್ಲವನ್ನೂ ನನ್ನ ತಲೆಯ ಮೇಲೆ ಹೊರಿಸುವುದಕ್ಕೆ ಎಣಿಸಿರುವಿರೋ? ಇಂತಹ ದುರ್ವಿದ್ಯೆಯು ನನ್ನಲ್ಲಿ ಸಾಗದು. ಲಾಭಬರುವುದಾದರೆ ನಾವಿಬ್ಬರೂ ಅನುಭವಿಸಬೇಕು; ವಿಪತ್ತುಂಟಾಗುವುದಾದರೂ ನಾವಿಬ್ಬರೂ ಸಮಭಾಗವಾಗಿ ಹಂಚಿಕೊಂಡು ಅನುಭವಿಸಲೇಬೇಕು. ಬೇಡವೆಂದರೆ ಬಿಡುವವರಾರು? ನೀವೂ ನನ್ನೊಡನೆಯೇ ಇದ್ದುಕೊಂಡು ನಾನು ಹೇಳಿದ ಹಾಗೆ ಕೆಲಸಗಳನ್ನು ಮಾಡಿಯೇ ತೀರಬೇಕು. ಒಂದು ವೇಳೆ ನೀವು ಓಡಿಹೋಗುವ ಯತ್ನಮಾಡಿದರೂ, ಈ ಗಡಾರಿಯಿಂದ ನಿಮ್ಮ ತಲೆಯನ್ನು ಎರಡು ಹೋಳಾಗಿ ಮಾಡಿ ನಿಮ್ಮನ್ನು ಈ ಕಮರಿಯಲ್ಲ ಹೂತುಬಿಟ್ಟೇನು! ವೈದ್ಯವಾಗೀಶನ ಮಹಿಮೆಯು ನಿಮಗಿನ್ನೂ ಗೊತ್ತಿಲ್ಲವೆಂದು ತೋರುವುದು. ಎಚ್ಚರಿಕೆ! ಎಂದು ಆರ್ಭಟಿಸಿದನು.

ಕಲ್ಯಾಣಮಲ್ಲನು ಮುಂದೆ ಆವ ಮಾತನ್ನು ಆಡುವುದಕ್ಕೂ ಶಕ್ತಿಸಾಲದವನಾಗಿ ತಲೆವಾಗಿ ನಿಂತುಬಿಟ್ಟನು. ಅವನ ಶರೀರವು ಮೊದಲಿಗಿಂತಲೂ ಅಧಿಕವಾಗಿ ನಡುಗುವುದಕ್ಕೆ ತೊಡಗಿತು. ಈ ಯವಸ್ಥೆಯಲ್ಲ ಕೊಂಚ ಹೊತ್ತು ಕಳೆಯಲು, ಕಲ್ಯಾಣಮಲ್ಲನು ವಾಗೀಶನನ್ನು ಸಂತೋಷಪಡಿಸುವುದಕ್ಕಾಗಿ— ಮಹಾಶಯ! ಆತನು ಬರುವ ಹೊತ್ತಾಯಿತೆಂದು ತೋರುವುದು. ನಾವು ಇನ್ನು ಎಚ್ಚರದಿಂದಿರಬೇಕು. ಗಂಟೆಗೆ ಹತ್ತು ಮೈಲಿಗಳ ವೇಗದಲ್ಲಿ ಬರತಕ್ಕ ಆತನ ವಿದ್ಯುದ್ಯಾನವು ಈ ತಂತಿಗಳಿಂದ ಅಡ್ಡಗಿಸಲ್ಪಟ್ಟ ಕೂಡಲೆಯೇ ಆತನು ಈ ಸಣ್ಣ ದಾರಿಯಲ್ಲಿ ದಾಯತಪ್ಪಿ ಕಮರಿಯಲ್ಲಿ ಬಿದ್ದೇ ಬಿಡುವನು. ಆ ಮೇಲೆ ಆತನು ಬದುಕುವ ಸಂಭವವೇ ಇಲ್ಲ. ಮಹಾಶಯ! ಮಹಾಶಯ! ಆವುದೋ ಧ್ವನಿಯು ಕೇಳಿಬರುವಂತಿದೆ, ಎಂದನು.

ಆ ಸಮಯದಲ್ಲಿ ವಿದ್ಯುದ್ಯಾನದ ಶಬ್ದವು ರಾತ್ರಿಕಾಲದ ನಿಸ್ಸ್ತಬ್ಧತೆಯನ್ನು ಭೇದಿಸಿ ಗಗನ ಮಂಡಲವನ್ನು ವ್ಯಾಪಿಸಿತು. ಇವರಿಬ್ಬರೂ ಧ್ವನಿಯಿಂದ ವಿದ್ಯುದ್ಯಾನವು ತಮ್ಮ ಕಡೆಗೆ ಬರುತ್ತಿರುವುದೆಂದು ತಿಳಿದು ಎದ್ದು ನಿಂತುಕೊಂಡರು. ಕೂಡಲೆ ವಾಗೀಶನು ಓಡಿಹೋಗಿ ದಾರಿಗೆ ಅಡ್ಡಲಾಗಿ ಹಾಕಿದ್ದ ತಂತಿಗಳನ್ನು ಬಿಗಿಮಾಡಿದನು. ಇದನ್ನು ನೋಡುತ್ತಿದ್ದ ಕಲ್ಯಾಣಮಲ್ಲನು ನಿಂತಿರಲಾರದವನಾಗಿ ಕೆಳಗೆ ಬಿದ್ದು ಬಿಟ್ಟನು. ಅವನಿಗೆ ಮೂರ್ಛೆಯುಂಟಾಗುವುದಕ್ಕೆ ಹೆಚ್ಚಿನ ಕಾಲವೇನೂ ಬೇಕಾಗಿರಲಿಲ್ಲ.

ವಾಗೀಶನು ಕಲ್ಯಾಣಮಲ್ಲನನ್ನು ಸಂತೈಸಿ—ಅಯ್ಯಾ ! ಇಲ್ಲಿ ನೋಡೋಣವಾಗಲಿ. ವಿದ್ಯುದ್ಯಾನವು ಅತಿವೇಗದಿಂದ ಬರುತ್ತಿರುವುದು. ತಾಂತಿಯಾ ಭಿಲ್ಲನು ಸಾಹಸಿಯಾದುದರಿಂದಲೇ ಇಷ್ಟು ವೇಗದಿಂದ ಗಾಡಿಯನ್ನು ನಡೆಯಿಸಿಕೊಂಡು ಬರುತ್ತಿರುವನು. ಮತ್ತಾರಾದರೂ ಆಗಿದ್ದರೆ ಇಷ್ಟು ವೇಗವಾಗಿ ಬರುತ್ತಿರಲಿಲ್ಲ, ಎಂದನು.

"ಸೇವಕನು ಕೂಡ ಆವ ಪ್ರಯತ್ನವನ್ನೂ ಮಾಡದೆ ಸುಮ್ಮನಿರುವುದು ನೋಡಿದರೆ ನಿಜವಾಗಿಯೂ ತಾಂತಿಯಾ ಭಿಲ್ಲನೇ ಬಂದಿರಬೇಕೆಂದು ತೋರುತ್ತಿರುವುದು," ಎಂದು ಕಲ್ಯಾಣಮಲ್ಲನೂ ನುಡಿದನು.

ಇಷ್ಟೆನ್ನುವುದರೊಳಗಾಗಿ ವಿದ್ಯುದ್ಯಾನವು ಬಂದು ವೇಗದಿಂದ ತಂತಿಗಳ ಮೇಲೆ ನುಗ್ಗಿತು. ತಂತಿಗಳು ಬಿಗಿಯಾಗಿ ಕಟ್ಟಲ್ಪಟ್ಟಿದ್ದುದರಿಂದ, ವೇಗದಿಂದ ಬಂದಗಾಡಿಯು ಮುಂದಕ್ಕೆ ಹೋಗದೆ ಹಿಂದಕ್ಕೆ ತಳ್ಳಲ್ಪಟ್ಟು ದಾಯತಪ್ಪಿ ಆಳವಾದ ಕಮರಿಯಲ್ಲಿ ಮಗುಚಿಕೊಂಡೇಬಿಟ್ಟಿತು. ಅದರೊಡನೆ ಅದೊಂದಾರ್ತನಾದವು ಕೇಳಿಬಂದು ಬಳಿಕ ಎಲ್ಲವೂ ಶಾಂತವಾಗಿ ಹೋಯಿತು.

ಆಳವಾದ ಕಮರಿಯಲ್ಲಿ ಬೇಕಾದ ಹಾಗೆ ನೀರು ತುಂಬಿಕೊಂಡಿದ್ದಿತು. ವಿದ್ಯುದ್ಯಾನವು ಅದರಲ್ಲಿ ದುಘುಪ್ ಎಂದು ಶಬ್ದದೊಡನೆ ಮುಳುಗಿಬಿಟ್ಟಿತು. ಈ ಶಬ್ದವನ್ನು ಕೇಳಿದ ಕೂಡಲೆ ವಾಗೀಶನು ಪರಮಾನಂದ ಭರಿತನಾಗಿ—ಅಯ್ಯಾ ಮಿತ್ರನೇ! ಎಲ್ಲವೂ ನಮ್ಮಿಷ್ಟದಂತೆಯೇ ನಡೆದು ಹೋಯಿತು, ಶತ್ರುವು ಮಡಿದನು. ನಮಗೆ ಇನ್ನಾರ ಭಯವುಂಟು? ಕಲ್ಯಾಣಮಲ್ಲ ಮಹಾಶಯ! ಇನ್ನಾದರೂ ಭಯವನ್ನು ತ್ಯಾಗಮಾಡಿ ಸಂತೋಷವಾಗಿರಬಹುದಷ್ಟೇ? ಇಂದು ನಮ್ಮ ಬಡ ಜೀವವು ಬದುಕಿದಂತಾಯಿತು. ನಾವೇ ಧನ್ಯರು, ಎಂದು ಆನಂದದಿಂದ ಮಾತನಾಡಿದನು.

ಕಲ್ಯಾಣ—ಎಲ್ಲವೂ ಮುಗಿದು ಹೋದುದೇ? ಇದೆಂತಹ ಪೈಶಾಚಿಕ ವ್ಯಾಪಾರವು! ವೈದ್ಯವಿದ್ಯಾ ವಿಶಾರದ! ನೀನೆಂತಹ ಕೊಲೆ ಪಾತಕ!

ವಾಗೀಶ—(ಆತನ ಕೈಗಳನ್ನು ಹಿಡಿದು) ಇಂದಿಗೆ ಶತ್ರುಶೇಷವೂ ನಿರ್ಮೂಲವಾಗಿ ಹೋಯಿತು. ನಾವು ಇನ್ನು ಇಲ್ಲಿರುವುದು ಸರಿಯಲ್ಲ. ಈಗ ದೀಪವನ್ನು ಮತ್ತೆ ಕಚ್ಚಿಸು. ನಾವು ತಂತಿಗಳನ್ನು ಬಿಚ್ಚಿಕೊಂಡು ಮನೆಗೆ ಹೊರಟುಹೋಗುವ. ಆರಿಗೂ ಈ ತಂತ್ರವು ಗೊತ್ತಾಗದಿರಬೇಕು.

ಕಲ್ಯಾಣಮಲ್ಲನು ಈ ಮಾತನ್ನು ಕೇಳಿಯೂ ಕೇಳದವನಂತೆ ಬೆಪ್ಪಾಗಿ ನಿಂತುಬಿಟ್ಟನು. ವಾಗೀಶನು ಈತನ ಭಾವವನ್ನು ಅರಿತುಕೊಂಡು ದೀಪವನ್ನು ತಾನೇ ಕಚ್ಚಿಸಿ ಕಟ್ಟಿದ್ದ ತಂತಿಯನ್ನು ಒಂದೊಂದಾಗಿ ಬಿಚ್ಚುವುದಕ್ಕೆ ಮೊದಲು ಮಾಡಿದನು. ವಾಗೀಶನು ತಂತಿಗಳನ್ನು ಬಿಚ್ಚಿ ಸುರುಳಿ ಸುತ್ತುತ್ತಿರುವಷ್ಟರಲ್ಲಿಯೇ ಆವನೋ ಒಬ್ಬನು ಎರಡು ಚಕ್ರದ ಬಂಡಿಯ ಮೇಲೆ ಕುಳಿತುಕೊಂಡು ಬಂದು ನಿಶ್ಶಬ್ದವಾಗಿ ವಾಗೀಶನಿದ್ದ ಕಡೆಗೆ ಹೋಗಿ ಆತನ ಬೆನ್ನ ಮೇಲೆ ಕೈಯಿಟ್ಟನು.

ವಾಗೀಶನು ಬೆಚ್ಚಿ ಬೆದರಿದವನಾಗಿ ಹಿಂದಿರುಗಿ ನೋಡುವಲ್ಲಿ ಆಗಂತುಕನು ಮರ್ಮವನ್ನು ಭೇದಿಸತಕ್ಕ ತೀಕ್ಷ್ಣ ದೃಷ್ಟಿಯಿಂದ ಆತನನ್ನು ದುರದುರನೆ ನೋಡುತ್ತಾ ಶುಷ್ಕವಾದ ನಗೆಯನ್ನು ನಕ್ಕು—ನನ್ನನ್ನು ಕೊಲ್ಲಬೇಕೆಂಬ ಸದುದ್ದೇಶದಿಂದಲ್ಲವೇ ತಾವು ಈ ಅಸಮಯದಲ್ಲಿ ಇಷ್ಟು ಯತ್ನಮಾಡಿದುದು? ತಮ್ಮ ಪ್ರಯತ್ನವು ಫಲೋನ್ಮುಖವಾದುದಕ್ಕಾಗಿ ನಾನು ನಿಮಗೆ ಎಷ್ಟೋ ಕೃತಜ್ಞನಾಗಿರುವೆನು, ವಾಗೀಶ ಮಹಾಶಯ! ಎಂದು ಅಪಹಾಸ್ಯಮಾಡಿದನು.

ವಾಗೀಶನು ಆ ಗಂತುಕನನ್ನು ನೋಡಿದ ಕೂಡಲೆಯೇ ಅರಚಿಕೊಳ್ಳುತ್ತಾ ಹತ್ತು ಹಜ್ಜೆಗಳು ಹಿಂದಕ್ಕೆ ಸರಿದು ನಿಂತನು. ಅವನ ತಲೆಯ ಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು; ಅವನ ಹೃದಯವು ಸಹಸ್ರ ಪ್ರಕಾರವಾಗಿ ಸಿಡಿದು ಹೋಯಿತು. ಅವನ ಮುಖವು ಕಂಗೆಟ್ಟು ನಾಲಗೆಯು ಒಣಗಿ ಹೋಯಿತು. ಆತನು ತನ್ನ ಮುಂದೆ, ತಾಂತಿಯಾ ಭಿಲ್ಲನಲ್ಲ, ಮೃತ್ಯುದೇವತೆಯೇ ಪ್ರತ್ಯಕ್ಷವಾಗಿ ಬಂದು ನಿಂತಿರುವಂತೆ ಭಾಸಿಸಿ ಥರಥರನೆ ನಡುಗಲಾರಂಭಿಸಿದನು. ಕಲ್ಯಾಣಮಲ್ಲನ ಅವಸ್ಥೆಯನ್ನು ಹೇಳಿ ತೀರದು. ಆತನು ಬದುಕಿದ್ದರೂ ಸತ್ತ ಹೆಣದಂತಾಗಿಬಿಟ್ಟಿದ್ದನು.

ತಾಂತಿಯಾ ಭಿಲ್ಲನು ದಿಕ್ಕು ತೋರದೆ ತಲೆವಾಗಿ ನಿಂತಿದ್ದ ವೈದ್ಯ ವಾಗೀಶನನ್ನು ನೋಡಿ ತುಚ್ಛವಾಗಿ ಕಾಣುತ್ತಾ—ಎಲಾ! ನನ್ನನ್ನು ಕೊಲ್ಲುವುದಕ್ಕಾಗಿಯಲ್ಲವೇ ನಿನ್ನ ಈ ದುಷ್ಪ್ರಯತ್ನವು? ಇದನ್ನು ನೀನು ಒಪ್ಪಿಕೊಳ್ಳಲೇ ಬೇಕಾಗುವುದು. ನನ್ನನ್ನು ನೀನು ಎಷ್ಟರ ಮಟ್ಟಿನ ದಡ್ಡನೆಂದು ತಿಳಿದಿದ್ದೆಯೋ, ಅಷ್ಟರ ಮಟ್ಟಿನ ದಡ್ಡನು ನಾನಾಗಿಲ್ಲವೆಂಬುದನ್ನಾದರೂ ನೀನು ಅರಿತುಕೊಳ್ಳು.

ನಿನ್ನನ್ನು ನಾನು ಚತುರನೆಂದು ತಿಳಿದಿದ್ದೆನು. ಅಯ್ಯೋ ಪಾಪ! ನಿನಗೆ ಆ ಚಾತುರ್ಯವೆಲ್ಲಿಂದ ಬರಬೇಕು? ವಿವೇಕವಿಲ್ಲದವನು ತಾನೇ ಬುದ್ಧಿಮಂತನೆಂದು ಹೆಮ್ಮೆ ಪಡುವನು, ಆದರೆ ಅವನಿಗಿಂತಲೂ ಎಷ್ಟೋ ಮಂದಿ ಬುದ್ಧಿಮಂತರು ಇರುವರೆಂಬುದನ್ನು ಆತನು ಅರಿಯದಿರುವುದಕ್ಕಾಗಿ, ನಾನು ಪಶ್ಚಾತ್ತಾಪ ಪಡ ಬೇಕಾಗಿರುವುದು. ವಾಗೀಶ! ದ್ರೋಹಿಯಾದ ನಿನ್ನ ದುರಭಿಸಂಧಿಯನ್ನು ಸುಟ್ಟರು. ನಾನು ಕಲ್ಯಾಣಮಲ್ಲನ ಆಹ್ವಾನವನ್ನು ಅಂಗೀಕರಿಸಿ ಆತನ ಮನೆಗೆ ಬರುವುದಾಗಿ ಮಾತ ಕೊಟ್ಟಿದ್ದೆನು. ನಿನ್ನಂತಹ ದುರ್ಮಂತ್ರಿಯ ದುರುಪದೇಶ ದಿಂದ ಆತನು ಇಂತಹ ವಿಶ್ವಾಸಘಾತುಕನಾಗುವನೆಂದು ನಾನು ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ. ಕೀಟಪ್ರಾಯರಾದ ನೀವುಗಳು ನಿಮ್ಮ ಯೋಗ್ಯತೆಯನ್ನರಿಯದೆ ಯೇ ನನ್ನೊಡನೆ ಹೋರಾಡುವುದಕ್ಕೆ ನಿಲ್ಲಬಹುದೇ? ನನ್ನನ್ನು ಶಿವಪ್ರಾಸಾದಕ್ಕೆ ಕರೆದುಕೊಂಡು ಹೋಗುವುದಕ್ಕಾಗಿ ಕಲ್ಯಾಣಮಲ್ಲನು ತನ್ನ ವಿದ್ಯುದ್ಯಾನವನ್ನು ಕಳುಹಿಸಿಕೊಟ್ಟಿದ್ದನು. ನಿಮ್ಮಗಳ ದುಷ್ಟಾಭಿಪ್ರಾಯಗಳು ನನಗೆ ಮೊದಲೇ ಗೊತ್ತಿದ್ದುದರಿಂದ ನಾನು ಅದನ್ನು ಹತ್ತಿಕೊಂಡುಬರಲು ಇಷ್ಟಪಡಲಿಲ್ಲ.

ದುರಾತ್ಮರಿರಾ! ನೀವು ನನ್ನನ್ನು ಕೊಲ್ಲುವುದಕ್ಕಾಗಿ ಹೂಡಿದ ಹೂಟವು ಚೆನ್ನಾಗಿಯೇ ಇರುವುದು. ಇತರರು ನಿಮ್ಮ ಬಲೆಯಲ್ಲಿ ಒಂದು ವೇಳೆ ದುರ್ಯೋಗ ದಿಂದ ಬಿದ್ದರೂ ಬಿದ್ದಾರು, ಆದರೆ ತಾಂತಿಯಾ ಭಿಲ್ಲನು ಬೇಡರ ಬಲೆಯಲ್ಲಿ ಸಿಕ್ಕಿ ಪ್ರಾಣಬಿಡಲು ಸಾಧ್ಯವೇ? ವಿವೇಕವಿಲ್ಲದ ಪಶುಗಳಿರಾ! ನಿಮ್ಮಿಬ್ಬರನ್ನೂ ನಾನು ಈ ಕ್ಷಣದಲ್ಲಿಯೇ ಸುಟ್ಟು ಬೂದಿಮಾಡಿಬಿಡಲಾರನೇನು? ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರವೆನ್ನುವ ಹಾಗೆ ನಿಮ್ಮ ಮೇಲೆ ಕೈಮಾಡುವುದು ನನ್ನ ಗೌರವಕ್ಕೆ ಎಷ್ಟೋ ಕುಂದಕವು, ಎಂದು ಬಾಯಿಗೆ ಬಂದ ಹಾಗೆ ಹೀಯಾಳಿಸಿದನು.

ತಾಂತಿಯಾ ಭಿಲ್ಲನ ವಾಗ್ಬಾಣಗಳಿಂದ ವಾಗೀಶನ ಹೃದಯವು ಛಿನ್ನವಿಚ್ಛಿನ್ನ ವಾಗಿ ಹೋಯಿತು, ಆದರೂ ಅವನು ತಪ್ಪುಮಾಡಿದವನಂತೆ ಒಂದು ಮಾತನ್ನೂ ಆಡದೆ ತಲೆಯನ್ನು ತಗ್ಗಿಸಿಕೊಂಡು ನಿಂತನು. ವಾಗೀಶನು ಬಂದುದೆಲ್ಲಾ ಬರ ಲೆಂದು ಭಿಲ್ಲನನ್ನು ಕೊಂದುಬಿಡುವುದಾಗಿ ಮನಸ್ಸಿನಲ್ಲಿ ಮಂಡಿಗೆಯನ್ನು ಮಾಡಿ ಕೊಂಡನು. ಆದರೆ ಪಾರ್ಶ್ವವಾಯು ಬಂದವನಂತೆ ಆತನ ಕೈಗಳು ಬಿದ್ದೇ ಹೋ ಗಿದ್ದುವು. ಆತನು ತಲೆಯನ್ನು ತಗ್ಗಿಸಿಕೊಂಡೇ ಆಲೋಚಿಸಿ ನೋಡಿದನು:—
"ಇದೇನು ಚಮತ್ಕಾರವು! ನನ್ನ ಕುತಂತ್ರವು ಫಲಿಸಿ ವಿದ್ಯುದ್ಯಾನವು ನೀರಿನಲ್ಲಿ ಮುಗುಚಿಕೊಂಡಿತು. ಅದರ ಜತೆಯಲ್ಲಿಯೇ ಆರ್ತನಾದವೂ ಕೇಳಿಸಿತು. ಶತ್ರು ನಿಪಾತವಾಯಿತೆಂದು ನಾನು ಎಷ್ಟೋ ಸಂತೋಷಪಟ್ಟುಕೊಂಡೆನು. ಆ ಸಂತೋ ಷದ ಮಧ್ಯದಲ್ಲಿಯೇ ತಾಂತಿಯಾ ಭಿಲ್ಲನು ಇದಿರಿನಲ್ಲಿ ಬಂದು ನಿಂತಿರುವನು

ಇದೇನು, ಇಂದ್ರಜಾಲವೇ—ಇಲ್ಲವೇ, ಸ್ವಪ್ನವೇ? ನನ್ನ ಕಣ್ಣೂ ಕಿವಿಯೂ ನನ್ನನ್ನು ಮೋಸಮಾಡಿದುವೇ ಹೇಗೆ? ಇವುಗಳೇ ಹೀಗಾದ ಮೇಲೆ ನಾನು ಮತ್ತಾರನ್ನು ನಂಬುವುದಕ್ಕಾದೀತು? ಹಾ ದೈವವೇ! ಮನುಷ್ಯನ ಪ್ರಯತ್ನವೇ ಒಂದು ಬಗೆ, ಅದರ ಪರಿಣಾಮವೇ ಒಂದು ಬಗೆ. ಅದು ಹಾಗಿರಲಿ, ಮುಂದೇನು ಗತಿ?"

ತಾಂತಿಯಾ ಭಿಲ್ಲನು ತಲೆಯಮೇಲೆ ಕೈಗಳನ್ನು ಹೊತ್ತುಕೊಂಡು ಕೆಳಗೆ ಕುಳಿತು ಬಿಕ್ಕಿ ಬಿಕ್ಕಿ ಅಳುತ್ತಿದ್ದ ಕಲ್ಯಾಣಮಲ್ಲನನ್ನು ಹಿಡಿದೆಬ್ಬಿಸಿ ಹೆಬ್ಬುಲಿಯಂತೆ ಗರ್ಜಿಸುತ್ತಾ—ಎಲಾ ಮೂರ್ಖ! ಮಾಡುವ ಕೆಲಸ ಮಾಡಿ ಅತ್ತರೆ ಬಿಟ್ಟೇತೆ? ನೀನು ಆ ಪಿಶಾಚನ ವೈದ್ಯನ ಕೈಯಲ್ಲಿ ಆಟದ ಬೊಂಬೆಯಂತಾಗಿರುವೆ. ನಿನ್ನನ್ನು ನೋಡಿದರೆ ಕೋಪಕ್ಕೆ ಪ್ರತಿಯಾಗಿ ಸಂಕಟವುಂಟಾಗುವುದು. ನೀನು ಹಣಗಾರನಾದುದರಿಂದ ನಿನ್ನ ಅಪರಾಧವನ್ನು ನಾನು ಕ್ಷಮಿಸಲಾರೆನು. ನಿನ್ನ ತಪ್ಪಿಗಾಗಿ ನೀನು ಹಿಂದೆ ಮಾತ ಕೊಟ್ಟಿದ್ದ ಹಣಕ್ಕೆ ದ್ವಿಗುಣವಾಗಿ ಈಗ ಸಲ್ಲಿಸಬೇಕಾಗಿರುವುದು. ನಾನು ಸರ್ವ ಪ್ರಕಾರದಿಂದಲೂ ನಿನ್ನಿಂದ ಒಂದು ಲಕ್ಷ ರೂಪಾಯಿಗಳನ್ನೇ ಬರಮಾಡಿಕೊಳ್ಳುವೆನು. ನನ್ನ ಹಣವನ್ನು ನನಗೆ ಸಲ್ಲಿಸದೆ ನಿನಗೆ ಬೇರೆಯ ಗತಿಯೇ ಇಲ್ಲ. ಈ ರಾತ್ರಿಯಲ್ಲಿಯೇ ನೀನು ನನಗೆ ಕೊಡಬೇಕಾದ ಹಣವೆಲ್ಲವನ್ನೂ ಹೇಗಾದರೂ ಮಾಡಿ ಕೊಟ್ಟೇ ಕೊಡಬೇಕು. ಇದಕ್ಕೆ ತಪ್ಪುವುದಾದರೆ, ನಿನ್ನ ಜಮೀನಿನ ಉತ್ಪತ್ತಿಯಲ್ಲ ಆರನೆಯ ಒಂದು ಭಾಗವನ್ನು ನನಗೆ ಸಲ್ಲಿಸುವುದಾಗಿ ಪತ್ರವನ್ನು ಬರೆದುಕೊಡಬೇಕಾದೀತು. ಈಗ ನಡೆ, ನಾವೆಲ್ಲರೂ ಶಿವ ಪ್ರಾಸಾದಕ್ಕೆ ಹೊರಡುವ. ಅಲ್ಲಿ ಅತಿಥಿ ಸತ್ಕಾರದ ಭೋಜನ ಸಮಾರಂಭವು ಯೋಗ್ಯತಾನುಗುಣವಾಗಿ ನಡೆಯಲಿ, ಎಂದು ಕಠಿನೋಕ್ತಿಗಳನ್ನಾಡಿದನು.

ವಾಗೀಶನು ಆವ ಮಾತನ್ನೂ ಆಡದೆ ತಂತಿಯ ಸುರುಳಿಯನ್ನು ಹೆಗಲ ಮೇಲೆ ಹೊತ್ತುಕೊಂಡು ಮುಂದೆ ಮುಂದೆ ತೆರಳಿದನು. ಆತನ ಹಿಂದೆ ಕಲ್ಯಾಣಮಲ್ಲನು ಸೂತ್ರದ ಬೊಂಬೆಯಂತೆ ಹೊರಟನು. ತಾಂತಿಯಾ ಭಿಲ್ಲನು ಅವರನ್ನು ಮುಂದೆ ಬಿಟ್ಟುಕೊಂಡು ಅವರ ಹಿಂದೆಯೇ ಹೊರಟನು.

ಕೊಂಚದೂರ ನಡೆದ ಬಳಿಕ ವಾಗೀಶನು ಚೇತರಿಸಿ ಕೊಂಡವನಾಗಿ ತಾಂತಿಯನನ್ನು ಕುರಿತು—ತಾತ್ಯ! ವಿದ್ಯುದ್ಯಾನದೊಡನೆ ಕಮರಿಯಲ್ಲಿ ಬಿದ್ದಾತನು ಆರಿರಬಹುದು? ನೀನಲ್ಲವಷ್ಟೇ? ಎಂದು ಪ್ರಶ್ನೆಮಾಡಿದನು.

ತಾಂತಿಯಾ—(ಕರ್ಕಶ ಸ್ವರದಿಂದ) ವೈದ್ಯ ಮಹಾಶಯ! ಆ ವಿಷಯವನ್ನು ಕಟ್ಟಿಕೊಂಡು ನಿನಗಾಗುವ ಲಾಭವಾದರೂ ಏನು? ನೀನು ನಿಷ್ಕಾರಣವಾಗಿ

ನಿರಪರಾಧನನ್ನು ಕೊಲೆ ಮಾಡಿದೆ. ಈಗ ಆತನಾರೆಂದು ಕೇಳುತ್ತಿರುವೆಯಲ್ಲಾ! ನಿನಗೆ ನಾಚುಗೆಯಾದರೂ ಇಲ್ಲವೆ? ನನಗಾಗಿ ಬಡಪಾಯಿಯೊಬ್ಬನು ಪ್ರಾಣ ಬಿಟ್ಟನು.

ವಾಗೀಶ—ಆತನಾರೆಂಬುದನ್ನು ತಿಳಿಸಿದರೆ, ನಿನಗಾಗುವ ನಷ್ಟವಾದರೂ ಏನು?

ತಾಂತಿಯಾ—ಆತನು ಇಂದಿರಾಕಾಂತನೆಂಬ ಹೆಸರಿನ ದೊಡ್ಡ ಮನುಷ್ಯನು. ಆತನು ನಾನಿದ್ದ ಮಂದಿರದಲ್ಲಿಯೇ ಇಳಿದುಕೊಂಡಿದ್ದನು. ನನಗೂ ಆತನಿಗೂ ಪರಿಚಯವುಂಟಾಗಿದ್ದಿತು. ಈ ರಾತ್ರಿಯಲ್ಲಿ ಭೋಜನಕ್ಕೆ ಬರಬೇಕೆಂದು ರಾಜಮಾರ್ತಂಡ ಮಹಾಶಯನು ಆತನನ್ನು ಪ್ರಾರ್ಥಿಸಿಕೊಂಡಿದ್ದನು. ಕಲ್ಯಾಣಮಲ್ಲನು ಕಳುಹಿದ್ದ ಬಂಡಿಯಲ್ಲಿ ಆತನನ್ನು ಕುಳ್ಳಿರಿಸಿ, ನಾನು ಬರುವುದು ಸ್ವಲ್ಪ ಸಾವಕಾಶವಾಗುವುದೆಂದು ಹೇಳಿ ಮೊದಲು ಕಳುಹಿದೆನು. ನೀವುಗಳು ಆತನನ್ನು ಕೊಂದುಬಿಟ್ಟಿರಿ.

ವಾಗೀಶ—ಈ ದುರ್ಗಮವಾದ ದಾರಿಯಲ್ಲಿ, ಅದರಲ್ಲಿಯೂ ರಾತ್ರಿಯ ಕಾಲದಲ್ಲಿ ನಿನ್ನ ಹೊರತು ಮತ್ತಾರೂ ಬರುವುದಿಲ್ಲವೆಂದು ನಾವು ತಿಳಿದಿದ್ದೆವು.

ತಾಂತಿಯಾ—ನಿಮ್ಮ ನೀಚವಾದ ಚಾತುರ್ಯವನ್ನು ಅರಿಯುವುದಕ್ಕೆ ನನಗೆ ತುಂಬಾ ಹೊತ್ತೇನೂ ಹಿಡಿಯಲಿಲ್ಲ. ಕಲ್ಯಾಣಮಲ್ಲನ ಗಾಡಿಯನ್ನು ನೋಡಿದೊಡನೆಯೇ ನೀವು ನನ್ನನ್ನು ಕೊಲ್ಲುವುದಕ್ಕೆ ಏರ್ಪಡಿಸಿರುವಿರೆಂದು ನಾನು ತಿಳಿದೆನು. ಅದಕ್ಕಾಗಿಯೇ ಆ ಗಾಡಿಯಲ್ಲಿ ನಾನು ಹೊರಡದೆ ಇಂದಿರಾಕಾಂತನನ್ನು ಕಳುಹಿದೆನು. ಬಳಿಕ ಎರಡು ಚಕ್ರದ ಬಂಡಿಯನ್ನು ಬಾಡಿಗೆಗೆ ತೆಗೆದುಕೊಂಡು ಅದರ ಹಿಂದೆ ಹಿಂದೆಯೇ ಬಂದೆನು. ಆ ಗಾಡಿಯು ನೀರಿನಲ್ಲಿ ಬಿದ್ದ ಶಬ್ದವನ್ನು ಕೇಳಿ ನಾನು ನೀವಿದ್ದಲ್ಲಿಗೆ ಬಂದು ಸೇರಿದೆನು. ನೋಡೋಣವಾಗಲಿ, ಈ ಎರಡು ಚಕ್ರದ ಬಂಡಿಯು ನನ್ನ ಬಳಿಯಲ್ಲಿಯೇ ಇರುವುದು.

ತಾಂತಿಯಾ ಭಿಲ್ಲನು ಹೀಗೆ ಹೇಳಿ ಸುಮ್ಮನಾದ ಬಳಿಕ ಕಲ್ಯಾಣಮಲ್ಲನು ತನ್ನಲ್ಲಿ ತಾನೇ ಚಿಂತಿಸಲಾರಂಭಿಸಿದನು:—"ತಾಂತಿಯನು ಮೊದಲೇ ನಮ್ಮ ಮೇಲೆ ವಿಷಕಾರುತ್ತಿರುವನು. ಈಗಲಾದರೋ ಉರಿಯುವ ಬೆಂಕಿಗೆ ಉಪ್ಪು ಹಾಕಿದಂತಾಯಿತು. ಈತನು ಸುಮ್ಮನಿರತಕ್ಕವನಲ್ಲ. ಈ ಕೊಲೆಯ ವಿಷಯವನ್ನು ಈತನು ಹೇಗಾದರೂ ಮಾಡಿ ಪೋಲೀಸಿಗೆ ತಿಳಿಸಿಬಿಡುವನು. ಆ ಯಮದೂತರು ನಾಳೆ ಬೆಳಗಾದ ಕೂಡಲೆ ನಮ್ಮನ್ನು ದಸ್ತಗಿರಿ ಮಾಡದೇ ಬಿಡರು. ಪಿಶಾಚಸ್ವರೂಪನಾದ ವಾಗೀಶನ ಮಾತಿಗೆ ನಾನು ಕಿವಿಗೊಡಬಹುದೇ? ನಡೆದುದು

ನಡೆದೇ ಹೋದುದು. ಈಗ ವ್ಯಸನಪಟ್ಟು ಪ್ರಯೋಜನವೇನು? ಈ ನೂತನ ನಾಪತ್ತಿನಿಂದ ಪಾರಾಗಬೇಕು. ಇಲ್ಲವಾದರೆ ನನ್ನ ಗುಟ್ಟೆಲ್ಲವೂ ರಟ್ಟಾಗಿ, ನಾನು ಮಾನ ಕಳೆದುಕೊಂಡು ಪ್ರಾಣಬಿಡಬೇಕಾಗುವುದು."

ಕಲ್ಯಾಣಮಲ್ಲನು ಹೀಗೆ ಪರಿಪರಿಯಾಗಿ ಚಿಂತಿಸುತ್ತಾ ಆವ ಮಾತನ್ನೂ ಆಡದೆ ವಾಗೀಶನನ್ನೂ ತಾಂತಿಯಾ ಭಿಲ್ಲನನ್ನೂ ಜತೆಯಲ್ಲಿ ಕರೆದುಕೊಂಡು ತನ್ನ ಶಿವಪ್ರಾಸಾದಕ್ಕೆ ಬಂದು ಸೇರಿದನು.

ತಾಂತಿಯಾ ಭಿಲ್ಲನನ್ನು ಬಿಟ್ಟರೆ ಮತ್ತಾವ ಮನುಷ್ಯನು ತಾನೇ ಬಲವತ್ತರರಾದ ಇಬ್ಬರು ಮಹಾ ಶತ್ರುಗಳೊಡನೆ ರಾತ್ರಿಯ ಕಾಲದಲ್ಲಿ ಏಕಾಕಿಯಾಗಿ ಶತ್ರುಗೃಹವನ್ನು ಪ್ರವೇಶಮಾಡಲು ಸಾಹಸಿಯಾದಾನು? ತಾಂತಿಯನು ಅಸಮ ಸಾಹಸಿಯಾದುದರಿಂದಲೂ, ಈ ಕೀಟಗಳು ಆತನ ಲೆಕ್ಕದಲ್ಲಿಯೇ ಇಲ್ಲದುದರಿಂದಲೂ, ಆತನು ತನ್ನ ನೈಜವಾದ ಧೈರ್ಯವನ್ನು ಅವಲಂಬಿಸಿಕೊಂಡು ಕಲ್ಯಾಣಮಲ್ಲನ ಆತಿಥ್ಯವನ್ನು ಸ್ವೀಕರಿಸುವುದಕ್ಕಾಗಿ ಹೊರಟುಬಂದನು.

---

## ಎರಡನೆಯ ವಿಲಾಸ

### ವಿಚಿತ್ರ ವಿಧಿ ವಿಲಾಸ

ಆವ ರಾತ್ರಿಯಲ್ಲಿ ಅರಿಂದಮನು ನಿತ್ಯಮುಂಗಳೆಯನ್ನು ತನ್ನ ಪರಮಾಪ್ತನ ಮನೆಗೆ ಕಳುಹಿದನೋ, ಅದರ ಮರುದಿನ ದೇವೇಂದ್ರನು ಒಂದು ಕಾಗದವನ್ನು ತಂದು ಅರಿಂದಮನ ಕೈಗೆ ಕೊಟ್ಟನು.

ಅರಿಂದಮನು ಆ ಕಾಗದವನ್ನು ಓದಿಕೊಂಡು ಅದಕ್ಕೆ ಪ್ರತ್ಯುತ್ತರವಾಗಿ ಕಾಲಹರಣಕ್ಕೆಡೆಗುಡದೆ ನಾನು ತಮ್ಮ ದರ್ಶನವನ್ನು ತೆಗೆದುಕೊಳ್ಳುವೆನು, ಎಂದು ಪತ್ರವನ್ನು ಬರೆದು ಅಂಚೆಗೆ ಹಾಕುವಂತೆ ದೇವೇಂದ್ರನ ಕೈಗೆ ಕೊಟ್ಟು ಕಳುಹಿದನು. ದೇವೇಂದ್ರನು ಆ ಪತ್ರವನ್ನು ಅಂಚೆಯ ಪೆಟ್ಟಿಗೆಗೆ ಹಾಕುವಾಗ ಅದರ ನಾಮಧಾಮಗಳನ್ನು ಓದಿ ನೋಡಿದನು. ಅದರಲ್ಲಿ ರಾಜಘಟ್ಟದ ಶ್ರೀಮದ್ರಾಜಮಾರ್ತಂಡ ಮಹಾಶಯರಿಗೆಂದು ಬರೆದಿದ್ದಿತು. ದೇವೇಂದ್ರನಿಗೆ ಇದರ ತತ್ತ್ವವಾವುದೂ ಗೊತ್ತಾಗದಿರಲು, ಆತನು ತತ್ತ್ವವನ್ನು ಅರಿವುದಕ್ಕಾಗಿ ಅರಿಂದಮನ ಬಳಿಗೈತಂದು ಕಾಗದದ ವಿಷಯವೇನೆಂದನು. ಅರಿಂದಮನು ಓದಿ ನೋಡಿದರೆ ಎಲ್ಲವೂ ಗೊತ್ತಾಗುವುದೆಂದು ಹೇಳಿ ಪತ್ರವನ್ನು ಆತನ ಕೈಗೆ ಕೊಟ್ಟನು. ದೇವೇಂದ್ರ ವಿಜಯನು ಅದನ್ನು ಓದಿದನು:—

"ಹಿಂದಣ ರಾತ್ರಿಯಲ್ಲಿ ಭಯಂಕರವಾದ ದುರ್ಘಟನೆಯೊಂದು ನಡೆದಿರುವುದು. ಆ ಘಟನೆಯು ರಹಸ್ಯ ಪೂರ್ಣವಾಗಿರುವುದು. ಇನ್ನೂ ರಹಸ್ಯವು ಭೇದಿಸಲ್ಪಟ್ಟಿಲ್ಲ. ಸಾಧ್ಯವಾದಷ್ಟು ಬೇಗನೆ ತಮ್ಮ ಆಗಮನವನ್ನು ನಾನು ನಿರೀಕ್ಷಿಸಿಕೊಂಡಿರುವೆನು. ತಾವು ಉದಾಸೀನ ಭಾವದಿಂದಿರುವುದಕ್ಕೆ ಇದು ಸಮಯವಲ್ಲವೆಂದು ತೋರುತ್ತಿರುವುದು. ಈಶ್ವರೀ ದುರ್ಗದ ಹೊಗೆ ಬಂಡಿಯು ನಿಲ್ದಾಣದಲ್ಲಿ ತಮ್ಮನ್ನು ನಾನು ನಿರೀಕ್ಷಿಸುತ್ತಿರುವೆನು, ರಾಜಮಾರ್ತಂಡ."

ದೇವೇಂದ್ರನು ಕಾಗದವನ್ನೋದಿ—ದೇವ! ದುರ್ಘಟನೆಯು ಎಂಥದೆಂಬುದು ಗೊತ್ತಾಗದಿದ್ದರೂ ಗುರುತರವೆಂಬುದು ಮಟ್ಟಿಗೆ ಕಾಗದದಿಂದಲೇ ಗೊತ್ತಾಗುತ್ತಿರುವುದು, ಎಂದು ನುಡಿದನು.

ಅರಿಂದಮ—ಮಗು! ನನಗೂ ಹಾಗೆಯೇ ತೋರುತ್ತಿರುವುದು. ರಾಜ ಮಾರ್ತಂಡ ಮಹಾಶಯನು ನನಗೆ ಪೂರ್ವದಿಂದಲೂ ಪರಿಚಿತನು. ಆತನ ಸ್ವಭಾವವನ್ನು ನಾನು ಚೆನ್ನಾಗಿಯೂ ಬಲ್ಲೆನು. ಆತನು ನಿಷ್ಕಾರಣವಾಗಿ ಇತರ ಕಾಲವನ್ನು ವ್ಯರ್ಥಪಡಿಸತಕ್ಕವನಲ್ಲ. ಆವುದೋ ತೊಂದರೆ ಸಂಭವಿಸಿರುವುದರಿಂದಲೇ ಆತನು ಇಷ್ಟು ತ್ವರೆಯನ್ನು ಕಾಗದದಲ್ಲಿ ತೋರ್ಪಡಿಸಿರುವನು. ನನ್ನ ಚೀಲದಲ್ಲಿ ಪ್ರಯಾಣ ಸಾಮಗ್ರಿಯನ್ನು ಸಜ್ಜುಗೊಳಿಸು. ಈಶ್ವರೀ ದುರ್ಗಕ್ಕೆ ತೆರಳತಕ್ಕ ಮೊದಲನೆಯ ಹೊಗೆ ಬಂಡಿಯಲ್ಲಿಯೇ ಅಲ್ಲಿಗೆ ಹೊರಡಬೇಕಾಗುವುದು. ನೀನೂ ನನ್ನ ಜತೆಯಲ್ಲಿಯೇ ಬರಬೇಕಾಗಿರುವುದರಿಂದ, ಆತನು ಬರೆದ ಪತ್ರವನ್ನೂ, ಎರಡು ಪಿಸ್ತೂಲುಗಳನ್ನೂ ತೆಗೆದುಕೊಂಡು ಸಿದ್ಧನಾಗು.

ದೇವೇಂದ್ರನಿಗೆ ಅರಿಂದಮನೊಡನೆ ಪಯಣ ಬಳೆಯಿಸಬೇಕೆಂದರೆ ಬಲು ಇಷ್ಟ. ಆತನು ಹಬ್ಬದ ಊಟವನ್ನಾದರೂ ತ್ಯಾಗಮಾಡಬಲ್ಲನು, ಅರಿಂದಮನೊಡನೆ ಹೊರಡುವುದನ್ನು ಮಟ್ಟಿಗೆ ಎಂದಿಗೂ ತ್ಯಾಗಮಾಡಲಾರದವನಾಗಿದ್ದನು. ಅರಿಂದಮನ ಬಾಯಿಂದ ಹೊರಟ ಪ್ರಯಾಣದ ಸುದ್ದಿಯನ್ನು ಕೇಳಿದೊಡನೆಯೇ ದಡಬುಡನೆ ಎದ್ದು ಪ್ರಯಾಣಸಾಮಗ್ರಿಯನ್ನು ಸಿದ್ಧಪಡಿಸಿಕೊಂಡು ಅರಿಂದಮನ ಇದಿರಿನಲ್ಲಿ ಬಂದು ನಿಂತನು.

ಬಾಡಿಗೆಯ ಗಾಡಿಯನ್ನು ಕರೆದುಕೊಂಡು ಬಾರೆಂದು ಹೇಳಿ ಪ್ರಯಾಣೋಚಿತವಾದ ವೇಷವನ್ನು ಹಾಕಿಕೊಂಡು ಅರಿಂದಮನು ಸಿದ್ಧನಾಗುವುದರೊಳಗಾಗಿ ಗಾಡಿಯು ಬಾಗಿಲಲ್ಲಿ ಬಂದು ನಿಂತಿದ್ದಿತು. ಅರಿಂದಮನು ದೇವೇಂದ್ರನನ್ನೂ ವೀರ ವಿಕ್ರಮನೆಂಬ ನಾಯಿಯನ್ನೂ ಜತೆಯಲ್ಲಿ ಕರೆದುಕೊಂಡು ಗಾಡಿ ಹತ್ತಿ ಹೊಗೆಬಂಡಿಯ ನಿಲ್ದಾಣಕ್ಕೆ ಬಂದನು. ಬಂಡಿಯು ಹೊರಡುವುದಕ್ಕೆ

ಸಿದ್ಧವಾಗಿದ್ದಿತು. ಅರಿಂದಮನು ಟಿಕೆಟನ್ನು ಕೊಂಡು ಕೊಂಡು ಮೊದಲನೆಯ ತರಗತಿಯಲ್ಲಿ ಕುಳಿತನು. ಒಂದು ಗಂಟೆಯೊಳಗಾಗಿ ಹೊಗೆ ಬಂಡಿಯು ಈಶ್ವರೀ ದುರ್ಗದ ನಿಲ್ದಾಣಕ್ಕೆ ಬಂದು ನಿಂತಿತು. ಅರಿಂದಮನು ತನ್ನ ಪರಿವಾರ ದೊಡನೆ ಬಂಡಿಯಿಂದಿಳಿದನು. ಕೂಡಲೆಯೇ ದೀರ್ಘದೇಹನಾಗಿಯೂ, ಬಲಿಷ್ಠ ನಾಗಿಯೂ, ಸೌಮ್ಯಮೂರ್ತಿಯಾಗಿಯೂ, ಪ್ರೌಢನಾಗಿಯೂ, ದೊಡ್ಡ ಮನುಷ್ಯ ನಾಗಿಯೂ ಇದ್ದ ರಾಜಮಾರ್ತಂಡನು ಅರಿಂದಮನನ್ನು ಸನ್ಮಾನದೊಡನೆ ಇದಿರು ಗೊಂಡು ನಗೆಮೊಗದಿಂದ ಕೂಡಿದವನಾಗಿ—ಮಹಾಶಯ! ತಾವು ತಮ್ಮ ಕೆಲಸ ಗಳೆಲ್ಲವನ್ನೂ ಒತ್ತಟ್ಟಿಗಿಟ್ಟು ಇಷ್ಟು ಬೇಗನೆ ಇಲ್ಲಿಗೆ ಬರುವುದಾಗಿ ನಾನು ಎಣಿಸಿರಲಿಲ್ಲ. ತಾವು ನನ್ನ ಪ್ರಾರ್ಥನೆಗೆ ಗೌರವವನ್ನು ಕೊಟ್ಟುದಕ್ಕಾಗಿ ನಾನು ತಮಗೆ ಅನೇಕ ಧನ್ಯವಾದವನ್ನು ಅರ್ಪಿಸುವೆನು. ತಮ್ಮನ್ನೇ ಅತ್ಯಾದರದಿಂದ ನಿರೀಕ್ಷಿಸುತ್ತಿದ್ದ ನನ್ನ ವ್ಯಸನವು ಪ್ರಾಯಿಕವಾಗಿ ದೂರ ಸರಿದುದು, ಎಂದು ನುಡಿದನು.

ಅರಿಂದಮ—ವಿಷಯವೇನು, ಮಹಾಶಯ! ತಮ್ಮ ಕಾಗದದಿಂದ ನನಗೇನೂ ಗೊತ್ತಾಗಲಿಲ್ಲ.

ರಾಜಮಾರ್ತಂಡ—ವಿಷಯವಾದರೋ ಗುರುತರವೇ ಆಗಿರುವುದು, ಅರಿಂದಮ ಮಹಾಶಯ! ನನ್ನ ಪರಮ ಬಂಧುವೂ ಇಷ್ಟಮಿತ್ರನೂ ಆದ ಇಂದಿರಾಕಾಂತನೆಂಬುವನನ್ನು ನಿನ್ನೆಯ ರಾತ್ರಿಯಲ್ಲಿ ಭೋಜನಕ್ಕೆ ಕರೆದಿದ್ದೆನು. ಆತನು ವಿದ್ಯುದ್ಯಾನದಲ್ಲಿ ಹೊರಟು ಬರುತ್ತಿರುವಾಗ, ಮಧ್ಯಮಾರ್ಗದಲ್ಲಿ ಆತ ನಿದ್ದ ಗಾಡಿಯು ಕಮರಿಯಲ್ಲಿ ಮಗುಚಿಕೊಂಡು ಆತನಿಗೆ ತುಂಬಾ ಗಾಯವಾ ಗಿರುವುದು. ಆತನು ಬದುಕುವುದು ಅಸಾಧ್ಯವೆಂದೇ ತೋರುವುದು. ಈ ದುರ್ಘಟ ನೆಯು ದೈವಿಕವೆಂದು ನನಗೆ ತೋರುವುದಿಲ್ಲ. ಆರೋ ಗುಪ್ತ ಶತ್ರುಗಳು ಆತ ನನ್ನು ಸಂಹರಿಸುವ ಯತ್ನಮಾಡಿರಬೇಕೆಂದು ತೋರುವುದು. ಇಂದಿರಾಕಾಂತನು ಹಗೆಗಳನ್ನು ಹೆಚ್ಚಿಸಿಕೊಳ್ಳತಕ್ಕವರ ಗುಂಪಿಗೆ ಸೇರಿದವನಲ್ಲ. ಇಂದಿರಾಕಾಂತನ ಸ್ವಭಾವವನ್ನು ತಾವೂ ಅರಿತವರಾಗಿಯೇ ಇರುವಿರಿ. ಅಂತಹ ಸಾಧುಸ್ವಭಾವ ದವರು ಲೋಕದಲ್ಲಿ ಅತಿ ವಿರಳರೆಂದೇ ಹೇಳಬೇಕು. ಆತನ ಸ್ವಭಾವದಲ್ಲಿ ಒಂದು ದೋಷವುಂಟು. ಆತನು ಕಂಡಕಂಡವರನ್ನು ಮಾತನಾಡಿಸುವುದೂ, ಮಾತ ನಾಡಿಸಿದವರೊಡನೆ ಪೂರ್ವಪರಿಚಿತನಂತೆ ವರ್ತಿಸುವುದೂ, ಇವೆರಡು ದೋಷಗಳು ಅವನಲ್ಲಿ ಕಂಡುಬರುವುವು. ಈ ವಿಷಯದಲ್ಲಿ ಮಟ್ಟಿಗೆ ಅವನಿಗೆ ಯುಕ್ತಾ ಯುಕ್ತ ಪರಿಶೀಲನೆಯೆಂಬುದೇ ಇರುವುದಿಲ್ಲ.

ಅರಿಂದಮ—ಅಹುದು, ಮಹಾಶಯ! ನಾನು ಅವನನ್ನು ಚೆನ್ನಾಗಿಯೂ ಬಲ್ಲೆನು. ವಿಷಯವಿಚಾರವನ್ನು ತಿಳಿಸೋಣವಾಗಲಿ.

ರಾಜ—ಈ ಬೆಳಗ್ಗೆ ನಾನು ಆತನು ಬಿದ್ದ ಸ್ಥಳಕ್ಕೆ ಹೋಗಿದ್ದೆನು. ಆತನು ಆವ ವಿದ್ಯುದ್ಯಾನದಲ್ಲಿ ಬಂದನೋ ಅದು ಚೂರುಚೂರಾಗಿ ಹೋಗಿರುವುದು. ಆತನು ಆತ್ಮ ಸಂರಕ್ಷಣೆಗಾಗಿ ವಿದ್ಯುದ್ಯಾನದಿಂದ ಹಾರಿ ಹೋಗದೇ ಇದ್ದಿದ್ದರೆ, ಆತನಿಗೂ ಗಾಡಿಯ ದಶೆಯೇ ಉಂಟಾಗಿಹೋಗುತ್ತಿದ್ದಿತು. ಆತನು ಹಾರಿ ಬಿದ್ದುದರಿಂದ ಶರೀರವೆಲ್ಲಾ ಗಾಯದಿಂದ ತುಂಬಿಹೋಗಿರುವುದು. ಇಂದಿರಾಕಾಂತನು ಬದುಕಿದರೂ ಬದುಕಬಹುದೆಂದು ವೈದ್ಯರು ಅಭಿಪ್ರಾಯಪಟ್ಟು ಆತನಿಗೆ ಯೋಗ್ಯವಾದ ರೀತಿಯಲ್ಲಿ ಚಿಕಿತ್ಸೆಯನ್ನು ಮಾಡುತ್ತಿರುವರು.

ಅರಿಂದಮ—ಇದು ಗುಪ್ತಶತ್ರುವಿನ ಕೆಲಸವೆಂದು ತಾವು ಹೇಳೋಣವಾಯಿತಷ್ಟೆ! ಅದಕ್ಕೆ ಕಾರಣವಾದರೂ ಏನಿರಬಹುದು? ರಾತ್ರಿಯ ಕಾಲಗಳಲ್ಲಿ ಇಂತಹ ಅನರ್ಥಗಳು ನಡೆಯುವುದು ಅಸಂಭವವೇನೂ ಅಲ್ಲ.

ರಾಜ—ಇಂದಿರಾಕಾಂತನನ್ನು ಕಮರಿಯಿಂದ ಹೊರಗೆ ಸಾಗಿಸುವ ಸಮಯದಲ್ಲಿ ಆತನಿಗೆ ಮೈಮೇಲೆ ಪ್ರಜ್ಞೆಯಿರಲಿಲ್ಲ. ಬಲು ಹೊತ್ತು ಶೈತ್ಯೋಪಚಾರ ನಡೆದ ಬಳಿಕ ಆತನಿಗೆ ಜ್ಞಾನೋದಯವುಂಟಾಗಿ ಆತನು ಕ್ಷೀಣ ಸ್ವರದಿಂದ ಮಾತನಾಡಿದುದೇನೆಂದರೆ :—

"ದಾರಿಗೆ ಅಡ್ಡವಾಗಿ ತಂತಿಗಳು ಬಿಗಿಯಲ್ಪಟ್ಟಿದ್ದುವು. ವೇಗವಾಗಿ ಬರುತ್ತಿದ್ದ ವಿದ್ಯುದ್ಯಾನವು ಅದಕ್ಕೆ ತಗುಲಿ ಹಿಂದಕ್ಕೆ ಸರಿದು ಕಮರಿಯಲ್ಲಿ ಮಗುಚಿಕೊಂಡಿತು. ಆ ಸಮಯದಲ್ಲಿ ನಾನು ಧೈರ್ಯಮಾಡಿ ಗಾಡಿಯಿಂದ ಹೊರಗೆ ಹಾರಿಹೋಗದೇ ಇದ್ದಿದ್ದರೆ, ನನ್ನ ಶರೀರದ ಒಂದು ಮೂಳೆಯೂ ಸಿಕ್ಕುತ್ತಿರಲಿಲ್ಲ. ದಾರಿಗೆ ಅಡ್ಡಲಾಗಿ ತಂತಿಗಳನ್ನು ಬಿಗಿಯಲು ಕಾರಣವೇನು? ಆರೋ ಗುಪ್ತ ಶತ್ರುಗಳು ದ್ವೇಷಿಯನ್ನು ಸಂಹರಿಸುವುದಕ್ಕಾಗಿ ಈ ಕುಮಾರ್ಗವನ್ನು ಅವಲಂಬಿಸಿರಬಹುದು."

ಅರಿಂದಮ—ಮಹಾಶಯ! ತಮ್ಮ ವಿಷಯ ನಿರೂಪಣದಿಂದ ಕಾರ್ಯಸಾಧನೋಪಾಯವು ನನಗೆ ಹೊಳೆಯಲಿಲ್ಲ. ಮೊದಲು ನಿಮ್ಮ ಮನೆಗೆ ಹೋಗಿ ಬಳಿಕ ಮುಂದಣ ಕರ್ತವ್ಯವೇನೆಂಬುದನ್ನು ಸಿದ್ಧಾಂತಮಾಡಿಕೊಳ್ಳುವೆನು. ಮುಂದಕ್ಕೆ ತೆರಳುವ, ಬಿಜಯಮಾಡಿಸೋಣವಾಗಲಿ.

ಎಲ್ಲರೂ ವಿದ್ಯುದ್ಯಾನದಲ್ಲಿ ಕುಳಿತು ರಾಜಘಟ್ಟಕ್ಕೆ ಅಭಿಮುಖವಾಗಿ ತೆರಳಿದರು. ಯಾನವು ಅರಣ್ಯದಿಂದ ಸಾರಾಗಿ ಸಣ್ಣ ಸಣ್ಣ ಹಳ್ಳಿಗಳ ಮೂಲಕವಾಗಿ

ವೇಗದಿಂದ ಮುಂದುವರಿಯಲಾರಂಭಿಸಿತು. ಕಥಾ ಪ್ರಸಂಗದಲ್ಲಿ ಅರಿಂದಮನು ರಾಜಮಾರ್ತಂಡನಿಂದ ಕೇಳಿ ತಿಳಿದುದೇನೆಂದರೆ:—"ಈಶ್ವರೀ ದುರ್ಗಕ್ಕೆ ಕಲ್ಯಾಣಮಲ್ಲನೆಂಬುವನು ನೂತನವಾಗಿ ಏರ್ಪಡಿಸಲ್ಪಟ್ಟ ಉತ್ತರಾಧಿಕಾರಿಯು. ಕಲ್ಯಾಣಮಲ್ಲನು ದುಶ್ಶೀಲನೂ ವ್ಯಸನಾಸಕ್ತನೂ ಚಂಚಲಮತಿಯೂ ಆಗಿರುವ ವಿವೇಕವಿಲ್ಲದ ಯುವಕನಾಗಿರುವನು. ಈ ದುರಾತ್ಮನು ಈಶ್ವರೀ ದುರ್ಗಕ್ಕೆ ಸ್ವತ್ವಾಧಿಕಾರಿಯಾದುದೇ ಅದೊಂದು ವಿಚಿತ್ರದ ಸಂಗತಿಯಾಗಿರುವುದು. ಈಶ್ವರೀ ದುರ್ಗಕ್ಕೆ ಸೇರಿದ ಭೂಮಿಯಲ್ಲಿಯೇ ಈ ದುರ್ಘಟನೆಯು ನಡೆದಿರುವುದು."

ಕ್ರಮಕ್ರಮವಾಗಿ ವಿದ್ಯುದ್ಯಾನವು ಕೃತ್ಯನಡೆದ ಸ್ಥಲದಲ್ಲಿ ಬಂದು ನಿಂತಿತು. ಅರಿಂದಮನು ಕೆಳಗಿಳಿದು ನೋಡಿದನು. ರಾತ್ರಿಯಲ್ಲಿ ಮಗುಚಿಕೊಂಡ ಗಾಡಿಯು ಇನ್ನೂ ಅಲ್ಲಿಯೇ ಬಿದ್ದಿದ್ದಿತು. ಗ್ರಾಮಾಧ್ಯಕ್ಷನು ಅಲ್ಲಿ ನಿಂತುಕೊಂಡು ಕೆಲವು ಜನ ಸೇವಕರಿಂದ ಆ ಬಿದ್ದಿದ್ದ ಗಾಡಿಯನ್ನು ಮೇಲಕ್ಕೆ ಎತ್ತಿಸುವ ಪ್ರಯತ್ನದಲ್ಲಿದ್ದನು. ಮತ್ತೆ ಕೆಲವರು ಇದನ್ನು ನೋಡುತ್ತಾ ಅಲ್ಲಲ್ಲಿ ನಿಂತುಕೊಂಡಿದ್ದರು.

ಅರಿಂದಮನು ಗಾಡಿಯಿಂದಿಳಿದು ಬಂದು ಕಮರಿಯಿದ್ದ ಸ್ಥಲವನ್ನೂ, ಅದಿರುವ ರೀತಿಯನ್ನೂ, ಬೆಟ್ಟದ ಸ್ಥಿತಿಯನ್ನೂ, ರಾಜಮಾರ್ಗವು ಏರ್ಪಡಿಸಲ್ಪಟ್ಟಿರುವ ಪರಿಪಾಟಿಯನ್ನೂ ಚೆನ್ನಾಗಿ ಮನದಟ್ಟು ಮಾಡಿಕೊಂಡು ಬಳಿಕ ತಂತಿಗಳಿಂದ ಬಿಗಿಯಲ್ಪಟ್ಟಿದ್ದ ಮರವನ್ನೂ ಗುಂಡನ್ನೂ ಚೆನ್ನಾಗಿ ಪರೀಕ್ಷಿಸಿ ನೋಡಿ ರಾಜಮಾರ್ತಂಡನನ್ನು ಕುರಿತು—ಮಹಾಶಯ! ತಮ್ಮ ಅನುಮಾನವು ಸುಳ್ಳಲ್ಲ. ಆರೋ ದುರಾತ್ಮರು ಶತ್ರುವನ್ನು ಸಂಹರಿಸುವುದಕ್ಕಾಗಿ ಬೀಸಿದ್ದ ಬಲೆಯಲ್ಲಿ ನಿಮ್ಮ ಇಂದಿರಾಕಾಂತ ಮಹಾಶಯನು ಸಿಕ್ಕಿ ನರಳಬೇಕಾಯಿತು. ತಂತಿಗಳನ್ನು ಬಿಗಿದು ದಾರಿಯನ್ನು ಅಡ್ಡಿಮಾಡಿದುದಕ್ಕೆ ಸಾಕಾದಷ್ಟು ಕಾರಣಗಳಿವೆ. ಈಗ ಅವುಗಳಿಂದ ಆವ ಪ್ರಯೋಜನವೂ ಇಲ್ಲ. ನಾವು ಮೊದಲು ಮನೆಗೆ ಹೋಗಿ ಮಾಡಬೇಕಾದುದನ್ನು ಚಿಂತಿಸಬೇಕಾಗಿರುವುದು. ಇನ್ನು ಕೊಂಚ ಹೊತ್ತು ತಡಮಾಡುವುದು ಕೂಡ ನನಗೆ ಇಷ್ಟವಿಲ್ಲದಿರುವುದು; ಎಂದನು.

ವಿದ್ಯುದ್ಯಾನವು ಮೊದಲಿನಂತೆಯೇ ವೇಗವಾಗಿ ಹೊರಟು ಶಿವ ಪ್ರಾಸಾದವನ್ನು ದಾಟಿತು. ಅರಿಂದಮನು ತೀಕ್ಷ್ಣದೃಷ್ಟಿಯಿಂದ ಶಿವಪ್ರಾಸಾದದ ಅಂದಚೆಂದವನ್ನು ನೋಡಿ ಅದರ ಲಕ್ಷಣಗಳನ್ನು ಹೃದಯದಲ್ಲಿ ಗುರುತು ಮಾಡಿಕೊಂಡನು. ಬಳಿಕ ರಾಜಮಾರ್ತಂಡನನ್ನು ಕುರಿತು—ಮಹಾಶಯ! ಈ ಪುರಾತನವಾದ ಅರಮನೆಯಾರದು ? ಎಂದನು.

ರಾಜ—ಆ ಪಿಶಾಚ ಸ್ವರೂಪನಾದ ಕಲ್ಯಾಣಮಲ್ಲನೇ ಈ ಶಿವಪ್ರಾಸಾದ ವೆಂಬ ಸುಂದರವಾದ ಅರಮನೆಗೆ ಒಡೆಯನು. ಕಲ್ಯಾಣಮಲ್ಲನು ಇದರ ಸ್ವತ್ವಾಧಿಕಾರಿಯಾದ ಕೂಡಲೆ ಮನೆಹಾಳರನ್ನು ಹತ್ತಿರ ಸೇರಿಸಿಕೊಂಡು ಹಣ ವನ್ನು ನೀರಿನಂತೆ ವೆಚ್ಚಮಾಡುತ್ತಿರುವನು.

ಇದರ ಪಕ್ಕದ ಜಹಗೀರಿಯೇ ನನ್ನದು. ಇನ್ನು ಒಂದು ಮೈಲಿಯಷ್ಟು ದೂರ ಪ್ರಯಾಣ ಬೆಳೆಯಿಸಿದರೆ ನಮ್ಮೂರು ಸಿಕ್ಕುವುದು. ನನ್ನ ಸೌಧವು ಊರಿನ ಮುಂಗಡೆಯಲ್ಲಿಯೇ ಇರುವುದರಿಂದ, ಇಲ್ಲಿಂದಲೇ ನಾವು ಅದನ್ನು ಚೆನ್ನಾಗಿಯೂ ನೋಡಬಹುದು.

ಹೀಗೆಯೇ ಮಾತನಾಡುತ್ತಾ ಅರಿಂದಮನು ಅರ್ಧಮೈಲಿಯಷ್ಟು ದಾರಿ ಸಾಗುವುದರೊಳಗಾಗಿ ಸಾರಥಿಯನ್ನು ಕುರಿತು—ಇಲ್ಲಿಯೇ ಬಂಡಿಯನ್ನು ನಿಲ್ಲಿಸು, ಎಂದನು.

ಬಂಡಿಯು ನಿಂತಿತು. ರಾಜಮಾರ್ತಂಡನು ಅಚ್ಚರಿಗೊಂಡವನಾಗಿ ಇದೇ ನಿರಬಹುದೆಂದು ಸುತ್ತಲೂ ನೋಡಿದನು. ಅರಿಂದಮನು ಪರ್ವತಮಾಲೆಯಲ್ಲಿನ ಪ್ರಕೃತಿ ಸೌಂದರ್ಯವನ್ನು ನೋಡುತ್ತಾ ನಿಂತುಬಿಟ್ಟನು. ಈ ದೃಶ್ಯವನ್ನು ಆತನು ಹಿಂದೆ ನೋಡದಿದ್ದರೂ, ಎಂದೋ ನೋಡಿದ್ದಂತೆ ಬೋಧವಾಯಿತು. ಇದರ ಮರ್ಮವೇನಿರಬಹುದೆಂದು ಕೊಂಚ ಹೊತ್ತು ಹಾಗೆಯೇ ನಿಂತು ನೋಡುತ್ತಿರು ವಷ್ಟರಲ್ಲಿಯೇ ಆತನ ಮನಸ್ಸಿಗೆ ಏನೋ ಹೊಳೆದು ತನ್ನ ಕಿಸೆಯಿಂದ ಒಂದು ಭಾವ ಚಿತ್ರವನ್ನು ಹೊರಗೆ ತೆಗೆದು ನೋಡಿದನು. ಇದೇ ಹಿಂದೆ ನಿತ್ಯಮಂಗಳೆಯು ಕೊಟ್ಟಿದ್ದ ಭಾವಚಿತ್ರವು. ಅರಿಂದಮನು ಇವೆರಡನ್ನೂ ಹೋಲಿಸಿ ನೋಡಲಾಗಿ, ಈ ಪ್ರದೇಶದ ಪ್ರಾಕೃತಿಕ ರಚನಾವಿಶೇಷವೇ ಭಾವಚಿತ್ರದಲ್ಲಿಯೂ ಕಂಡು ಬಂದಿತು.

ಅರಿಂದಮನು ಇಷ್ಟನ್ನು ನಿರ್ಧರಮಾಡಿಕೊಂಡ ಬಳಿಕ ಆ ಭಾವಚಿತ್ರವನ್ನು ರಾಜಮಾರ್ತಂಡನ ಕೈಗೆ ಕೊಟ್ಟು, ಇದರಲ್ಲಿರತಕ್ಕವರಾರೆಂದು ಪ್ರಶ್ನೆಮಾಡಿದನು.

ರಾಜಮಾರ್ತಂಡನು ಆ ಚಿತ್ರವನ್ನು ನೋಡಿದ ಕೂಡಲೇ ಆಶ್ಚರ್ಯದಿಂದ ಇಂತೆಂದನು :—

ಮಹಾಶಯ! ತಮಗೆ ಈ ಚಿತ್ರವು ಸಿಕ್ಕಿದ ಬಗೆ ಹೇಗೆ? ಮೊದಲು ತಿಳಿಸೋಣವಾಗಲಿ. ಈ ಭಾವಚಿತ್ರವನ್ನು ನಾನೇ ತೆಗೆದುದು. ಇದು ನನ್ನ ಪರಮ ಮಿತ್ರನಾದ ಶ್ರೀಕುಮಾರನ ಭಾವಚಿತ್ರವು. ಆಹಾ! ಈಗ ಆತನು ಬದುಕಿದ್ದಿದ್ದರೆ,

ಈ ಈಶ್ವರೀದುರ್ಗದ ಒಹಗೀರಿಯು ಕಲ್ಯಾಣಮಲ್ಲನಂತಹ ಕೋತಿಯ ಕೈಗೆ ಸೇರುತ್ತಿತ್ತೇ! ಆತನೇ ಈ ವಿಪುಲವಾದ ಸಂಪತ್ತಿಗೆ ನ್ಯಾಯ ಸಮ್ಮತನಾದ ಉತ್ತರಾಧಿಕಾರಿಯು. ಆತನಂತಹ ಸತ್ಪುರುಷನು ದೊರೆವುದು ಅತಿ ದುರ್ಲಭವು. ಆ ಮಾತು ಹಾಗಿರಲಿ. ಇದು ತಮಗೆ ಸಿಕ್ಕಿದ ಬಗೆ ಹೇಗೆ, ಮಹಾಶಯ? ”

ಅರಿಂದಮ—(ಮನೋಭಾವವನ್ನು ಅಡಗಿಸಿಕೊಂಡು) ಮಹಾಶಯ! ಅದು ಬಲು ದೊಡ್ಡ ಕತೆ. ಅದನ್ನು ತಮಗೆ ಮತ್ತೊಂದು ಕಾಲದಲ್ಲಿ ಅರುಹುವೆನು.

ಅರಿಂದಮನು ಹೀಗೆ ಹೇಳಿ ಮಾತನ್ನು ಮುಗಿಸಿದ ಕೂಡಲೇ ವಿದ್ಯುದ್ಯಾನವು ರಾಜಮಾರ್ತಂಡನ ಸೌಧದ ಮುಂಗಡೆಯಲ್ಲಿ ಬಂದು ನಿಂತಿತು. ಗಾಡಿಯು ಬಂದ ಶಬ್ದವನ್ನು ಕೇಳಿ ವೈದ್ಯನೊಬ್ಬನು ಮನೆಯಿಂದ ಹೊರಗೆ ಬಂದು ರಾಜಮಾರ್ತಂಡನಿಗೆ ನಮಸ್ಕಾರಮಾಡಿದನು.

ರಾಜಮಾರ್ತಂಡನು ಗಾಡಿಯಿಂದಿಳಿದ ಕೂಡಲೆ, ಇಂದಿರಾಕಾಂತನಿಗೆ ಹೇಗಿದೆ? ಎಂದು ಕೇಳಿದನು.

ವೈದ್ಯ—ಆತನಿಗೆ ಇನ್ನು ಮೂರ್ಛೆಬರುವ ಸಂಭವವಿಲ್ಲ. ರೋಗಿಯು ಮೊದಲಿಗಿಂತಲೂ ಎಷ್ಟೋ ಮೇಲಾಗಿರುವನು.

ರಾಜ—ಆತನು ಜ್ಞಾನದಿಂದಿದ್ದಾಗ ಮತ್ತಾವ ಮಾತನ್ನಾದರೂ ಆಡಿದನೇ?

ವೈದ್ಯ—“ ದಾರಿಗೆ ಅಡ್ಡಲಾಗಿ ತಂತಿಗಳನ್ನು ಬಿಗಿದು ತನ್ನನ್ನು ಕೊಲ್ಲಲೆಣಿಸಿದವರಾರು? ಈ ಕೆಲಸವನ್ನು ಅವರು ಏತಕ್ಕಾಗಿ ಮಾಡಿದರು?” ಎಂಬ ಮಾತ ಹೊರತು ಆತನು ಮತ್ತಾವ ಮಾತನ್ನೂ ಆಡಲಿಲ್ಲ. ರೋಗವು ಗುಣಕ್ಕೆ ಬಂದಿರುವುದೆಂದು ಈಗಾಗಲೇ ಹೇಳುವುದಕ್ಕೆ ಸಾಧ್ಯವಿಲ್ಲವು.

ರಾಜ—ವೈದ್ಯಮಹಾಶಯ! ಆತನಾಡುವ ಮಾತು ಅಜ್ಞಾನದ ಪ್ರಲಾಪವಲ್ಲ. ಆತನ ಮಾತಿನಲ್ಲಿ ಸತ್ಯಾಂಶವಿರುವುದು. ಇದರ ಕಾರಣವನ್ನು ನಾವು ಬಲ್ಲೆವು. ಮಹಾಶಯ! ಇವರೇ ಪ್ರಸಿದ್ಧ ಪತ್ತೇದಾರರೆನಿಸಿರುವ ಶ್ರೀಮದರಿಂದಮ ಮಹಾಶಯರೆಂಬುವರು.

ವೈದ್ಯನು ಅರಿಂದಮನ ಹೆಸರನ್ನು ಅನೇಕ ವೇಳೆಗಳಲ್ಲಿ ಕೇಳಿದ್ದನು. ಈಗ ಆತನೊಡನೆ ಸಮಾಗಮವಾದುದಕ್ಕಾಗಿ ಬಲುವಾಗಿ ಸಂತೋಷಪಟ್ಟು ಅರಿಂದಮನಿಗೆ ಅಭಿವಾದನ ಮಾಡಿ—ಮಹಾಶಯ! ಈ ದುರ್ಘಟನೆಯ ತತ್ವಾನುಸಂಧಾನಕ್ಕಾಗಿ ಬಿಜಯಮಾಡಿಸೋಣವಾಗಿರಬಹುದೆಂದು ತೋರುತ್ತದೆ, ಎಂದು ನುಡಿದನು

ಅರಿಂದಮ—ಅಹುದು, ಮಹಾಶಯ! ಆ ಉದ್ದೇಶದಿಂದಲೇ ಇಲ್ಲಿಗೆ ಬಂದಿರುವೆನು. ನಾನು ತಮ್ಮಲ್ಲಿ ಎರಡು ಪ್ರಾರ್ಥನೆಗಳನ್ನು ಮಾಡಿಕೊಳ್ಳ ಬೇಕೆಂದಿರುವೆನು. ತಾವು ಅವನ್ನು ನಡಿಸಿಕೊಡಬೇಕು. ಒಂದನೆಯದು—ನಾನು ಇಲ್ಲಿಗೆ ಬಂದಿರುವ ಸುದ್ದಿಯನ್ನು ತಾವು ಆರಲ್ಲಿಯೂ ಮಾತನಾಡಕೂಡದು. ಎರಡನೆಯದು—ಇಂದಿರಾಕಾಂತನನ್ನು ನೋಡುವುದಕ್ಕೆ ತಾವು ನನಗೆ ಅನು ಕೂಲ್ಯವನ್ನು ಕಲ್ಪಿಸಿಕೊಡಬೇಕು.

ವೈದ್ಯ—ತಮ್ಮ ಮೊದಲನೆಯ ಪ್ರಾರ್ಥನೆಯನ್ನು ನೆರವೇರಿಸುವುದಕ್ಕೆ ನನ್ನ ಅಡ್ಡಿಯೇನೂ ಇರುವುದಿಲ್ಲ. ತಾವು ಇಲ್ಲಿಗೆ ಬಂದಿದ್ದ ವಿಷಯವನ್ನು ನಾನು ಆರ ಮುಂದೂ ಹೇಳುವುದಿಲ್ಲ. ಎರಡನೆಯ ಪ್ರಾರ್ಥನೆಯ ವಿಷಯದಲ್ಲಿ, ನಾನು ತಮಗೆ ಭರವಸೆಯನ್ನು ಹೇಗೆ ಕೊಡಲಿ? ಇಂದಿರಾಕಾಂತನು ಇನ್ನೂ ಸಂಕಟದಿಂದ ನರಳುತ್ತಿರುವನು. ಇನ್ನೂ ಆತನಿಗೆ ಜ್ಞಾನಾಜ್ಞಾನದಶೆಯೇ ಇರುವುದು. ಜ್ಞಾನವಿದ್ದಾಗ ಆತನು ಅವಾವುದನ್ನೋ ಜ್ಞಾಪಿಸಿಕೊಂಡು ಪ್ರಲಪನ ಮಾಡು ವನು. ಈ ಹೊತ್ತಿನ ಪ್ರಲಾಪದಿಂದ ನನಗೆ ತಿಳಿದುಬಂದುದೇನೆಂದರೆ—" ಇತರರ ವಿದ್ಯುದ್ಯಾನವು ನಷ್ಟವಾದುದಕ್ಕಾಗಿ, ನಾನು ಅದರ ಯಜಮಾನರಿಗೆ ಹೇಗೆ ಮುಖತೋರಿಸಲಿ? ಅವರ ನಷ್ಟವನ್ನು ನಾನು ಹೇಗೆ ಕಟ್ಟಿಕೊಡಲಿ? " ಎಂಬುದೇ ಆತನ ಪ್ರಲಾಪದ ಸಾರಾಂಶವಾಗಿರುವುದು.

ಅರಿಂದಮ—ಮಹಾಶಯ! ಆದುದರಿಂದಲೇ ನಾನು ಆತನನ್ನು ತಡಮಾಡದೆಯೇ ನೋಡಬೇಕಾಗಿರುವುದು. ಆತನು ಹೆಚ್ಚಾಗಿ ಮಾತನಾಡು ವುದಕ್ಕೆ ಆಸ್ಪದ ಕೊಡದ ಹಾಗೆ ಒಂದೆರಡು ಪ್ರಶ್ನೆಗಳನ್ನು ಕೇಳಿ ಉತ್ತರವನ್ನು ಬರಮಾಡಿಕೊಳ್ಳುವೆನು. ಆತನಿಗೆ ಚಿತ್ತೋದ್ವೇಗಕರವಾದ ಆವ ಪ್ರಶ್ನೆಯನ್ನೂ ನಾನು ಹಾಕುವುದಿಲ್ಲ.

ವೈದ್ಯ—(ಕೊಂಚಹೊತ್ತು ಚಿಂತಿಸಿ) ಒಳ್ಳೆಯದು; ನನ್ನೊಡನೆ ಬರೋಣವಾಗಲಿ. ತಾವು ಆತನನ್ನು ಮಾತನಾಡಿಸದಿರುವುದೇ ಕ್ಷೇಮವೆಂದು ನನ್ನ ಅಭಿಪ್ರಾಯವು.

ಅರಿಂದಮನು ವೈದ್ಯನೊಡನೆ ರೋಗಿಯಿದ್ದಲ್ಲಿ ಹೋದನು. ರೋಗಿಯು ಕೋಮಲವಾದ ಹಾಸುಗೆಯಲ್ಲಿ ಮಲಗಿಸಲ್ಪಟ್ಟಿರುವನು. ಆತನ ಅಂಗಾಂಗ ಗಳೆಲ್ಲವೂ ಪಟ್ಟಿಯಿಂದ ಕಟ್ಟಲ್ಪಟ್ಟಿರುವುದು. ರೋಗಿಯು ವೈದ್ಯನನ್ನು ನೋಡಿದ ಕೂಡಲೇ ಕ್ಷೀಣಸ್ವರದಿಂದ—ವಿದ್ಯುದ್ಯಾನವು ನಷ್ಟವಾದ ಸಂಗತಿ ಯನ್ನು ಈಶ್ವರೀ ದುರ್ಗದ ಯಜಮಾನನಿಗೆ ತಿಳಿಸೋಣವಾಯಿತೆ? ಎಂದನು.

ವೈದ್ಯ—(ರೋಗಿಯ ಹತ್ತಿರದಲ್ಲಿ ಕುಳಿತುಕೊಂಡು) ಮಹಾಶಯ! ಸಂಗ್ರಾಮಸಿಂಹನು ಈ ವಿಷಯವನ್ನು ತಿಳಿಯಪಡಿಸಿರುವನು. ಇದಕ್ಕಾಗಿ ನೀವು ಚಿಂತಿಸಿ ಕೊರಗಬೇಕಾದುದಿಲ್ಲ. ಈ ದೈವ ದುರ್ಘಟನೆಯಲ್ಲಿ ನಿಮ್ಮ ದೋಷ ವೇನಿರುವುದು? ಆತನು ಅಡಿಗಡಿಗೂ ನಿಮ್ಮ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುತ್ತಿರುವನು. ನಿಮಗೆ ಗುಣವಾಗುತ್ತಿರುವುದನ್ನು ಕೇಳಿ, ಆತನು ತನ್ನ ಸಂತೋಷವನ್ನು ತಮಗೆ ತಿಳಿಸಬೇಕೆಂದು ನನ್ನನ್ನು ಕೇಳಿಕೊಂಡಿರುವನು.

ಇಂದಿರಾಕಾಂತ—ಇದು ದೈವ ದುರ್ಘಟನೆಯೇ? ಅಲ್ಲ, ಅಲ್ಲ, ಎಂದಿಗೂ ಅಲ್ಲ. ಆರೋ ಶತ್ರುಗಳು ನನ್ನನ್ನು ಕೊಲ್ಲುವುದಕ್ಕಾಗಿ ಹೀಗೆ ಮಾಡಿರುವರು. ನಾನು ಇಲ್ಲಿಗೆ ಹೊರಟುಬರುವುದಕ್ಕೆ ಮೊದಲು, ಸಂಗ್ರಾಮಸಿಂಹ ಮಹಾಶಯನು "ರಾತ್ರಿಕಾಲಗಳಲ್ಲಿ ಪಯಣ ಬೆಳೆಯಿಸುವುದರಿಂದ ಅಪಾಯಗಳೇನಾದರೂ, ಸಂಭವಿಸಿದರೂ ಸಂಭವಿಸಬಹುದು. ಆದುದರಿಂದ ಎಚ್ಚರಿಕೆಯಿಂದಿರುವುದು ಒಳ್ಳೆಯದು," ಎಂದು ಮೊದಲೇ ತಿಳಿಸಿದ್ದನು. ಶತ್ರುಗಳ ಪ್ರಯತ್ನದಲ್ಲಿ ನಾನು ಬದುಕುವ ಹಾಗಿರಲಿಲ್ಲ; ಆದರೆ ನನ್ನಲ್ಲಿ ದೈವಾನುಗ್ರಹವಿದ್ದುದರಿಂದ, ನಾನು ಇನ್ನೂ ಬದುಕಿರುವೆನು. ಬುದ್ಧಿವಂತನಾದ ಪತ್ತೇದಾರನೊಬ್ಬನು ಈ ರಹಸ್ಯ ವನ್ನು ಭೇದಿಸುವುದಾದರೆ, ದುರಾತ್ಮರಿಗೆ ಸರಿಯಾದ ದಂಡನೆಯಾಗಿ ಪ್ರಜೆಗಳು ಬದುಕಿಕೊಂಡಾರು. ಈ ಅವಸ್ಥೆಯಲ್ಲಿ ನಾನು ಏನ ಮಾಡುವುದಕ್ಕೂ ಆಗಲಾರದು.

ಅರಿಂದಮ—(ರೋಗಿಯ ಬಳಿಗೈ ತಂದು) ಮಹಾಶಯ! ತಾವು ನನ್ನನ್ನು ಬುದ್ಧಿಮಂತನಾದ ಕೆಲಸಗಾರನೆಂದು ತಿಳಿದಿರುವಿರೋ ಇಲ್ಲವೋ ನನಗೆ ತಿಳಿಯದು. ನಾನಾದರೋ ತಮಗೆ ವಿಶೇಷವಾಗಿ ಅಪರಿಚಿತನಲ್ಲ. ನನ್ನನ್ನು ನೀವು ಒಂದೆರಡು ಸಲ ನೋಡಿರುವಿರಿ. ಅರಿಂದಮನೆಂದು ನನ್ನ ಹೆಸರು. ನಾನು ರಾಜನಗರದಲ್ಲಿ ಪತ್ತೇದಾರಿಯ ಕೆಲಸವನ್ನು ಮಾಡಿಕೊಂಡು ಜೀವಿಸುತ್ತಿರುವೆನು. ಶ್ರೀಮದ್ರಾಜ ಮಾರ್ತಂಡ ಮಹಾಶಯರು ನನಗೆ ಬರೆದ ಪತ್ರಕ್ಕನುಸಾರವಾಗಿ ನಾನು ಇಲ್ಲಿಗೆ ಬಂದಿರುವೆನು.

ಇಂದಿರಾಕಾಂತ—(ಅಸ್ಫುಟಸ್ವರದಿಂದ) ಒಳ್ಳೆಯ ಕೆಲಸವೇ ಆಯಿತು. ತಾವು ಈ ಕೆಲಸವನ್ನು ಕೈಕೊಂಡುದಕ್ಕಾಗಿ ನನಗೆ ತುಂಬಾ ಸಂತೋಷವು. ನನ್ನಿಂದ ಏನಾಗಬೇಕೆಂಬುದನ್ನು ತಿಳಿಸೋಣವಾಗಲಿ.

ಅರಿಂದಮ—ತಮ್ಮ ಸಾಹಾಯ್ಯದಿಂದಲೇ ಈ ಕೆಲಸವೆಲ್ಲವೂ ನಡೆಯ ಬೇಕಾಗಿರುವುದು. ಅನುಮಾನದಿಂದಲೇ ಕೆಲಸಕ್ಕೆ ಕುಳಿತರೆ, ಕಾಲಹರಣವಾಗು ವುದಲ್ಲದೆ, ಕೆಲಸವು ಫಲಿಸಿದರೂ ಫಲಿಸಬಹುದು, ಕೆಟ್ಟರೂ ಕೆಡಬಹುದು. ಈ

ವಿಷಯವು ಹಾಗಿರಲಿ. ಈಗ ನಾನು ತಮ್ಮ ವಿಶ್ರಾಂತಿಗೆ ಕುಂದನ್ನುಂಟುಮಾಡ ಲಾರೆನು. ಈ ದುರ್ಘಟನೆಯು ಹೇಗೆ ನಡೆಯಿತೆಂಬುದನ್ನು ಆದ್ಯೋಪಾಂತವಾಗಿ ಸಂಗ್ರಹದಿಂದ ತಿಳಿಸುವುದಕ್ಕೆ ಸಾಧ್ಯವಾಗುವುದಾದರೆ ತಿಳಿಸಬಹುದು. ವಿದ್ಯು ದ್ಯಾನವು ತಮಗೆ ದೊರೆತುದು ಹೇಗೆ?

ಇಂದಿರಾಕಾಂತ—ನಾನು ರಾಜನಗರಕ್ಕೆ ಬಂದಾಗ ರಾಜರಾಜೇಶ್ವರೀ ಮಂದಿರದಲ್ಲಿ ವಾಸಮಾಡಿಕೊಂಡಿದ್ದೆನು. ನಾನು ಅಲ್ಲಿ ವಾಸಮಾಡುವುದಕ್ಕೆ ಪ್ರಾರಂಭಿಸಿದ ಕೆಲವು ದಿನಗಳ ಮೇಲೆ ಮತ್ತೊಬ್ಬ ದೊಡ್ಡಮನುಷ್ಯನು ಅದೇ ಮಂದಿರದಲ್ಲಿ ವಾಸಮಾಡತೊಡಗಿದನು. ಸಂಗ್ರಾಮಸಿಂಹನೆಂದು ಆತನ ನಾಮಧೇ ಯವು. ಆತನು ಸರಲ ಸ್ವಭಾವದವನಾದ ಮೋಸವನ್ನರಿಯದ ದೊಡ್ಡ ಮನುಷ್ಯನು ಕೆಲವು ದಿನಗಳಿಂದೀಚೆಗೆ ಆತನಿಗೂ ನನಗೂ ತುಂಬಾ ಬಂಧುತ್ವವು ಬಳೆದಿರು ವುದು. ನಿನ್ನೆಯ ದಿನ ಈಶ್ವರೀದುರ್ಗಕ್ಕೆ ಹೋಗುವುದಕ್ಕೆ ಆಹ್ವಾನಬಂದಿರ ವುದೆಂದು ಆತನು ನನಗೆ ತಿಳಿಸಿದನು; ಹಾಗೂ ಈಶ್ವರೀದುರ್ಗದ ಯಜಮಾನನು ಬರುವುದಕ್ಕಾಗಿ ಆತನ ವಿದ್ಯುದ್ಯಾನವನ್ನು ಕಳುಹಿಸಿಕೊಡುವುದಾಗಿಯೂ ತಿಳಿಸಿ ದನು. ಅದೇ ಸಮಯದಲ್ಲಿ ರಾಜಘಟ್ಟಕ್ಕೆ ಬರಬೇಕೆಂದು ನನಗೂ ಆಹ್ವಾನ ಬಂದಿರುವುದಾಗಿ ತಿಳಿಸಿದೆನು. ಹಾಗಾದರೆ ಇಬ್ಬರೂ ಒಂದೇ ಬಂಡಿಯಲ್ಲಿಯೇ ಪ್ರಯಾಣಮಾಡೋಣವೆಂದು ಆತನು ತಿಳಿಸಲು, ನನಗೆ ತುಂಬಾ ಸಂತೋಷವಾಗಿ ಹೊರಡಲು ಸಿದ್ಧನಾದೆನು. ಯಾನವೂ ಬಂದು ಬಾಗಿಲಲ್ಲಿ ಸಿದ್ಧವಾಗಿ ನಿಂತಿದ್ದಿತು. ಹೊರಡುವ ಸಮಯಕ್ಕೆ ಸರಿಯಾಗಿ ಸಂಗ್ರಾಮಸಿಂಹನು ತನಗೆ ಅಪರಿಹಾರ್ಯವಾದ ಮತ್ತೊಂದು ಕೆಲಸವು ಒದಗಿ ಬಂದುದರಿಂದ ಹೊರಡು ವುದಕ್ಕಾಗಲಾರದೆಂದು ಹೇಳಿ ನನ್ನೊಬ್ಬನನ್ನೇ ಆ ಬಂಡಿಯಲ್ಲಿ ಕುಳ್ಳಿರಿಸಿ ಕಳು ಹಿದನು. ನಾನು ಹೊರಡುವಾಗ ವಿದ್ಯುದ್ಯಾನವು ಈಶ್ವರೀದುರ್ಗದ ಯಜಮಾನನ ದಾದುದರಿಂದ ಕೆಲಸ ತೀರಿದ ಮೇಲೆ ಅದನ್ನು ಈಶ್ವರೀದುರ್ಗಕ್ಕೆ ಕಳುಹಿಸಿ ಕೊಡುವುದಾದರೆ ತುಂಬಾ ಉಪಕಾರ ಮಾಡಿದಂತಾಗುವುದೆಂದು ನನಗೆ ತಿಳಿಯ ಪಡಿಸಿದನು. ದಾರಿಯು ದುರ್ಗಮವಾದುದರಿಂದ ಎಚ್ಚರಿಕೆಯಿಂದ ಪ್ರಯಾಣ ಮಾಡಬೇಕೆಂದು ಆತನು ನನಗೆ ತಿಳಿಸಿದ ಬಳಿಕ ನಾನು ಏಕಾಕಿಯಾಗಿ ಹೊರಟೆನು.

ಹೀಗೆ ಹೇಳಿ ಇಂದಿರಾಕಾಂತನು ಆಯಾಸದಿಂದ ಸೊಕ್ಕಿ ಸೊರಗಿ ಹೋದನು. ಕೊಂಚ ಹೊತ್ತು ವಿಶ್ರಾಂತಿಯನ್ನು ಪಡೆದುಕೊಂಡ ಬಳಿಕ ಮತ್ತೆ ಮಾತನಾಡಿದನು :—"ಸಂಗ್ರಾಮಸಿಂಹನು ನನ್ನ ಜತೆಯಲ್ಲಿ ಹೊರಡದಿದ್ದುದು ಭಗವಂತನ ಕೃಪಾಕಟಾಕ್ಷವೇ ಸರಿ. ಆತನೂ ಬಂದಿದ್ದರೆ, ಆತನಿಗೂ ಈ ದುರ್ದಶೆಯೇ ಉಂಟಾಗುತ್ತಿದ್ದಿತು. ಉಜ್ಜ್ವಲವಾದ ದೀಪದ ಬೆಳಕಿನಿಂದ

ದಾರಿಗೆ ಅಡ್ಡಲಾಗಿ ತಂತಿಗಳು ಬಿಗಿದಿದ್ದುದು ಗೊತ್ತಾಯಿತು. ಅವಕ್ಕೆ ಡಿಕ್ಕಿ ಹೊಡೆದು ಬಂಡಿಯು ಹಿಂದಕ್ಕೆ ಸರಿಯಿತು. ಇದಾದ ಕೂಡಲೆ ಬಂಡಿಯು ನೀರಿನಿಂದ ತುಂಬಿದ್ದ ಕಮರಿಯೊಳಗೆ ಮುಗುಚಿಕೊಂಡಿತು. ಹೀಗಾಗುವುದೆಂದು ನನಗೆ ತಟ್ಟನೆ ಹೊಳೆದುದರಿಂದ, ನಾನು ಪ್ರಾಣದ ಆಸೆಯನ್ನು ತ್ಯಾಗಮಾಡಿದ್ದರೂ ಹುಚ್ಚು ಧೈರ್ಯವನ್ನು ತೆಗೆದುಕೊಂಡು ಬಂಡಿಯಿಂದ ಹಾರಿದೆನು. ಮುಂದೇನಾದುದೋ ನನಗೊಂದೂ ತಿಳಿಯದು. ಆರು ಆವ ಉದ್ದೇಶದಿಂದ ನನ್ನನ್ನು ಕೊಲ್ಲಲು ಈ ಮೋಸದ ಬಲೆಯನ್ನು ಬೀಸಿದ್ದರೋ ಅವರನ್ನು ಪತ್ತೇಮಾಡಿ ದಂಡನೆಗೆ ಗುರಿಮಾಡುವುದಕ್ಕೆ ತಾವು ಪ್ರಯತ್ನಪಡುವಿರಾ? ಲೋಕದಲ್ಲಿ ಎಂತಹ ಕೆಟ್ಟ ಜನರಿರುವರು!"

ಅರಿಂದಮ—ನಾನೂ ಪ್ರಯತ್ನಮಾಡಿ ನೋಡುವೆನು, ಮಹಾಶಯ! ಫಲಿಸುವುದೂ ಫಲಿಸದಿರುವುದೂ ದೈವಾಯತ್ತವು. ಇನ್ನು ತಾವು ಹೆಚ್ಚಾಗಿ ಮಾತನಾಡದೆ ವಿಶ್ರಾಂತಿಸುಖವನ್ನು ಅನುಭವಿಸೋಣವಾಗಲಿ.

ಅರಿಂದಮನು ಹೀಗೆ ಮಾತನಾಡಿ ರಾಜಮಾರ್ತಂಡ ನಿದ್ದೆಡೆಗೆ ಬಂದನು. ಈತನು ಬರುವುದನ್ನೇ ಇದಿರು ನೋಡುತ್ತಿದ್ದ ರಾಜಮಾರ್ತಂಡನು ಅರಿಂದಮನನ್ನು ಕುರಿತು—ಹೆಚ್ಚಿನ ಸಂಗತಿಯೇನಾದರೂ ಗೊತ್ತಾದುದೇ? ಎಂದು ಪ್ರಶ್ನೆಮಾಡಿದನು.

ಅರಿಂದಮ—ಸಾಮಾನ್ಯವಾದ ಒಂದೆರಡು ಸಂಗತಿಗಳು ತಿಳಿದು ಬಂದುವು. ಅದರಿಂದಲೇ ಕಾರ್ಯಸಿದ್ಧಿಯಾಗುವುದೆಂದು ನಂಬುವುದಕ್ಕಾಗಲಾರದು.

ರಾಜ—ಆತನು ಹೇಳಿದುದನ್ನು ಕೇಳಿ ನಾನು ಮಾಡುವುದು ತಾನೇ ಏನಿರುವುದು? ತಾವು ಫಲಾಹಾರವನ್ನು ಮಾಡೋಣವಾಗಲಿ.

ಅರಿಂದಮ—ನನಗೆ ಫಲಾಹಾರದ ಆವಶ್ಯಕವೇನೂ ಇಲ್ಲ. ನಾನು ಹೊರಗೆ ಹೋಗಿ ಕೊಂಚ ಹೊತ್ತು ಸುತ್ತಿಕೊಂಡು ಬರುವೆನು. ಈ ಗುರುತರವಾದ ರಹಸ್ಯಭೇದವನ್ನು ಚಿಂತಿಸುವುದಕ್ಕೆ ನನಗೆ ನಿರುಪಾಧಿಕವಾದ ಪ್ರದೇಶವು ಬೇಕಾಗಿರುವುದರಿಂದ ನಾನು ಹೊರಗೆ ಸಂಚರಿಸಿಕೊಂಡು ಬರುವೆನು.

ರಾಜಮಾರ್ತಂಡನು ಈ ಮಾತಿಗೆ ಅಡ್ಡಿಮಾಡಲಿಲ್ಲ. ಅರಿಂದಮನು ಸುತ್ತುವುದಕ್ಕಾಗಿ ಹೊರಹೊರಟನು. ಆತನು ಬಂದ ದಾರಿಯನ್ನು ಹಿಡಿದು, ಆವ ಸ್ಥಳದಲ್ಲಿ ರಾಜಮಾರ್ತಂಡನು ಶ್ರೀಕುಮಾರನ ಭಾವಚಿತ್ರವನ್ನು ತೆಗೆದಿದ್ದನೋ ಆ ಸ್ಥಳಕ್ಕೆ ಬಂದನು.

ಅರಿಂದಮನು ಆ ಸುಂದರ ದೃಶ್ಯವನ್ನು ನೋಡುತ್ತಿರುವಲ್ಲಿ ಆತನ ಮನದಲ್ಲಿ ಹೊಳೆದುದೇನೆಂದರೆ:—

"ನಿತ್ಯಮಂಗಳೆಯು ಆರ ವಿಷಯವನ್ನು ತಿಳಿಸಿದ್ದಳೋ, ರಾಜಮಾರ್ತಂಡನು ಆರ ಭಾವಚಿತ್ರವನ್ನು ತೆಗೆದಿದ್ದನೋ ಆ ಎರಡು ವ್ಯಕ್ತಿಗಳೂ ಒಂದೇ ಆಗಿರಬೇಕು. ನ್ಯಾಯಸ್ಥಾನದಲ್ಲಿ ಶ್ರೀಕುಮಾರನು ಸತ್ತುಹೋದನೆಂದು ಸಿದ್ಧಾಂತಪಡಿಸಲ್ಪಟ್ಟು ಈಶ್ವರೀದುರ್ಗದ ಉತ್ತರಾಧಿಕಾರವು ಕಲ್ಯಾಣಮಲ್ಲನಿಗೆ ಪ್ರದತ್ತವಾಗಿರುವುದು. ಶ್ರೀಕುಮಾರನು ಸತ್ಯವಾಗಿಯೂ ಸತ್ತಿರಬಹುದೇ? ಶ್ರೀಕುಮಾರನ ಅಂತರ್ಧಾನದ ವಿಷಯದಲ್ಲಿ ಕಲ್ಯಾಣಮಲ್ಲನೇನಾದರೂ ಕೈವಾಡವನ್ನು ತೋರಿಸಿರಬಹುದೇ? ಈ ದುರ್ಭೇದ್ಯವಾದ ರಹಸ್ಯವನ್ನು ಭೇದಿಸುವ ಬಗೆ ಹೇಗೆ?"

ಅರಿಂದಮನು ಮತ್ತೂ ಆಲೋಚಿಸಿದ ಬಗೆಯು ಈ ರೀತಿಯಾಗಿದ್ದಿತು:— "ಸಂಗ್ರಾಮಸಿಂಹನಿಗೆ ಕಲ್ಯಾಣಮಲ್ಲನು ತನ್ನ ವಿದ್ಯುದ್ಯಾನವನ್ನು ಕಳುಹಿದ್ದನೆಂದು ಗೊತ್ತಾಯಿತು. ಇದರ ತತ್ತ್ವವನ್ನು ಪರಿಶೀಲಿಸಿ ನೋಡುವಲ್ಲಿ, ಕಲ್ಯಾಣಮಲ್ಲನು ಸಂಗ್ರಾಮಸಿಂಹನನ್ನು ಕೊಲ್ಲುವುದಕ್ಕಾಗಿಯೇ ತನ್ನ ಬಂಡಿಯನ್ನು ಕಳುಹಿದ್ದನೆಂದು ಭಾವಿಸಬೇಕಾಗಿದೆ. ಕಲ್ಯಾಣಮಲ್ಲನಿಗೆ ಈ ವಿಷಯವು ಗೊತ್ತಿಲ್ಲದಿರುವುದೇ? ಸಂಗ್ರಾಮಸಿಂಹನನ್ನು ಕೊಲ್ಲುವುದರಿಂದ ಆತನಿಗೆ ಲಾಭವಾದರೂ ಏನಿರಬಹುದು? ಮಧ್ಯಮಾರ್ಗದಲ್ಲಿ ಅಪಾಯವಿರುವುದೆಂದೇ ಆತನು ಆ ಬಂಡಿಯಲ್ಲಿ ಕುಳಿತು ಹೊರಡದೇ ಇರಬೇಕು. ಆತನು ಇದನ್ನು ಮೊದಲೇ ಹೇಗೆ ತಿಳಿದಿದ್ದನು. ಸಂಗ್ರಾಮಸಿಂಹನಾರಿರಬಹುದು? ಆತನು ಸ್ವದೇಶದವನೇ, ಇಲ್ಲವೇ ಪರದೇಶದವನೇ? ಇದರಲ್ಲಿ ಏನೋ ಸ್ವಾರಸ್ಯವಿರಬೇಕು."

ಅರಿಂದಮನು ಹೀಗೆಲ್ಲಾ ಚಿಂತಿಸಿದ ಬಳಿಕ ಅವನ ಮನದಲ್ಲಿ ತೋರಿಬಂದ ನಿಜವಾದ ವಿಷಯವೇನೆಂದರೆ—"ನಿತ್ಯಮಂಗಳೆಯು ಶ್ರೀಕುಮಾರನ ವಿವಾಹಿತೆಯಾದ ಪತ್ನಿಯು. ಇದು ಪ್ರಮಾಣದಿಂದ ಸ್ಥಿರಪಡಿಸಲ್ಪಡುವುದಾದರೆ, ಕಲ್ಯಾಣಮಲ್ಲನಿಗೆ ಈಶ್ವರೀದುರ್ಗದ ಮೇಲೆ ಅಧಿಕಾರವು ತಪ್ಪಿಹೋಗುವುದು. ಕಾರಣವೇನೆಂದರೆ—ಶ್ರೀಕುಮಾರನಿಗೆ ಒಬ್ಬ ಪುತ್ರನಿರುವನು. ಆ ಮಗುವೇ ಈ ವಿಪುಲವಾದ ಸಂಪತ್ತಿಗೆ ಉತ್ತರಾಧಿಕಾರಿಯಾಗತಕ್ಕುದು ನ್ಯಾಯ ಸಂಗತವಾದುದು.

ಶ್ರೀಕುಮಾರನು ಬದುಕಿರುವುದಾದರೆ, ಕಲ್ಯಾಣಮಲ್ಲನು ಈ ಜಹಗೀರನ್ನು ಆತನಿಗೆ ಬಿಟ್ಟುಕೊಟ್ಟು ತಾನು ಬೀದಿಯ ಬಿಕಾರಿಯಾಗಬೇಕು. ಕಲ್ಯಾಣ

ಮಲ್ಲನೂ ಇದನ್ನು ಚೆನ್ನಾಗಿಯೂ ಅರಿತವನಾಗಿಯೇ ಇರಬೇಕು. ಅದುಕಾರಣ ಆತನು ಶ್ರೀಕುಮಾರನನ್ನು ಸಂಹರಿಸಿರಬೇಕು—ಇಲ್ಲವೇ, ಆತನನ್ನು ಗುಪ್ತ ಸ್ಥಾನದಲ್ಲಿ ನಿರ್ಬಂಧಿಸಿರಬೇಕು. ಶ್ರೀಕುಮಾರನು ಸತ್ತುದಕ್ಕೆ ಆವ ಪ್ರಮಾಣವೂ ಸಿಕ್ಕಿಲ್ಲ—ಎಂದ ಮೇಲೆ ಆತನು ಎಲ್ಲಿಯೋ ಜೀವದೊಡನೆ ನಿರ್ಬಂಧಿಸಲ್ಪಟ್ಟಿರಬೇಕಲ್ಲವೇ? ಇದನ್ನು ಸಿದ್ಧಾಂತಪಡಿಸುವುದು ಹೇಗೆ? ”

ಹಠಾತ್ತಾಗಿ ಸಮೀಪದಲ್ಲಿಯೇ ಗುಂಡುಹಾರಿದ ಶಬ್ದವೊಂದು ಅರಿಂದಮನ ಚಿಂತಾಪ್ರವಾಹವನ್ನು ತಡೆದುಬಿಟ್ಟಿತು. ಅರಿಂದಮನು ನಿಂತಿದ್ದ ಸ್ಥಲವು ಎರಡು ಜಹಗೀರಿಗಳೂ ಸೇರತಕ್ಕ ಸ್ಥಲವಾಗಿದ್ದಿತು, ಕಲ್ಯಾಣಮಲ್ಲನು ತನ್ನ ಮಿತ್ರಮಂಡಲಿಯೊಡನೆ ಬೇಟೆಯಾಡುತ್ತಿರಬಹುದೆಂದೂ, ಒಂದು ವೇಳೆ ಸಂಗ್ರಾಮಸಿಂಹನು ಅವರೊಡನೆ ಸೇರಿದ್ದರೂ ಸೇರಿರಬಹುದೆಂದೂ, ಅನಾಹೂತನಾಗಿ ತಾನು ಅವರ ಕಣ್ಣಿಗೆ ಬೀಳುವುದು ಸಂಪ್ರದಾಯ ವಿರುದ್ಧವೆಂದೂ ತಿಳಿದು ಅರಿಂದಮನು ಅಲ್ಲಿ ಒಂದು ಕ್ಷಣವೂ ನಿಲ್ಲದೆ ರಾಜಮಾರ್ತಾಂಡನ ಸೌಧಕ್ಕೆ ಬಂದುಬಿಟ್ಟನು.

ರಾಜಮಾರ್ತಂಡನು ಅರಿಂದಮನನ್ನು ಕಂಡಕೂಡಲೆ ತನ್ನ ಕೋಣೆಗೆ ಕರೆದುಕೊಂಡುಹೋಗಿ ಆತನನ್ನು ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡು—ಮಹಾಶಯ! ಶ್ರೀಕುಮಾರನ ಭಾವ ಚಿತ್ರವು ತಮ್ಮ ಕೈಸೇರಿದುದು ಹೇಗೆಂಬುದನ್ನು ಈಗಲಾದರೂ ತಿಳಿಸುವುದಕ್ಕೆ ಆವ ಅಡ್ಡಿಯೇನೂ ಇರುವುದಿಲ್ಲವಷ್ಟೆ? ನಾನು ಅದನ್ನು ಕೇಳುವುದಕ್ಕೆ ತುಂಬಾ ಕುತೂಹಲಿಯಾಗಿರುವೆನು, ಎಂದು ಪ್ರಾರ್ಥಿಸಿಕೊಂಡನು.

ಅರಿಂದಮ—ಅದರ ವಿಚಾರವು ಅತ್ಯಂತ ಗೋಪ್ಯವಾದುದು. ಆದುದರಿಂದ ತಾವು ಅದನ್ನು ಆರಿಗೂ ತಿಳಿಸಕೂಡದು. ಆತನ ಹೆಂಡತಿಯೇ ಆ ಭಾವಚಿತ್ರವನ್ನು ನನ್ನ ಕೈಗೆ ಕೊಟ್ಟಳು.

ರಾಜ—(ಆಶ್ಚರ್ಯದಿಂದ) ಆತನ ಹೆಂಡತಿಯು ತಮಗೆ ಕೊಟ್ಟಳೇ! ತಮಗೆ ಈ ವಿಷಯದಲ್ಲಿ ಭ್ರಾಂತಿಯೇನೂ ಇಲ್ಲವಷ್ಟೆ?

ಅರಿಂದಮ—ಭ್ರಾಂತಿಗೆ ಕಾರಣವೇನು, ಮಹಾಶಯ! ಆತನ ವಿವಾಹಿತೆಯಾದ ಹೆಂಡತಿಯೇ ಚಿತ್ರವನ್ನು ನನಗೆ ಕೊಟ್ಟದು. ನನ್ನ ಮಾತನ್ನು ಕೇಳಿ ತಾವು ಇಷ್ಟು ಆಶ್ಚರ್ಯಪಡಲು ಕಾರಣವೇನು? ಇಂದಿಗೆ ಐದುವರ್ಷಗಳ ಕೆಳಗೆ ಶ್ರೀಕುಮಾರನು ನಿತ್ಯಮಂಗಳೆಯೆಂಬ ದರಿದ್ರ ಯುವತಿಯೊಬ್ಬಳನ್ನು ಗೋಪ್ಯವಾಗಿ ಮದುವೆಯಾದನು. ಆ ಭಾವಚಿತ್ರವು ಆತನ ಹೆಂಡತಿಯ ಹತ್ತಿರವೇ

ಇದ್ದಿತು. ತನ್ನ ಗಂಡನನ್ನು—ಎಂದರೆ, ಕಾರಣಾಂತರದಿಂದ ಕಣ್ಮರೆಯಾದ ತನ್ನ ಗಂಡನನ್ನು, ಪತ್ತೆಮಾಡಿಕೊಡಬೇಕೆಂಬ ಕಾರ್ಯಭಾರವನ್ನು ನನ್ನ ತಲೆಯಮೇಲೆ ಹೊರಿಸಿ ತನ್ನ ಗಂಡನ ಭಾವಚಿತ್ರವನ್ನು ಗುರುತಿಗಾಗಿ ನನಗೆ ಕೊಟ್ಟಿರುವಳು.

ರಾಜಮಾರ್ತಂಡನು ವ್ಯರ್ಥವಾದ ನಗೆಯನ್ನು ನಕ್ಕು ಅರಿಂದಮನ ಮಾತನ್ನು ಕೊಂಚವೂ ನಂಬಲಾರದವನಾಗಿ—ಮಹಾಶಯ! ತಾವು ನನ್ನೊಡನೆ ಸರಸ ಸಲ್ಲಾಪಕ್ಕೆ ತೊಡಗಿದಂತಿದೆ. ತಾವು ಅಸಂಭವವಾದುದನ್ನೇ ಮಾತನಾಡು ವುದಕ್ಕೆ ಕುಳಿತಂದಿದೆ. ಕಲ್ಯಾಣಮಲ್ಲನು ಮೋಸದಿಂದ ಜಹಗೀರನ್ನು ಪಡೆದಿರು ವನೇ? ಜನರಿಗೆ ಇತರರ ಸಂಪತ್ತೆಂದರೆ ಎಷ್ಟು ದುರಾಶೆ! ಎಂದು ತನ್ನ ಅಭಿಪ್ರಾಯವನ್ನು ಸೂಚಿಸಿದನು.

ಅರಿಂದಮ—ತಾವು ಈಗ ಊಹಿಸಿದುದು ಸತ್ಯವಾದುದು. ತಾವು ಈ ಗುಟ್ಟನ್ನು ರಟ್ಟು ಮಾಡುವುದಿಲ್ಲವೆಂದು ನನಗೆ ನಂಬುಗೆ ಕೊಡುವುದಾದರೆ, ನನಗೆ ತಿಳಿದುಬಂದಿರುವ ಸಂಗತಿಯೆಲ್ಲವನ್ನೂ ಆಮೂಲಾಗ್ರವಾಗಿ ತಮ್ಮಲ್ಲಿ ಅರಿಕೆ ಮಾಡಿಕೊಳ್ಳುವೆನು.

ರಾಜಮಾರ್ತಂಡನು ಅರಿಂದಮನಿಗೆ ಭರವಸೆಯನ್ನಿತ್ತನು. ಅರಿಂದಮನು ನಿತ್ಯಮಂಗಳೆಯ ಶೋಚನೀಯವಾದ ವೃತ್ತಾಂತವೆಲ್ಲವನ್ನೂ ತಿಳಿಯಪಡಿಸಿದನು. ರಾಜಮಾರ್ತಂಡನೂ ಮಂತ್ರಮುಗ್ಧನಂತಾಗಿ ಎಲ್ಲವನ್ನೂ ಆದರದಿಂದ ಕೇಳುತ್ತಾ ಕುಳಿತಿದ್ದನು.

ಅರಿಂದಮನ ಹೇಳಿಕೆಯೆಲ್ಲವೂ ಮುಗಿದ ಮೇಲೆ, ರಾಜಮಾರ್ತಂಡನು ನಿಟ್ಟುಸಿರನ್ನು ಬಿಟ್ಟು ಇಂತೆಂದನು:—

"ಈ ವೃತ್ತಾಂತವು ಅದ್ಭುತವಾದುದು. ಶ್ರೀಕುಮಾರನ ಪಕ್ಷವನ್ನು ಅವಲಂಬಿಸಿ ತಾವು ಕೆಲಸಮಾಡುವುದು ಯುಕ್ತವು. ನನಗೆ ಕಲ್ಯಾಣಮಲ್ಲನ ಮೇಲೆ ದ್ವೇಷವಿಲ್ಲವಾದರೂ, ಜಹಗೀರಿಯು ಸರಿಯಾದವನ ಕೈಸೇರದೆ ಅನ್ಯಾಕ್ರಾಂತವಾಗಿರುವುದನ್ನು ನೋಡಿ ಮನವು ಸಂಕಟಪಡುತ್ತಿರುವುದು. ಅಲ್ಲದೆಯೂ ಈಶ್ವರೀದುರ್ಗದ ಒಡೆಯರ ಸದ್ವಂಶಕ್ಕೆ ಕೆಟ್ಟಹೆಸರು ಬರುವುದನ್ನು ಕೇಳಿ ನಾವು ಸಹಿಸಲಾರೆವು, ಎಂದು ಮಾತನಾಡಿದನು.

ಅರಿಂದಮ—ಆವ ಕೆಲಸವನ್ನೂ ಹಠಾತ್ತಾಗಿ ಮಾಡುವುದ ಉಚಿತವಲ್ಲ. ಶ್ರೀಕುಮಾರನ ಹೆಂಡಿತಿ ಮಗುವನ್ನು ನಾನು ಸರಿಯಾದ ಸ್ಥಾನ ದಲ್ಲಿಟ್ಟು ಅವರ ರಕ್ಷಣೆಗೆ ತಕ್ಕ ಏರ್ಪಾಡುಮಾಡಿರುವೆನು. ಅವರ ವಿಷಯದಲ್ಲಿ ತಾವು ಚಿಂತಿಸಬೇಕಾದುದೇನೂ ಇರುವುದಿಲ್ಲ.

ಇನ್ನು ಪ್ರಕೃತ ಕಾರ್ಯವನ್ನು ಆಲೋಚಿಸೋಣ. ತಾವು ನನ್ನನ್ನು ಇಲ್ಲಿಗೆ ಬರಮಾಡಿಕೊಂಡಿರುವುದರ ಉದ್ದೇಶವಾದರೂ ಏನು ? ಈ ಆಲೋಚನೆಯಲ್ಲಿ ಅದು ಮರೆತಿಲ್ಲವಷ್ಟೇ ?

ರಾಜ— ಸ್ವವಿಷಯವು ಮರೆವುದೆಂದರೇನು ? ತಮಗೆ ಇಷ್ಟು ಹೊತ್ತಿಗೆ ಇಲ್ಲಿನ ವಿಷಯಗಳೆಲ್ಲವೂ ಗೊತ್ತಾಗಿರುವುದು. ಅವನ್ನು ಕುರಿತು ನಾನು ಮತ್ತೆ ತಿಳಿಸಬೇಕಾದುದೇನೂ ಇರುವುದಿಲ್ಲ. ಮುಂದೆ ತಾವು ಮಾಡಬೇಕಾದುದೊಂದೇ ಉಳಿದಿರುವುದು.

ಅರಿಂದಮ—ಅದು ನನ್ನ ಮೇಲೆ ಬಿದ್ದ ಭಾರವಾಗಿರಲಿ. ನಾಳೆಯ ಬೆಳಗ್ಗೆ ಬೇಟೆಗಾಗಿ ತಾವು ತೆರಳುವ ಉದ್ದೇಶವೇನಾದರೂ ಇರುವುದೇನು?

ರಾಜ—ಇಂದಿರಾಕಾಂತನು ಹಾಸುಗೆ ಹಿಡಿದು ಬಿದ್ದಿರುವಾಗ, ನನಗೆ ಆಟಪಾಟಗಳಲ್ಲಿ ಪ್ರವೃತ್ತಿಯೇ ಉಂಟಾಗುತ್ತಿಲ್ಲ. ಕೆಲವು ದಿನಗಳ ವರೆಗಾದರೂ ಬೇಟೆಗೆ ಹೋಗುವುದಿಲ್ಲವೆಂದು ಮನಸ್ಸಿನಲ್ಲಿ ಸ್ಥಿರಮಾಡಿಕೊಂಡಿರುವೆನು.

ಅರಿಂದಮ—ಹಾಗಾಗಲಾರದು. ನಾನು ಇಲ್ಲಿಗೆ ಬಂದಿರುವಾಗ ತಾವು ನನ್ನಿಷ್ಟವನ್ನು ನೆರವೇರಿಸಿಕೊಡಬೇಕು. ನಾಳೆಯ ಬೆಳಗ್ಗೆ ನಾವು ಬೇಟೆಗೆ ಹೊರಡಬೇಕಾಗುವುದು. ಕಲ್ಯಾಣಮಲ್ಲನು ಮಿತ್ರಮಂಡಲಿಯೊಡನೆ ಬೇಟೆಗೆ ಹೊರಡುವುದಾದರೆ, ತಾವೂ ಹೊರಡಬಹುದು ; ಇಲ್ಲವಾದರೆ ಬೇಡ. ಕಲ್ಯಾಣಮಲ್ಲನೊಡನೆ ಸಂಗ್ರಾಮಸಿಂಹನೇನಾದರೂ ಬೇಟೆಗೆ ಬರುವ ಪಕ್ಷದಲ್ಲಿ ನಾನು ಆತನನ್ನು ಒಂದು ಸಲವಾದರೂ ನೋಡಿರೋಣವೆಂದು ತಮ್ಮನ್ನು ಇಷ್ಟು ನಿರ್ಬಂಧಪಡಿಸಬೇಕಾಯಿತು. ಸಂಗ್ರಾಮಸಿಂಹನೆಂಬುವನು ಲೋಕವನ್ನರಿತ ಚತುರಬುದ್ಧಿಯುಳ್ಳವನಾಗಿರಬೇಕು. ಆತನು ಮುಂದೆ ಬರಬಹುದಾದ ವಿಪತ್ತನ್ನು ಮೊದಲೇ ಅರಿತುಕೊಂಡವನಾಗಿ ಕಲ್ಯಾಣಮಲ್ಲನ ಬಂಡಿಯಲ್ಲಿ ಸಂಚರಿಸದೇ ತಪ್ಪಿಸಿಕೊಂಡು, ಏನನ್ನೂ ಅರಿಯದ ಇಂದಿರಾಕಾಂತನನ್ನು ಸಿಕ್ಕಿಸಿರುವನು. ಇಂದಿರಾಕಾಂತನ ಸ್ಥಿತಿಯನ್ನು ನೋಡಿದರೆ ನನಗೆ ಎಷ್ಟೋ ಸಂಕಟವಾಗುವುದು.

ಪ್ರಕೃತವ್ಯಾಪಾರವಾದರೋ ರಹಸ್ಯಪೂರ್ಣವಾಗಿರುವುದು. ಈ ರಹಸ್ಯವನ್ನು ಹೇಗಾದರೂ ಮಾಡಿ ಭೇದಿಸಬೇಕೆಂಬುದೇ ನನ್ನ ಪರಮೋದ್ದೇಶವು. ನಾನು ಸಂಗ್ರಾಮಸಿಂಹನನ್ನು ಒಂದು ಸಲ ನೋಡದೆಯೇ ಯಾವುದನ್ನೂ ಸಿದ್ಧಾಂತಪಡಿಸಲಾಗುವುದಿಲ್ಲ. ಅದಕ್ಕಾಗಿಯೇ ನಾನು ತಮ್ಮನ್ನು ಬೇಟೆಗೆ ತೆರಳಬೇಕೆಂದು ಪ್ರಾರ್ಥಿಸಿಕೊಂಡುದು. ತಮ್ಮ ಸಂಕಲ್ಪಕ್ಕೆ ವಿರೋಧವಾಗಿ ನಡೆಯಬೇಕೆಂದು ನನ್ನ ಉದ್ದೇಶವಲ್ಲ.

ರಾಜ—ಈ ದುರ್ಘಟನೆಗೂ ಸಂಗ್ರಾಮಸಿಂಹನಿಗೂ ಆವ ಸಂಬಂಧ ವಿರುವುದು?

ಅರಿಂದಮ—ಪ್ರಮಾಣವನ್ನು ಪಡೆದುಕೊಂಡಲ್ಲದೆ ವಿಷಯವನ್ನು ಸಿದ್ಧಾಂತಪಡಿಸುವುದು ನನ್ನ ಅಭ್ಯಾಸದಲ್ಲಿಲ್ಲ. ಕಾರ್ಯಕ್ಕೆ ಸಾಕ್ಷಾತ್ಕಾರಣ ವೆಂದೂ ಪರಂಪರಾ ಕಾರಣವೆಂದು ಎರಡು ಬಗೆಯ ಕಾರಣಗಳುಂಟು ಈ ದುರ್ಘಟ ನೆಗೂ ಸಂಗ್ರಾಮಸಿಂಹನಿಗೂ ಸಾಕ್ಷಾತ್ಕಾರಣವಿಲ್ಲದಿದ್ದರೂ, ಪರಂಪರಾಕಾ ರಣವಿರುವುದು. ಇದನ್ನು ತಿಳಿಯುವುದಕ್ಕಾಗಿಯೇ ನಾನು ಸಂಗ್ರಾಮಸಿಂಹನನ್ನು ನೋಡಬೇಕಾಗಿರುವುದು.

ರಾಜ—ಹಾಗೆಯೇ ಆಗಲಿ, ಮಹಾಶಯ! ನಾಳೆಯ ಬೆಳಗ್ಗೆ ನಾವು ಬೇಟೆಗೆ ಹೋಗೋಣ. ತಮಗೆ ಸಂಗ್ರಾಮಸಿಂಹನನ್ನು ತೋರಿಸುವುದಕ್ಕೆ ಏನ ಮಾಡಬೇಕೋ ಅದನ್ನು ನಾನು ಮಾಡುವೆನು. ನಾಳೆಯದಿನ ಕಲ್ಯಾಣ ಮಲ್ಲನು ಮಿತ್ರಮಂಡಲಿಯೊಡನೆ ಬೇಟೆಗೆ ತೆರಳುವುದಾಗಿ ಅರಣ್ಯರಕ್ಷಕರು ಬಂದು ನನಗೆ ತಿಳಿಸಿಹೋಗಿರುವರು. ಅರಣ್ಯಮಧ್ಯದಲ್ಲಿ ಆತನದೊಂದು ಮನೆಯಿರು ವುದು. ಕಲ್ಯಾಣಮಲ್ಲನು ಆವಾಗ ಬೇಟೆಗೆ ಹೊರಟರೂ, ಬೇಟೆಯಾದ ಕೂಡಲೆ ಆ ಮನೆಗೆ ಹೋಗಿ ವಿಶ್ರಾಂತಿಯನ್ನು ತೆಗೆದುಕೊಂಡು ಮಿತ್ರರೊಡನೆ ಭೋಜನ ವನ್ನು ಮಾಡಿ ಆನಂದದಿಂದ ಕೆಲವು ಕಾಲವನ್ನು ಕಳೆದು ಬಳಿಕ ತನ್ನ ವಾಸ ಸ್ಥಾನಕ್ಕೆ ತೆರಳುವ ಪದ್ಧತಿಯುಂಟು. ನಮ್ಮ ಬೇಟೆಯ ಸ್ಥಾನವೂ ಅದರ ಪಕ್ಕದಲ್ಲಿಯೇ ಇರುವುದು. ನಾವು ನಮ್ಮ ಸ್ಥಾನದಲ್ಲಿದ್ದುಕೊಂಡೇ ಅವರನ್ನು ಚೆನ್ನಾಗಿಯೂ ಗುರುತಿಸಬಹುದು.

ಅರಿಂದಮ—(ಉತ್ಸಾಹದೊಡನೆ) ತಮ್ಮ ಸಲಹೆಯು ಚೆನ್ನಾಗಿರು ವುದು. ಈಗ ಭೋಜನಕ್ಕೆ ಸುಸಮಯವಾಗಿರುವುದು. ಹಸಿವೂ ಚೆನ್ನಾಗಿಯೇ ಆಗುತ್ತಿರುವುದು. ನನ್ನ ದೇವೇಂದ್ರನೆಲ್ಲಿ?

ರಾಜ—ಆತನು ತುಂಬಾ ಆಯಾಸತಪ್ಪಿದ್ದುದರಿಂದ ಆತನಿಗೆ ಮೊದಲೇ ಭೋಜನಮಾಡಿಸಿ ವಿಶ್ರಾಂತಿಗಾಗಿ ಕೋಣೆಗೆ ಕಳುಹಿರುವೆನು.

'ಹಾಗಾದರೆ ಸರಿ' ಎಂದು ಅರಿಂದಮನು ಹೇಳಿ ರಾಜಮಾರ್ತಂಡನೊಡನೆ ಭೋಜನಕ್ಕೆ ತೆರಳಿದನು.

---

*

## ಮೂರನೆಯ ವಿಲಾಸ

### ಅವಿತರ್ಕಿತ ಬಂಧುತ್ವ

ಮರುದಿನ ಪ್ರಾತಃಕಾಲದಲ್ಲಿ ರಾಜಮಾರ್ತಂಡನು ಅರಿಂದಮನನ್ನು ಬೇಟೆಗೆ ಕರೆದುಕೊಂಡು ತೆರಳಿದನು. ದೇವೇಂದ್ರನೂ ವೀರವಿಕ್ರಮನೆಂಬ ನಾಯಿಯೊಡನೆ ಅವರ ಜತೆಯಲ್ಲಿಯೇ ಹೊರಟನು. ಆದಿನ ರೋಗಿಯ ಅವಸ್ಥೆಯು ಸಹ್ಯವಾಗಿದ್ದುದರಿಂದ, ಎಲ್ಲರೂ ಸಂತೋಷದಿಂದ ಬೇಟೆಗೆ ತೆರಳಿದರು. ಎಷ್ಟೋ ದಿನಗಳಾದಮೇಲೆ ಬೇಟೆಯಾಡುವ ಸುಯೋಗವು ದೊರೆತುದಕ್ಕಾಗಿ ದೇವೇಂದ್ರನ ಸಂತೋಷಕ್ಕೆ ಪಾರವೇ ಇರಲಿಲ್ಲ.

ಇವರೆಲ್ಲರೂ ಯಥಾಸಮಯದಲ್ಲಿ ಅರಣ್ಯವನ್ನು ಪ್ರವೇಶಿಸಿ ಬೇಟೆಯಾಡಲುಪಕ್ರಮಿಸಿದರು. ಅರ್ಧಘಂಟೆಯ ವರೆಗೂ ಬೇಟೆಯಾಡಿದನಂತರದಲ್ಲಿ ಎಲ್ಲರೂ ಈಶ್ವರೀದುರ್ಗದ ಸರಹದ್ದಿಗೆ ಬಂದರು. ಅಲ್ಲಿ ಒಂದು ಮರದ ಕೆಳಗೆ ಕುಳಿತುಕೊಂಡು ವಿಶ್ರಾಂತಿಸುಖವನ್ನು ಅನುಭವಿಸುತ್ತಿರುವಷ್ಟರಲ್ಲಿ ಸೂರ್ಯನು ಗಗನಮಂಡಲದ ಮಧ್ಯಭಾಗಕ್ಕೆ ಬಂದನು.

ಅತ್ತಕಡೆ ಕಲ್ಯಾಣಮಲ್ಲನು ತನ್ನ ಮಿತ್ರಮಂಡಲಿಯೊಡನೆ ಬೇಟೆಯಾಡಿ ಮಧ್ಯಾಹ್ನದ ಸಮಯದಲ್ಲಿ ವಿಶ್ರಾಂತಿಗಾಗಿ ತನ್ನ ಕಾಡಿನ ಮನೆಗೆ ತೆರಳಿದನು. ಅರಿಂದಮನಿದ್ದ ಸ್ಥಲವೂ ಆ ಮನೆಯೂ ಸಮೀಪವಾಗಿಯೇ ಇದ್ದುದರಿಂದ, ಅರಿಂದಮನು ಇದ್ದಲ್ಲಿಯೇ ಕುಳಿತುಕೊಂಡು ಅವರು ಮಾಡುವುದೆಲ್ಲವನ್ನೂ ನೋಡತೊಡಗಿದನು. ಕಲ್ಯಾಣಮಲ್ಲನು ಮತ್ತಿಬ್ಬರೊಡನೆ ಬೇಟೆಯಾಡಿಕೊಂಡು ತನ್ನ ಕಾಡಿನ ಮನೆಯ ಕಡೆಗೆ ಮಾತನಾಡಿಕೊಂಡು ಬರುತ್ತಿದ್ದನು. ಆ ಮೂವರಲ್ಲಿ ಹಿಂದೆ ಬರುತ್ತಿದ್ದವನು ಮಟ್ಟಿಗೆ ಸಂತೋಷದಿಂದ ಮಾತನಾಡುತ್ತಿದ್ದನು. ಅದಕ್ಕೆ ಕಲ್ಯಾಣಮಲ್ಲನು ಉತ್ತರಕೊಡುತ್ತಿದ್ದನು. ಮಧ್ಯದಲ್ಲಿದ್ದವನು ಆವ ಮಾತನ್ನೂ ಆಡದೆ ಗಂಭೀರಭಾವದಿಂದ ತೆರಳುತ್ತಿದ್ದನು. ಆದರೆ ಕಲ್ಯಾಣಮಲ್ಲನ, ಅವನ ಹಿಂದೆ ಬರುತ್ತಿದ್ದವನ ಮುಖಗಳಲ್ಲಿ ಮಟ್ಟಿಗೆ ವಿಷಾದದ ಚಿಹ್ನೆಯು ಕಾಣುತ್ತಿದ್ದಿತೇ ಹೊರತು ಮತ್ತೇನೂ ಕಂಡುಬರುತ್ತಿರಲಿಲ್ಲ.

ಇದನ್ನು ನೋಡಿ ರಾಜಮಾರ್ತಂಡನು ಅರಿಂದಮನನ್ನು ಕುರಿತು ಸಿಮ್ನ ಸ್ವರದಿಂದ—ಮಹಾಶಯ! ಎಲ್ಲರಿಗಿಂತಲೂ ಹಿಂದೆ ಬರುತ್ತಿರುವವನೇ ಸಂಗ್ರಾಮ ಸಿಂಹನೆಂದು ತೋರಿಬರುತ್ತಿರುವುದು. ಮಧ್ಯದಲ್ಲಿರುವವನಾರೋ ಗೊತ್ತಿಲ್ಲ. ಈತನು ಆಗಿಂದಾಗ ಈಶ್ವರೀದುರ್ಗಕ್ಕೆ ಬರುತ್ತಿದ್ದುದರಿಂದ ಈತನು ಸಂಗ್ರಾಮ ಸಿಂಹನಲ್ಲ, ಎಂದು ನುಡಿದನು.

ಈ ಮಾತನ್ನು ಕೇಳಿದ ಬಳಿಕ ಅರಿಂದಮನು ಇನ್ನೂ ಮುಂದೆ ಮುಂದೆ ಹೋಗಿ ನೋಡಬೇಕೆಂಬ ಅಭಿಪ್ರಾಯವನ್ನು ಸೂಚಿಸಲಾಗಿ ಎಲ್ಲರೂ ಮುಂದಕ್ಕೆ ತೆರಳಿದರು.

ಕಲ್ಯಾಣಮಲ್ಲನ ಹಿಂದೆ ಹಿಂದೆ ಹೋಗುತ್ತಿದ್ದ ಸಂಗ್ರಾಮಸಿಂಹನು ಅರಣ್ಯದ ಸೌಂದರ್ಯವನ್ನು ನೋಡುವ ಸಂದರ್ಭದಲ್ಲಿ ಹಿಂದಿರುಗಿದನು. ಆಗ ರಾಜಮಾರ್ತಂಡನೂ ಆತನ ಇಬ್ಬರು ಸ್ನೇಹಿತರೂ ಆತನ ಕಣ್ಣಿಗೆ ಬಿದ್ದರು. ಆತನು ನೋಡಿದ ಬಳಿಕ ತನ್ನ ಜತೆಗಾರರೊಡನೆ ಕೆಲವು ಮಾತುಗಳನ್ನಾಡಿ ರಾಜಮಾರ್ತಂಡನ ಕಡೆಗೆ ತಿರುಗಿದನು. ಅರಿಂದಮನೂ ರಾಜಮಾರ್ತಂಡನೂ ಆತನನ್ನು ನೋಡಿ ಈತನು ಆವನೋ ಅನ್ಯದೇಶದ ದೊಡ್ಡಮನುಷ್ಯನಿರಬಹುದೆಂದು ತಿಳಿದುಕೊಂಡರು. ಸಂಗ್ರಾಮಸಿಂಹನು ಇತ್ತ ಕಡೆಗೆ ಬಂದ ಕೂಡಲೆ ಅರಿಂದಮನನ್ನು ನೋಡಿ ಕೊಂಚ ಬೆದರಿ ನಿಂತನು ಅರಿಂದಮನು ದೈವಯೋಗದಿಂದ ಆ ಭಾವವನ್ನು ನೋಡಲಿಲ್ಲ. ಸಂಗ್ರಾಮಸಿಂಹನು ಎದೆಗೆಡದವನಾಗಿ ರಾಜಮಾರ್ತಂಡನನ್ನು ಕುರಿತು—ಮಹಾಶಯ! ರಾಜಮಾರ್ತಂಡರೆಂಬ ಜಹಗೀರುದಾರರು ತಾವೆಯಲ್ಲವೇ? ತಮ್ಮ ಹೆಸರು ನಮ್ಮ ದೇಶಗಳಲ್ಲಿಯೂ ಪ್ರಸಿದ್ಧವಾಗಿರುವುದು. ಈ ದಿವಸ ಹಠಾತ್ತಾಗಿ ತಮ್ಮ ದರ್ಶನವಾದುದು ನನ್ನ ಪುಣ್ಯೋದಯವೇ ಸರಿ. ಆದರೆ ನಾನು ತಮ್ಮ ಜತೆಗಾರರನ್ನು—

ಸಂಗ್ರಾಮಸಿಂಹನು ಈ ಮಾತ ಮುಗಿಸುವುದರೊಳಗಾಗಿ, ದೇವೇಂದ್ರನು ಅರಿಂದಮನ ಬಳಿಗೈತಂದು—ಪ್ರಭೂ! ನಮ್ಮ ವೀರವಿಕ್ರಮನು ಅಸ್ಥಿರವಾಗಿರುವುದು. ಅದು ಬುಸುಗುಟ್ಟುತ್ತಿರುವುದಕ್ಕೆ ಕಾರಣವೇನೋ ತಿಳಿಯದು. ಶತ್ರುಗಳನ್ನು ನೋಡಿದರೆ ಅದು ಹೀಗೆಲ್ಲಾ ಮಾಡಿರುವುದುಂಟು. ಇಲ್ಲ ಬೇಟೆಯ ಮೃಗದ ವಾಸನೆ ಯೇನಾದರೂ ಅದಕ್ಕೆ ಬಂದಿರಬಹುದೇ? ಎಂದು ನುಡಿನುಡಿಗಳನ್ನಾಡಿದನು.

ದೇವೇಂದ್ರನು ಇನ್ನೂ ಮಾತನಾಡಬೇಕೆಂದು ಯತ್ನಮಾಡುತ್ತಿರುವಲ್ಲಿ, ವೀರವಿಕ್ರಮನು ಮುಳ್ಳಿನ ಬೇಲಿಯನ್ನು ಹಾರಿ ಕಣ್ಣುಮುಚ್ಚಿ ತೆಗೆಯುವುದರೊಳಗಾಗಿ ಸಂಗ್ರಾಮಸಿಂಹನ ಮೇಲೆ ಬಿದ್ದಿತು. ಅದುಬಿದ್ದ ರಭಸಕ್ಕೆ, ಸಂಗ್ರಾಮಸಿಂಹನು ದಾಯ ತಪ್ಪಿ ನೆಲದಮೇಲೆ ಬಿದ್ದುಬಿಟ್ಟನು. ಬಳಿಕ ನಾಯಿಯು ಆತನ ಬಟ್ಟೆಗಳನ್ನು ಹರಿದು ಹಾಕಿ, ಆತನನ್ನು ಕಚ್ಚಿ ಒಂದೆರಡುಕಡೆ ಗಾಯಮಾಡಿತು. ಇತ್ತಕಡೆ ಯಿದ್ದವರು ಅದನ್ನು ನೋಡಿ ಬೆರಗಾಗಿ ನಿಂತರೇ ಹೊರತು ಆತನ ಉದ್ಧಾರಕ್ಕಾಗಿ ಆರೂ ಹೋಗಲಿಲ್ಲ.

ಅರಿಂದಮನು ತನ್ನ ನಾಯಿಯ ಅತ್ಯಾಚಾರವನ್ನು ನೋಡಿ ಸಹಿಸಲಾರದವನಾಗಿ ಅದನ್ನು ಹಿಡಿದು ನಿಲ್ಲಿಸುವುದಕ್ಕಾಗಿ ಬೇಲಿ ಹಾರಿ ಹೋದನು. ನಾಯಿಯು ಮುಂದೆ ಆವ ದುಷ್ಟ ಕೃತ್ಯವನ್ನೂ ಎಸಗದೆ ಅರಿಂದಮನ ಹತ್ತಿರ ಬಂದು ನಿಂತಿತು. ಅರಿಂದಮನು ಅದನ್ನು ಹಿಡಿದುಕೊಂಡು—ನೀನು ಹೀಗೆ ಮಾಡುವುದು ನೋಡಿದರೆ ನಿನಗೆ ಹುಚ್ಚೇನಾದರೂ ಹಿಡಿದಿರುವುದೋ ? ಎಂದು ಹೇಳಿ ಅದರ ತಲೆಯ ಮೇಲೆ ಒಂದು ಪೆಟ್ಟನ್ನು ಕೊಟ್ಟನು. ಆದರೂ ನಾಯಿಯು ಸುಮ್ಮನಿರದೇ ಗೋಳ್ ಗೋಳ್ ಎಂದು ಬೊಗಳುತ್ತಲೇ ಇದ್ದಿತು. ಅರಿಂದಮನು ರಕ್ಷಣೆಗೆ ಬಾರದಿದ್ದರೆ, ನಾಯಿಯು ಸಂಗ್ರಾಮಸಿಂಹನನ್ನು ತುಂಡುತುಂಡಾಗಿ ಕತ್ತರಿಸಿಬಿಡುತ್ತಿದ್ದಿತು.

ಅರಿಂದಮನು ನಾಯಿಯನ್ನು ದೂರಮಾಡಿ ಸಂಗ್ರಾಮಸಿಂಹನನ್ನು ಹಿಡಿದೆತ್ತಿ ಕುಳ್ಳಿರಿಸಿದನು. ಬಳಿಕ ಆತನನ್ನು ಕುರಿತು—ಮಹಾಶಯ ! ನನ್ನ ನಾಯಿಯ ಅತ್ಯಾಚಾರಕ್ಕಾಗಿ ನಾನು ತಮ್ಮ ಕ್ಷಮೆಯನ್ನು ಬೇಡುವವನಾಗಿರುವೆನು. ತಮ್ಮ ದುರವಸ್ಥೆಯನ್ನು ನೋಡಿ ನನಗೆ ದುಃಖವೂ ನಾಚುಗೆಯೂ ಉಂಟಾಗಿರುವುದು. ಪಿಸ್ತೂಲಿನ ಶಬ್ದವನ್ನು ಕೇಳಿ ಭೀತಿಗೊಂಡು ನಾಯಿಯು ತಮ್ಮಮೇಲೆ ಬಿದ್ದಿರಬೇಕು. ಬುದ್ಧಿಯಿಲ್ಲದ ಪ್ರಾಣಿಗಳ ಸ್ವಭಾವವೇ ಹೀಗೆ ! ತಮಗೆ ಹೆಚ್ಚಾದ ಅಪಾಯವೇನೂ ಉಂಟಾಗಲಿಲ್ಲವಷ್ಟೇ ? ಎಂದು ಕೇಳಿದನು.

ಸಂಗ್ರಾಮಸಿಂಹನು ನಾಯಿಗೆ ಅಷ್ಟಾಗಿ ಹೆದರದಿದ್ದರೂ ಅರಿಂದಮನು ತನ್ನನ್ನು ಎಲ್ಲಿ ಗುರುತಿಸುವನೋ ಎಂದು ಭೀತಿಗೊಂಡಿದ್ದನು. ಆದರೆ ಆ ಭೀತಿಯೂ ದೂರ ಸರಿದುದು. ಆ ಪ್ರದೇಶದಲ್ಲಿ ಆತನು ಅರಿಂದಮನನ್ನು ನೋಡುವುದಾಗಿ ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ. ಆತನನ್ನು ಪ್ರತ್ಯಕ್ಷದಲ್ಲಿ ನೋಡಿದ ಕೂಡಲೆ ಸಂಗ್ರಾಮಸಿಂಹನ ಮನಸ್ಸು ಚಂಚಲವಾಯಿತು. ಸಂಗ್ರಾಮನು ಮನಸ್ಸಿನ ಚಾಂಚಲ್ಯವನ್ನು ತನ್ನಲ್ಲಿಯೇ ಅಡಗಿಸಿಕೊಂಡು—ಮಹಾಶಯ! ನನಗೆ ಅಷ್ಟೇನೂ ಅಪಾಯವಾಗಲಿಲ್ಲ. ನಾನು ಎಲ್ಲಿಯೋ ನೋಡುತ್ತಿದ್ದುದರಿಂದ ನಾನು ದಾಯತಪ್ಪಿ ಬೀಳಬೇಕಾಯಿತು. ನಾಯಿಯು ಹೇಗೆ ಬಂದಿತೋ ಎಲ್ಲಿಂದ ಬಂದಿತೋ ನನಗೊಂದೂ ತಿಳಿಯದು. ನನ್ನ ವೇಷವನ್ನು ನೋಡಿ ಆರೋ ಹೊಸಬರಿರಬಹುದೆಂದು ತಿಳಿದು ಅದು ನನ್ನಮೇಲೆ ಬಿದ್ದಿರಬಹುದು. ಪ್ರಾಣಿಗಳ ಸ್ವಭಾವವನ್ನು ಬಲ್ಲವರಾರು ? ಎಂದು ಉತ್ತರನಿತ್ತನು.

ಸಂಗ್ರಾಮನು ಮಾತನಾಡುತ್ತಿರುವಲ್ಲಿ, ಅರಿಂದಮನು ಆತನನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತಿದ್ದನು. ಬೇಟೆಯ ಸಮಯದಲ್ಲಿ ಸಂಗ್ರಾಮನು ಸುಲೋಚನವನ್ನು ಉಪಯೋಗಿಸದೇ ಇದ್ದುದರಿಂದಲೂ, ಆ ಧ್ವನಿಯಿಂದಲೂ

ಆತನಾರಿರಬಹುದೆಂದು ತಿಳಿದುಕೊಂಡನು. ಹಿಂದೊಂದು ಸಲ ಶಾಂತಿಯಾ ಭಿಲ್ಲನು ವೀರವಿಕ್ರಮನ ಆಕ್ರಮಣ ಕಾಲದಲ್ಲಿ ಆತ್ಮಸಂರಕ್ಷಣೆಗಾಗಿ ಆ ನಾಯಿಯನ್ನು ಬಲವಾಗಿ ಪ್ರಹರಿಸಿದ್ದುದರಿಂದ, ಈಗ ಸಮಯ ಒದಗಿ ಬರಲು, ಮುಯ್ಯಿಗೆ ಮುಯ್ಯನ್ನು ತೀರಿಸಿಕೊಳ್ಳುವುದಕ್ಕೋಸ್ಕರ ತನ್ನ ನಾಯಿಯು ಆತನ ಮೇಲೆ ಬಿದ್ದಿತೆಂದು ಅರಿಂದಮನು ಭಾವಿಸಿಕೊಂಡನು. ವಾಸನೆ ಹಿಡಿದು ಕೆಲಸ ಮಾಡತಕ್ಕ ನಾಯಿಗಳು ಎಂದಿಗೂ ತಪ್ಪುದಾರಿಯಲ್ಲಿ ಹೋಗತಕ್ಕವುಗಳಲ್ಲ. ಅರಿಂದಮನು ಹೀಗೆ ಚಿಂತಿಸಿದ ಬಳಿಕ ಮತ್ತೊಂದು ಸಲ ಆತನ ಕ್ಷಮೆಯನ್ನು ಬೇಡಿ ತನ್ನವರಲ್ಲಿಗೆ ಬಂದನು. ಸಂಗ್ರಾಮಸಿಂಹನೂ ಬಂದ ದಾರಿಗೆ ಸುಂಕವಿಲ್ಲವೆಂದು ತಿಳಿದು ವಂದನ ಪ್ರತಿವಂದನಗಳಾದ ಬಳಿಕ ತನ್ನ ದಾರಿಹಿಡಿದು ತೆರಳಿದನು. ಅರಿಂದಮನು ಸಂಗ್ರಾಮಸಿಂಹನಿಗೆ ಕೇಳುವಹಾಗೆ ಗಟ್ಟಿಯಾಗಿ ದೇವೇಂದ್ರನನ್ನು—ಕುರಿತು ಮಗು! ನಾಯಿಯನ್ನು ಹಿಡಿದುಕೊಂಡಿರದೆ ಏನ ಕೆಲಸಮಾಡಿದೆ? ನಿನಗೆ ಕೊಂಚವಾದರೂ ಮಾನಮರ್ಯಾದೆಗಳಿಲ್ಲ. ಅಯ್ಯೋ ಪಾಪ! ಆ ಪರದೇಶದ ದೊಡ್ಡಮನುಷ್ಯರಿಗೆ ಎಷ್ಟು ಆಯಾಸವಾಯಿತೋ ಹೇಳುವುದಕ್ಕೆ ಸಾಗದು. ಆ ಸತ್ಪುರುಷರ ಇದಿರಿನಲ್ಲಿ ನನಗೆ ತುಂಬಾ ನಾಚುಗೆಯುಂಟಾಯಿತು. ನಿನ್ನ ಅವಿಚಾರದಿಂದ ಇಷ್ಟೆಲ್ಲಾ ಅನರ್ಥಗಳು ನಡೆದಿರುವ ಕಾರಣ ಇನ್ನುಮೇಲಾದರೂ ನಾಯಿಯನ್ನು ಸಿಕ್ಕಿದ ಕಡೆ ಬಿಡದಂತೆ ಎಚ್ಚರದಿಂದಿರು, ಎಂದು ಬುದ್ಧಿವಾದವನ್ನು ಹೇಳಿದನು.

ಅತ್ತಕಡೆ ಸಂಗ್ರಾಮಸಿಂಹನು ಕಲ್ಯಾಣಮಲ್ಲನಿದ್ದಲ್ಲಿಗೆ ಹೊರಟನು. ಇತ್ತಕಡೆ ರಾಜಮಾರ್ತಂಡನು ತನ್ನ ಪರಿವಾರವನ್ನು ಕರೆದುಕೊಂಡು ಹಿಂದಿರುಗಿ ಬರುತ್ತಾ ದಾರಿಯಲ್ಲಿ—ಅರಿಂದಮ ಮಹಾಶಯ! ನಿಮ್ಮ ನಾಯಿಯು ನಡೆಯಿಸಿದ ಕೃತ್ಯವನ್ನು ನೋಡಿ ನನಗೆ ತುಂಬಾ ಆಶ್ಚರ್ಯವುಂಟಾಯಿತು. ನಾಯಿಯು ಹಾಗೆ ಮಾಡಲು ಕಾರಣವೇನು? ಎಂದು ಆದರದಿಂದ ಪ್ರಶ್ನೆಮಾಡಿದನು.

ಅರಿಂದಮ—(ನಗುತ್ತಾ) ಮಹಾಶಯ! ಎಲ್ಲವನ್ನೂ ಕೇಳುವುದಾದರೆ ತಾವು ಮತ್ತಷ್ಟು ಆಶ್ಚರ್ಯಪಡುವಿರಿ. ನಾವು ಈದಿನ ಬೇಟೆಗೆ ಬಂದುದರಿಂದ ಎಷ್ಟೋ ಪ್ರಯೋಜನವಾಯಿತು. ಆದರೆ ನಾವು ಮನೆಗೆ ಹೋಗುವುದರೊಳಗಾಗಿ ನಾಲ್ಕಾರು ಸಲ ಪಿಸ್ತೂಲನ್ನು ಹಾರಿಸಬೇಕಾಗುವುದು. ನಾವು ತಟ್ಟನೆ ಬೇಟೆಯನ್ನು ನಿಲ್ಲಿಸಿಬಿಡುವುದಾದರೆ, ಸಂಗ್ರಾಮಸಿಂಹನಿಗೆ ನಮ್ಮಲ್ಲಿ ಸಂಶಯ ತೋರಿಬರುವುದಕ್ಕೆ ಆಸ್ಪದವಾಗುವುದು.

ರಾಜ—ಸಂದೇಹಕ್ಕೆ ಕಾರಣವೇನು? ಆತನಾರು? ಆತನನ್ನು ನೀವೇನಾದರೂ ಬಲ್ಲಿರಾ?

ಅರಿಂದಮ—ನಾವು ಬೇಟೆಗಲ್ಲದೆ ಮತ್ತಾವುದೋ ಉದ್ದೇಶದಿಂದ ಇಲ್ಲಿಗೆ ಬಂದಿರುವುದಾಗಿ ಆತನು ತಿಳಿದುಕೊಳ್ಳುವನು. ಆತನು ಸಾಮಾನ್ಯನಲ್ಲದ ಪ್ರಚಂಡಧೂರ್ತನು. ಆತನನ್ನು ನಾನು ಬಲು ಚೆನ್ನಾಗಿಯೂ ಬಲ್ಲೆನು. ನಾನು ಆತನನ್ನು ದಸ್ತಗಿರಿ ಮಾಡಬೇಕೆಂದು ಎಷ್ಟೋಸಲ ಪ್ರಯತ್ನಮಾಡಿದೆನು. ನನ್ನ ಪ್ರಯತ್ನವೊಂದೂ ಸಫಲವಾಗಲಿಲ್ಲ. ಸಂಗ್ರಾಮಸಿಂಹನು ಆರೋ ಎಂದು ತಾವು ಉದಾಸೀನರಾಗಿರತಕ್ಕುದಲ್ಲ. ಸಂಗ್ರಾಮಸಿಂಹನೇ ಜಗತ್ಪ್ರಸಿದ್ಧನಾದ ಚೋರಾಗ್ರೇಸರ ಚಕ್ರವರ್ತಿಯೆನಿಸಿದ ತಾಂತಿಯಾಭಿಲ್ಲನು. ತಾವು ತಾಂತಿಯಾ ಭಿಲ್ಲನೆಂದು ಕೇಳಿ ಅರಿಯಿರಾ? ನಮ್ಮ ಭರತಖಂಡದಲ್ಲಿ ಇಂತಹ ಜಗದೇಕ ವೀರನು ಹಿಂದೆ ಹುಟ್ಟಲಿಲ್ಲ, ಮುಂದೆ ಹುಟ್ಟುವುದೂ ಇಲ್ಲ. ನಾನು ಈತನನ್ನು ಆವುದರೊಡನೆ ಹೋಲಿಸಬೇಕೋ ಅಂತಹ ಉಪಮಾನ ಸಾಮಗ್ರಿಯೇ ನನಗಿನ್ನೂ ದೊರೆತಿಲ್ಲ. ಆತನಿಗೆ ಅಸಾಧ್ಯವಾದ ಕೆಲಸವೆಂಬುದಿಲ್ಲ; ಆತನು ಮಾಡಬಾರದ ಕೆಟ್ಟಕೆಲಸವಿಲ್ಲ; ದೃಢವಾದ ಕಾರಾಗಾರವೂ ಈತನನ್ನು ನಿರ್ಬಂಧಿಸಲಾರದು. ಅಸ್ತ್ರಶಸ್ತ್ರಗಳೆಲ್ಲವೂ ಇವನ ಚಾತುರ್ಯಕ್ಕೆ ಹಿಮ್ಮೆಟ್ಟಿಹೋಗಿರುವುವು. ಈತನ ಬುದ್ಧಿಯನ್ನು ಅಳೆದವರಾರೂ ಇಲ್ಲ; ಈತನ ನೈಪುಣ್ಯದ ಆಳವನ್ನು ಕಂಡವರಾರೂ ಇಲ್ಲ, ಈತನ ಮೋಸದ ಪರಿಪಾಟಿಯನ್ನು ಭೇದಿಸಿದವರಾರೂ ಇಲ್ಲ, ಈತನನ್ನು ಇದಿರಿಸಿ ಬದುಕಿದವರಾರೂ ಇಲ್ಲ. ಈತನಿಗೆ ಪೋಲೀಸಿನವರು ಹೆದರುವರು, ಸರಕಾರದವರು ಹೆದರುವರು, ದುಷ್ಟರು ಹೆದರುವರು, ಶಿಷ್ಟರು ಹೆದರುವರು,—ಎಂದಮೇಲೆ ವಿಶಿಷ್ಟರೂ ಹೆದರಿಹೆದರಿ ಸಾಯುವರು. ಈತನನ್ನು ಹಿಡಿದು ದಂಡಿಸುವುದಕ್ಕಾಗಿ ಎಷ್ಟೋ ಜನ ಪತ್ತೇದಾರರು ತಾಂತಿಯನ ಗುಡ್ಡು ಬೆದರಿಕೆಯಿಂದಲೇ ತತ್ತರಿಸಿಹೋದರು. ಶೂರ ಧೀರ ವೀರರೆಂದು ಹೊಗಳಿಸಿಕೊಂಡಿದ್ದ ಎಷ್ಟೋ ಜನರು ಈತನನ್ನು ಕಂಡೊಡನೆಯೇ ಮೂರ್ಛೆಯಿಂದ "ಪಪಾತ ಧರಣೀ ತಲೇ" ಎಂಬಂತಾಗಿ ಹೋಗಿರುವರು. ಈತನನ್ನು ಪತ್ತೇ ಮಾಡುವ ಕಾರ್ಯಭಾರವು ಈಗ ನನ್ನ ಹೆಗಲೇರಿರುವುದು. ನನಗೆ ಇದು ವಿನಾಶ ಕಾಲವೋ—ಇಲ್ಲವೇ, ವಿಕಾಶಕಾಲವೋ ಗೊತ್ತಿಲ್ಲ. ನಾನೇನೋ ಹಾವಿನ ಹುತ್ತದಲ್ಲಿ ಕೈಹಾಕಿದೆನು. ನಾನು ಎದೆ ನೀವಿಕೊಂಡೇ ಈತನೊಡನೆ ಹೋರಾಡಬೇಕಾಗಿರುವುದು. ಈತನು ನನಗೆ ಎಷ್ಟೋಸಲ ಚೆಳ್ಳೇಹಣ್ಣನ್ನು ತಿನ್ನಿಸಿರುವನು. ಈತನ ಸುದ್ದಿಯೇ ಬೇಡವೆಂದು ನಾನು ಬಿಡುವುದಾದರೂ ಆತನು ಬೆನ್ನಹತ್ತಿದ ಬೇತಾಳನಂತೆ ನನ್ನನ್ನು ಬಿಡಲೊಲ್ಲನು. ಒರಳಲ್ಲಿ ತಲೆಕೊಟ್ಟುದಾಯಿತು, ಒನಕೆಯೇಟು ಬೇಡವೆಂದರೆ ತಪ್ಪೀತೇ!

ರಾಜ—(ಭಯದಿಂದ ಕುಗ್ಗಿದವನಾಗಿ) ಮಹಾಶಯ! ಆತನು ಇಲ್ಲಿಗೆ

ಬಂದಿದ್ದಾಗ, ಅನಾಯಾಸದಿಂದ ಆತನನ್ನು ಹಿಡಿಯಬಹುದಾಗಿತ್ತಲ್ಲ; ಇಂತಹ ಸುಯೋಗವನ್ನು ನೀವೇಕೆ ಕಳೆದುಕೊಳ್ಳೋಣವಾಯಿತು?

ಅರಿಂದಮ—ಈತನ ವಿಷಯದಲ್ಲಿ ಮುಟ್ಟಿಗೆ ಮಾಡುವುದು ಹೇಳುವಷ್ಟು ಸುಲಭವಲ್ಲ. ಆತನ ದೇಹಶಕ್ತಿಯು ಅಪರಿಮಿತವಾದುದು. "ಮಹಾಗಜಾಃ ಪಲಾಯಂತೇ। ಮಶಕಾನಾಂತು ಕಾಕಥಾ" ಎಂತೆಂತಹ ಆನೆಗಳೋ ಓಡಿ ಹೋಗಿರುವಲ್ಲಿ ನಮ್ಮಂತಹ ಸೊಳ್ಳೆಗಳ ಪಾಡೇನು? ಇಂತಹವರನ್ನು ಯುಕ್ತಿ ಯಿಂದ ಸಿಕ್ಕಿಸಿಕೊಳ್ಳಬೇಕೇ ಹೊರತು ಶಕ್ತಿಯಿಂದಲ್ಲ.

ಈಗ ಈತನು ಕಲ್ಯಾಣಮಲ್ಲನ ಹೆಗಲೇರಿರುವನು. ಇದರಲ್ಲಿ ಆತನಿಗೆ ಏನೋ ಉದ್ದೇಶವಿರಬೇಕು. ಕೈಗೆ ಸಿಕ್ಕಿದನೆಂದು ನಾವು ದುಡುಕಿ ದಸ್ತಗಿರಿ ಮಾಡುವು ದಾದರೆ ಈ ರಹಸ್ಯವನ್ನು ಭೇದಿಸುವುದಕ್ಕಾಗಲಾರದು. ಇದಕ್ಕಾಗಿಯೇ ನಾನು ಆತನನ್ನು ಕಾಣದವನಂತೆಯೇ ನಟನೆಮಾಡಿರುವೆನು. ನಾವು ಆಲೋಚಿಸಿರು ವಂತೆ ಕಲ್ಯಾಣಮಲ್ಲನಿಗೆ ಈತನೇ ಬುದ್ಧಿಗಲಿಸುವುದಾದರೆ ನಮಗೆ ಆ ಶ್ರಮವೇ ತಪ್ಪಿದಂತಾಗುವುದು. ಅಂತೂ ಕಲ್ಯಾಣಮಲ್ಲನ ಗ್ರಹಗತಿಗಳು ಉಚ್ಚವಾಗಿರ ಲಿಕ್ಕಿಲ್ಲ. ಮೊದಲು ದುಷ್ಟರಿಂದ ದುಷ್ಟರ ದಮನವಾಗಲಿ, ಬಳಿಕ ದುಷ್ಟರನ್ನು ನಿಗ್ರಹಿಸುವುದು ನಮ್ಮಗಳ ಜನ್ಮ ವ್ರತವೇ ಆಗಿರುವುದು.

ರಾಜ—ನನಗಾದರೋ ಪತ್ತೇದಾರರ ಊಹಾಪೋಹಜ್ಞಾನವಾಗಲಿ, ಕಲಾಕೌಶಲವಾಗಲಿ, ಕಾರ್ಯಕ್ರಮೋಪಕ್ರಮವಾಗಲಿ ಒಂದೂ ಗೊತ್ತಾಗು ವುದಿಲ್ಲ. ಇದನ್ನು ಕುರಿತು ನಾನು ತಮ್ಮಲ್ಲಿ ಚರ್ಚಿಸುವುದು ಅಸಂಗತವಾದುದು. ಆದರೆ ತಾವು ನನಗೆ ಏನ ಮಾಡಬೇಕೆಂದು ಹೇಳುವುದಾದರೂ, ನಾನು ಬಾಯ ಮುಚ್ಚಿಕೊಂಡು ಅದರಂತೆಯೇ ನೆರವೇರಿಸುವೆನು. ಇದು ಹೊರತಾಗಿ ನನಗೆ ಮತ್ತಾವುದೂ ಗೊತ್ತಾಗದು.

ಅರಿಂದಮ—(ನಗುತ್ತಾ) ಅದಕ್ಕಿಂತಲೂ ಹೆಚ್ಚಾಗಿ ತಮ್ಮಿಂದ ನಾನು ಮತ್ತೇನನ್ನೂ ಬಯಸತಕ್ಕವನಾಗಿಲ್ಲ.

ಈ ಮಾತುಗಳು ನಡೆದ ಮೇಲೆ ಎಲ್ಲರೂ ಮಧ್ಯಾಹ್ನದ ಭೋಜನಕ್ಕಾಗಿ ಒಂದು ವಿಶಾಲವಾದ ಮರದ ನೆಳಲಿನಲ್ಲಿ ಕುಳಿತುಕೊಂಡರು.

* * * *

ತಾಂತಿಯಾಭಿಲ್ಲನು ಚಿಂತಾಕುಲನಾಗಿ ಕಲ್ಯಾಣಮಲ್ಲನ ಅರಣ್ಯಮಂದಿರದಲ್ಲಿ ಪ್ರವೇಶಮಾಡಿದನು. ವಿಷಾದ ರೇಖೆಯು ಸಂಗ್ರಾಮನ ಮುಖಮಂಡಲವನ್ನು

ಆವರಿಸಿದ್ದುದರಿಂದ ವೈದ್ಯವಾಗೀಶನು—ಮಹಾಶಯ! ತಾವು ಸೊಕ್ಕಿ ಸೊರಗಿ ಹೋದಂತಿದೆ. ಕಾರಣವೇನು? ಎಂದು ಕೇಳಿದನು.

ಸಂಗ್ರಾಮ— (ವಿಷಣ್ಣನಾಗಿ) ಈಗ ಅದನ್ನು ಕುರಿತು ಮಾತನಾಡ ಬೇಕಾದುದೇನೂ ಇರುವುದಿಲ್ಲ. ಒಂದು ವೇಳೆ ಅದರ ಕಾರಣವನ್ನು ಕೇಳುವು ದಕ್ಕೆ ಕುಳಿತರೆ ನಿಮ್ಮ ಕೈಕಾಲುಗಳು ಬಿದ್ದುಹೋಗುವುವಲ್ಲದೆ, ಎದೆಯು ಒಡೆದೇ ಹೋಗುವುದು. ಅಂತೂ ಕಾಲವು ವಿಪರೀತವಾಗಿ ಪರಿಣಮಿಸುವುದಕ್ಕೆ ಬಂ ದಿರುವುದು.

ವಾಗೀಶ—(ಭಯದಿಂದ ತತ್ತರಗುಟ್ಟುತ್ತಾ) ನೂತನ ವಿಪತ್ತುಗಳೇನಾ ದರೂ ಇಣಿಕಿನೋಡುತ್ತಿರುವುವೇನು?

ಸಂಗ್ರಾಮ—ಈ ವಿಷಯವನ್ನು ಕುರಿತು ನಿಮಗೆ ಏಕಾಂತದಲ್ಲಿ ಹೇಳು ವೆನು. ಮುಖ್ಯವಾಗಿ ನಮ್ಮೆಲ್ಲರಿಗೂ ವಿನಾಶಕಾಲವು ಒದಗಿ ಬಂದಂತಿದೆ.

ಕಲ್ಯಾಣಮಲ್ಲನು ಆವ ಮಾತನ್ನೂ ಆಡದೆ ಕೊಂಚ ದೂರದಲ್ಲಿ ಒಂದು ಚೌಪದಿಯ ಮೇಲೆ ಕುಳಿತುಕೊಂಡು ವಿಷಣ್ಣನಾಗಿ ಏನೇನನ್ನೋ ಚಿಂತಿಸುತ್ತಿ ದ್ದನು. ಆತನ ಚಿಂತೆಗೆ ಆವಾವುದೋ ಕಾರಣಗಳಿದ್ದುವು. ತಾಂತಿಯಾ ಭಿಲ್ಲನು ಭಯವನ್ನು ತೋರ್ಪಡಿಸಿ ಅದೇ ದಿನದ ಬೆಳಗ್ಗೆ ಒಂದು ಲಕ್ಷರೂಪಾಯಿಗಳನ್ನು ಹೇಗೋ ಬರಮಾಡಿಕೊಂಡಿದ್ದನು. ಗಳಿಸಿಟ್ಟ ಹಣವು ಕೈಬಿಡುವುದಾದರೆ ಮನು ಷ್ಯನ ಚಿಂತೆಗೆ ತುದಿಮೊದಲಾವುದಿರುವುದು?

ಭೋಜನಕ್ಕೆ ಸಿದ್ಧವಾದುದು. ಎಲ್ಲರೂ ತಮ್ಮತಮ್ಮ ಸ್ಥಾನದಲ್ಲಿ ಊಟಕ್ಕೆ ಕುಳಿತುಕೊಂಡರು. ಆಗ ವೈದ್ಯವಾಗೀಶನು ಸಂಗ್ರಾಮಸಿಂಹನನ್ನು ಕುರಿತು— ಮಹಾಶಯ! ಇಲ್ಲಿ ನಾವು ಮೂವರಲ್ಲದೆ ಮತ್ತಾರೂ ಇರುವುದಿಲ್ಲ. ತಾವು ಗುಟ್ಟಿನ ಸುದ್ದಿಯನ್ನು ಹೇಳಬಹುದು. ಕೇಳಬಾರದ ಹೊಸಬರಾರೂ ಇಲ್ಲಿರುವು ದಿಲ್ಲ. ನಾಯಿಯು ನಿಮ್ಮನ್ನು ಆಕ್ರಮಣಮಾಡಿದ ಮೇಲೆ ನಿಮ್ಮ ರೂಪವೇ ವ್ಯತ್ಯಸ್ತವಾಗಿ ಹೋಗಿರುವುದು. ನಾಯಿಯು ನಿಮ್ಮನ್ನು ಕಚ್ಚಿ ತೊಂದರೆ ಪಡಿಸ ಲಿಲ್ಲವಷ್ಟೇ? ಹಾಗಾದರೆ ಇಷ್ಟು ದುಶ್ಚಿಂತೆಗೆ ಕಾರಣವೇನು? ಎಂದು ಪ್ರಶ್ನೆ ಮಾಡಿದನು.

ಸಂಗ್ರಾಮ— ನಾಯಿಯ ಮಾತು ಹಾಗಿರಲಿ; ನಾಯಿಯು ಆರದೆಂಬು ದನ್ನೇನಾದರೂ ನೀವು ಬಲ್ಲಿರಾ? ಅರಿಂದಮನೆಂಬುವನೇ ಆ ನಾಯಿಯ ಯಜ ಮಾನನು. ಜಸವಡೆದ ಪತ್ತೇದಾರನಾದ ಅರಿಂದಮನನ್ನು ಈ ಖಂಡದಲ್ಲಿ ಕಾಣ

ದವರಾರಿರುವರು? ನನಗೆ ಈತನಂತಹ ಶತ್ರುವು ಲೋಕದಲ್ಲಿ ಬೇರೊಬ್ಬನಿಲ್ಲ. ನನ್ನ ಕೌಶಲವೆಲ್ಲವೂ ಆತನ ಮುಂದೆ ಬೂದಿಯಲ್ಲಿ ಹೋಮಮಾಡಿದಂತೆಯೇ ಸರಿ. ನನಗೆ ಶನಿಯು ಆವಾಗಲೂ ವಕ್ರಿಸಿಯೇ ಇರುವುದರಿಂದ ಈತನೇ ನನ್ನ ಬೆನ್ನ ಹತ್ತಿದ ಬೇತಾಳನು.

ವೈದ್ಯನು ಈ ಮಾತನ್ನು ಕೇಳಿದ ಕೂಡಲೆ ಥರಥರನೆ ನಡುಗುತ್ತಾ— ಶ್ರೀಕುಮಾರನು ಬದುಕಿರುವ ಸುದ್ದಿಯೇನಾದರೂ ಅರಿಂದಮನಿಗೆ ಗೊತ್ತಾಗಿರಬಹುದೇ? ಹಾಗೇನಾದರೂ ಆತನಿಗೆ ಗೊತ್ತಾಗಿದ್ದ ಪಕ್ಷದಲ್ಲಿ ನಮಗೆ ಈ ಲೋಕದಲ್ಲಿ ಉತ್ತಾರಣೆಯೆಂಬುದೇ ಇಲ್ಲ. ನಾನು ಈಗಲೇ ಎಲ್ಲಿಗಾದರೂ ಓಡಿಹೋಗಿ ತಲೆಯನ್ನು ಉಳಿಸಿಕೊಳ್ಳಬೇಕು, ಎಂದು ನುಡಿದ ಮಾತನ್ನು ಕೇಳಿ ಕಲ್ಯಾಣಮಲ್ಲನು ಬೆಚ್ಚಿ ಬೆದರಿದವನಾಗಿ ಎದ್ದು ನಿಂತನು. ಸಂಗ್ರಾಮಸಿಂಹನು ಆತನನ್ನು ಹಿಡಿದು ಕುಳ್ಳಿರಿಸಿ ದೃಢವಾದ ಸ್ವರದಿಂದ ಇಂತೆಂದನು :— "ಹುಚ್ಚನಂತಾಡಬಾರದು. ನೀವು ನನ್ನನ್ನು ಕೊಲ್ಲುವುದಕ್ಕಾಗಿ ಕುತಂತ್ರವನ್ನು ಮಾಡಿರಲಿಲ್ಲವೇ? ಅದರ ಮರ್ಮವನ್ನು ಭೇದಿಸುವುದಕ್ಕಾಗಿ ಆತನು ಬಂದಿರುವನು. ಈ ಸಂದರ್ಭದಲ್ಲಿ ಆತನಿಗೆ ಇದಲ್ಲದೆ ಮತ್ತಾವ ಉದ್ದೇಶವೂ ಇರುವುದಿಲ್ಲ. ಆತನು ಕೆಲಸಕ್ಕೆ ಕೈಹಾಕಿದ ಮೇಲೆ ಪರಿಣಾಮವು ಏನಾಗುವುದೆಂಬುದನ್ನು ನಾನು ತಮಗೆ ವಿವರಿಸಬೇಕಾದುದೇನೂ ಇರುವುದಿಲ್ಲ. ಕೆದಕಿದಷ್ಟೂ ಹುಣ್ಣು ದೊಡ್ಡದಾಗುವುದೇ ಹೊರತು ಅದು ಮಾಗುವ ಸಂಭವವೇ ಇರುವುದಿಲ್ಲ. ಇಂದಿರಾಕಾಂತನನ್ನು ಕೊಲ್ಲುವುದಕ್ಕೆ ಯತ್ನಮಾಡಿದವರು ನೀವೇ ಎಂದು ಆತನು ಸಿದ್ಧಾಂತಪಡಿಸಿಕೊಂಡು ನಿಮ್ಮನ್ನು ಬೆನ್ನಟ್ಟಿರುವನು. ನೀವು ನನ್ನನ್ನು ಕೊಲ್ಲುವುದಕ್ಕೆ ಮಾಡಿದ ಪ್ರಯತ್ನವು ಬೇರೊಂದೆಡೆಯಲ್ಲಿ ಫಲಿಸಿರುವುದರಿಂದ, ಇದರ ಮೂಲವನ್ನು ಕಂಡುಹಿಡಿಯಬೇಕೆಂಬುದೇ ಆತನ ಪರಮಧ್ಯೇಯವಾಗಿರುವುದು. ಇದರಿಂದ ಆವಾವ ಅನರ್ಥಗಳು ಸಂಭವಿಸುವುವೋ ದೇವರೊಬ್ಬನೇ ಬಲ್ಲನು?" ಎಂದು ಅಪ್ರಿಯವಾದ ಮಾತುಗಳನ್ನಾಡಿದನು.

ವಾಗೀಶ— ಆತನು ಧೂರ್ತನಾಗಿರಬಹುದು. ನಮ್ಮ ಗುಟ್ಟು ಆತನಿಗೆ ಹೇಗೆ ಗೊತ್ತಾಗಬೇಕು? ನಾವೇ ಅಪರಾಧಿಗಳೆಂದು ಅವನಿಗೆ ಸರಿಯಾದ ಪ್ರಮಾಣಗಳು ಎಲ್ಲಿಂದ ದೊರೆಯಬೇಕು? ನಾವು ಸಿಕ್ಕಿಕೊಳ್ಳುವಹಾಗೆ ಕೆಲಸವನ್ನು ಎಂದಿಗೂ ಮಾಡಿಲ್ಲವಾಗಿ ಅವ ಪ್ರಮಾಣವೂ ಸಿಕ್ಕಲಾರದು.

ಸಂಗ್ರಾಮ— ನಿಮ್ಮ ಬುದ್ಧಿಯು ಎಷ್ಟುದೂರ ಓಡುವುದೋ, ಆತನ ಬುದ್ಧಿಯು ಅದಕ್ಕಿಂತಲೂ ಶತಾಧಿಕವಾಗಿ ಓಡುವುದು. ಆತನ ಶಕ್ತಿಯ ಪರಿಚಯವು ನಿಮಗಿನ್ನೂ ಉಂಟಾಗಿಲ್ಲವೆಂದು ತೋರುವುದು. ಆತನು ಕೆಲಸಕ್ಕೆಂದು

ಕೈ ಹಾಕಿದ ಮೇಲೆ ಫಲವನ್ನು ಕಾಣದೇ ಎಂದಿಗೂ ಹಿಂದಿರುಗತಕ್ಕವನಲ್ಲವೆಂಬು ದನ್ನು ನೀವು ಚೆನ್ನಾಗಿಯೂ ಅರಿತುಕೊಳ್ಳಬೇಕು. ಆತನು ನನಗೆ ಪರಮ ಶತ್ರುವು. ಹೇಗಾದರೂ ಮಾಡಿ ಆತನನ್ನು ನಿರ್ಮೂಲಮಾಡಬೇಕೆಂಬ ಸಂಕ ಲ್ಪವು ನನಗೆ ಒಂದುಕಡೆಯಲ್ಲಿ ಇದ್ದೇ ಇರುವುದು. ಆದರೆ ನಾನು ಆತನನ್ನು ಇತರರಂತೆ ಭಾವಿಸಿಕೊಂಡು ಸ್ಮೈಮರೆತಿರಲಾರೆನು.

ವಾಗೀಶ— ನೀವು ಹೇಳುವಂತೆ ಆತನು ದೃಢಸಂಕಲ್ಪವುಳ್ಳವನಾದರೆ, ಪ್ರಮಾಣಗಳನ್ನು ಸಂಗ್ರಹಿಸುವುದಕ್ಕಾಗಿ ನಮ್ಮ ಸೌಭಾಗ್ಯಮಂದಿರಕ್ಕೆ ಬಾರದಿರನು. ಆತನು ನಮ್ಮಲ್ಲಿಗೆ ಬಂದನೆಂದರೆ ಮತ್ತೆ ಅಲ್ಲಿಂದ ಹಿಂದಿರುಗಿ ಹೋಗಲಾರನು. ಇದು ಎಂದಿಗೂ ಸುಳ್ಳಾಗಲಿಕ್ಕಿಲ್ಲ. ಬಳಿಕ ನಮ್ಮ ರೊಟ್ಟೆ ಜಾರಿ ತುಪ್ಪದಲ್ಲಿ ಬಿದ್ದಂತಾಗುವುದು. ಆತನು ನಮ್ಮಲ್ಲಿಗೆ ಬರಲೇ ಇಲ್ಲವೆನ್ನಿಸಿಬಿಡುವೆನು.

ಸಂಗ್ರಾಮ—(ಹೀಯಾಳಿಸುತ್ತಾ) ತಾವು ಆರ ವಿಷಯವನ್ನು ಕುರಿತು ಮಾತನಾಡುತ್ತಿರುವಿರಿ, ಮಹಾಶಯ? ಅರಿಂದಮನನ್ನು ನಿಮ್ಮಲ್ಲಿಗೆ ಬರಲೇ ಇಲ್ಲವೆನ್ನಿಸಿಬಿಡುವಿರಾ? ಆತನನ್ನು ಶ್ರೀಕುಮಾರನೆಂದು ತಿಳಿದಿರುವಿರಾ, ಹೇಗೆ? ಹುಚ್ಚರ ವೈದ್ಯಶಾಲೆಯನಿಟ್ಟ ನೀವೂ ಹುಚ್ಚರಾಗಿಯೇ ಹೋಗಿರುವಿರಿ. ಅರಿಂ ದಮನನ್ನು ನೀವು ನಿರ್ಬಂಧಿಸಿದ ಕೂಡಲೆ ರಾಜ್ಯದಲ್ಲೆಲ್ಲಾ ಹಾಹಾಕಾರವೆದ್ದು ಲೋಕವನ್ನು ಆವ ರೀತಿಗೆ ತಿರುಗಿಸಿಬಿಡುವುದೋ ಕಂಡವರಾರು? ಆರೂ ಯೋಗ್ಯ ತೆಗೆ ಮೀರಿದಮಾತುಗಳನ್ನಾಡಿ ಬಾಯನ್ನು ನೋಯಿಸಿಕೊಳ್ಳಬಾರದು. ಅರಿಂ ದಮನು ಆತ್ಮರಕ್ಷಣೆಗೆ ಬೇಕಾದ ಹಾಗೆ ಆನುಕೂಲ್ಯವನ್ನು ಕಲ್ಪಿಸಿಕೊಳ್ಳದೆಯೇ ನಿಮ್ಮಲ್ಲಿ ಬರುವಷ್ಟು ದಡ್ಡನಲ್ಲ. ಬೆಂಕಿಯೊಡನೆ ಸರಸವಾಡುವುದೇ!

ವಾಗೀಶ— ನಾವು ನಮ್ಮ ಕಾರ್ಯಕ್ಕಾಗಿ ಆತನನ್ನು ನಿರ್ಬಂಧಪಡಿಸಿ ಆತನಿಂದ ಒಪ್ಪಿಗೆಯನ್ನು ಪಡೆದುಕೊಂಡ ಕೂಡಲೆ ಬಿಟ್ಟುಬಿಡುವೆವು. ಆತನು ಒಪ್ಪಿದ ಮೇಲೆ ಅದಕ್ಕೆ ಪ್ರತಿಯಾಗಿ ನಡೆಯಲಾರನು. ನಾವು ಈ ಮಾರ್ಗವನ್ನು ಅವಲಂಬಿಸುವುದರಿಂದ ಆರಿಗೇನು ತೊಂದರೆಯಾಗುವುದು? ಈ ಆಲೋಚನೆ ಹೇಗಿದೆ?

ಸಂಗ್ರಾಮ—ಇಂತಹ ವ್ಯರ್ಥವಾದ ಮಾತುಗಳಿಂದ ಕಾಲವನ್ನು ಕಳೆ ವುದಕ್ಕಾಗಿ ನಾವು ಇಲ್ಲಿಗೆ ಬಂದಿಲ್ಲ. ನಿಮಗೂ ಆತನಿಗೂ ಅಜಗಜ ನ್ಯಾಯದಂತೆ ಅಂತರವಿರುವುದು. ಆತನು ಸಾಯುವುದಾದರೂ ತನ್ನ ದೃಢ ಸಂಕಲ್ಪವನ್ನು ತ್ಯಾಗಮಾಡಲೊಲ್ಲನು. ಅಲ್ಲದೆಯೂ ನೀವು ಆತನನ್ನು ಎಂದಿಗೂ ನಿರ್ಬಂಧ ಪಡಿಸಲಾರಿರಿ.

ವಾಗೀಶ—ಸಂಗ್ರಾಮ ಮಹಾಶಯ ! ನಮ್ಮ ಶಕ್ತಿ ಎಷ್ಟರದೆಂಬುದು ನಿಮಗೂ ತಿಳಿಯದೆಂದೇ ಹೇಳಬೇಕು. ನಾನು ಎಷ್ಟೋ ದೇಶಗಳನ್ನು ಸಂಚಾರ ಮಾಡಿ, ಎಷ್ಟೋ ದ್ರವ್ಯಗುಣದ ಸಂಬಂಧದಲ್ಲಿ ವಿಶೇಷವಾದ ಜ್ಞಾನವನ್ನು ಸಂಪಾದಿಸಿಕೊಂಡು ಬಂದಿರುವೆನು. ನನ್ನಲ್ಲಿ ವ್ಯರ್ಥವಾಗದ ಬಗೆಬಗೆಯ ಔಷಧಗಳಿರುವುವು. ಒಂದರ ಪ್ರಯೋಗದಿಂದ ಮನುಷ್ಯನು ಸಾಯುವನು, ಮತ್ತೊಂದರ ಪ್ರಯೋಗದಿಂದ, ಬುದ್ಧಿಯು ವಿಲೋಪಿಸಿ ಹೇಳಿದಂತೆ ಕೇಳುವನು, ಇನ್ನೊಂದರಿಂದ ಹುಚ್ಚಲ್ಲದವನು ಕೆಲವು ಕಾಲದ ವರೆಗೆ ಹುಚ್ಚನಾಗಿಬಿಡುವನು, ಮಗದೊಂದರಿಂದ ಹುಚ್ಚನು ಜಾಣನಾಗಿಬಿಡುವನು. ಇಂತಿಂತಹ ಅಮೂಲ್ಯವಾದ ಔಷಧಗಳೆಲ್ಲವೂ ನನ್ನಲ್ಲಿ ಬೇಕಾದಹಾಗಿರುವುವು. ನೀವು ನನ್ನ ಆತಿಥ್ಯವನ್ನು ಸ್ವೀಕರಿಸುವುದಕ್ಕೆ ಬಂದಿದ್ದ ಕಾಲದಲ್ಲಿ ನಾನು ಶ್ರೀಕುಮಾರನಿಗೆ ಹುಚ್ಚುಹಿಡಿಯುವ ಔಷಧವನ್ನು ಪ್ರಯೋಗಿಸಿದ್ದೆನು. ಕೆಲವು ದಿನಗಳ ವರೆಗೂ ಆತನ ಬುದ್ಧಿಯಲ್ಲಿ ವಿಕಾರವು ತೋರಿಬರುತ್ತಿದ್ದಿತು. ಅದೇ ಔಷಧವನ್ನು ಅರಿಂದಮನಿಗೂ ಪ್ರಯೋಗಿಸಿದರಾಯಿತು. ಮುಂದೆ ಆತನು ಪತ್ತೇದಾರಿಯ ಕೆಲಸವನ್ನು ಹೇಗೆ ಮಾಡುವನೋ ನೋಡುವೆನು.

ಸಂಗ್ರಾಮ— ಮಹಾಶಯ ! ನಿಮ್ಮಲ್ಲಿ ಇಷ್ಟು ಶಕ್ತಿಯಿರುವುದೇ ! ಜಾಣರನ್ನು ನಿಮಿಷಮಾತ್ರದಲ್ಲಿ ಹುಚ್ಚರನ್ನಾಗಿ ಮಾಡಬಲ್ಲಿರಾ ? ಎಂತಹ ಪಿಶಾಚರು ನೀವು ! ನನಗೆ ಅರಿಂದಮನಲ್ಲಿ ವಿಶೇಷವಾದ ದ್ವೇಷವಿರುವುದರಿಂದ, ನಾನು ಆತನನ್ನು ಹೇಗಾದರೂ ಮಾಡಿ ನಿರ್ಮೂಲಮಾಡಬೇಕೆಂದಿರುವೆನು. ಆತನನ್ನು ಧ್ವಂಸಮಾಡಿಬಿಡುವುದಕ್ಕೆ ಒಳ್ಳೆಯ ಉಪಾಯವು ಸಿಕ್ಕಿತು. ನೀವು ಬುದ್ಧಿಗೆಡಿಸಿ ಆತನನ್ನು ಮಂಕನನ್ನಾಗಿ ಮಾಡುವುದೂ ನನಗೆ ಸಮ್ಮತವು. ಆತನೊಬ್ಬನು ಕೆಟ್ಟರೆ ನಮ್ಮಂಥವರು ಅನೇಕರು ಹೇಗಾದರೂ ಬದುಕಿಕೊಂಡಾರು.

ವಾಗೀಶ—ಆತನನ್ನು ಸಂಹರಿಸುವುದು ನಿಮಗೂ ಇಷ್ಟವಾಗಿರುವ ಪಕ್ಷದಲ್ಲಿ, ನಾನು ಔಷಧವನ್ನು ಪ್ರಯೋಗಿಸುವೆನು. ಆವ ಪೋಲೀಸಿನವರು ಬಂದು ಹೇಗೆ ಪತ್ತೆ ಮಾಡುವರೋ ನೋಡುವ.

ಸಂಗ್ರಾಮ—(ಕ್ಷಣಕಾಲ ಚಿಂತಿಸಿ) ಸ್ವಾರ್ಥಪರಾಯಣತೆಯಲ್ಲಿ ನಾವು ಮೂವರೂ ಸಮಾನರು. ನಮ್ಮಲ್ಲಿ ಒಬ್ಬನ ಗುಟ್ಟನ್ನು ಮತ್ತೊಬ್ಬನು ಬಹಿರಂಗಪಡಿಸಲಾಗದು. ವಿಪತ್ತು ಬರುವುದಾದರೆ ಮೂವರೂ ಸೇರಿಕೊಂಡು ಅದರ ನಿವಾರಣೋಪಾಯವನ್ನು ಕಂಡುಹಿಡಿದು ಆತ್ಮವನ್ನು ರಕ್ಷಿಸಿಕೊಳ್ಳಬೇಕು. ನಮ್ಮ ನಮ್ಮಲ್ಲಿ ಕಲಹಗಳಿಗೆ ಎಡೆಗುಡದೆ ಒಂದೇ ಅಭಿಪ್ರಾಯದಿಂದ ನಾವು ಕಾರ್ಯಗಳಲ್ಲಿ ಮುಂದುವರಿಯುತ್ತಿರಬೇಕು.

ಈಗ ಅರಿಂದಮನು ನಮ್ಮ ಮೂವರಿಗೂ ಸಮಾನವಾದ ಶತ್ರುವು. ಹೇಗಾದರೂ ಮಾಡಿ ಆತನನ್ನು ಧ್ವಂಸಮಾಡಬೇಕೆಂಬುದೇ ನಮ್ಮಗಳ ಅಭಿಮತವು. ಇದೆಲ್ಲವೂ ನಮ್ಮಗಳ ಅಭಿಪ್ರಾಯವಾಗಿರುವುದು. ಆತನ ಅಭಿಪ್ರಾಯವನ್ನು ನಾವು ತಿಳಿದುಕೊಳ್ಳದೆಯೇ ದುಡುಕಿ ಕೆಲಸಮಾಡಬಾರದು. ಆತನು ನಮ್ಮಮೇಲೆ ದ್ವೇಷವನ್ನು ಸಾಧಿಸದಿದ್ದ ಪಕ್ಷದಲ್ಲಿ ನಾವು ಆತನನ್ನು ಕೊಂದು ಸಲ್ಲದ ಪಾಪಕ್ಕೆ ಏಕೆ ಗುರಿಯಾಗಬೇಕು. ಆತನು ನಮ್ಮ ಗೋಜಿಗೆ ಬರದೆ ಬೇಕಾದ ಕೆಲಸವನ್ನು ಮಾಡಿಕೊಂಡು ಬದುಕಿರಲಿ. ಆತನು ನಮ್ಮನ್ನು ಕೆಣಕಿದಾಗಲ್ಲವೇ ನಾವು ಆತನನ್ನು ತೀರಿಸಿಕೊಳ್ಳತಕ್ಕುದು.

ಕಲ್ಯಾಣಮಲ್ಲನು ಮೌನವಾಗಿದ್ದುಕೊಂಡೇ ಇವರಾಡಿದ ಮಾತುಗಳನ್ನು ಕೇಳಿದನು. ಆತನು ತನ್ನ ಮನದ ಉದ್ವೇಗವನ್ನು ತಡೆಯಲಾರದವನಾಗಿ—ಮಿತ್ರರಿರಾ! ನೀವು ಆವ ಮಾರ್ಗವನ್ನಾದರೂ ಅವಲಂಬಿಸಿರಿ. ಮುಖ್ಯವಾಗಿ ಆ ಧೂರ್ತನಾದ ಪತ್ತೇದಾರನ ಹುಟ್ಟಿಲ್ಲದೇ ಹೋದರೆ ಸರಿ. ಅದಕ್ಕಾಗಿ ಎಷ್ಟು ಧನ ಬೇಕಾದರೂ ನಾನು ಕೊಡಲುಳ್ಳವನು. ಆತನು ಬದುಕಿರುವ ವರೆಗೂ ನಮಗೆ ಬೇರೆ ಉಳಿಬಾಳಿಲ್ಲ, ಎಂದು ತನ್ನ ಅಭಿಪ್ರಾಯವನ್ನು ತಿಳಿಸಿದನು.

ವಾಗೀಶ—ಇಷ್ಟು ಹಣ ನಮ್ಮ ಕೈಗೆ ಸಿಕ್ಕಿರುವಾಗ ನಾವು ಆತನನ್ನು ಸುಮ್ಮನೆ ಬಿಡುವೆವೇ? ನಾವೇನು ಅನ್ನ ತಿನ್ನುವೆವೋ ಮಣ್ಣು ತಿನ್ನುವೆವೋ? ಒಂದುವೇಳೆ ಅರಿಂದಮನು ನಮ್ಮ ವಿಷಯದಲ್ಲಿ ಸಂದೇಹಪಡುವುದಾದರೆ, ಆತನನ್ನು ಉಪಾಯಾಂತರಗಳಿಂದ ನಮ್ಮ ಸೌಭಾಗ್ಯಮಂದಿರಕ್ಕೆ ಬರಮಾಡಿಕೊಂಡರಾಯಿತು. ಬಳಿಕ ಅವನು ನಮ್ಮ ಔಷಧದ ಪ್ರಯೋಗದಿಂದ ಪ್ರಾಣಬಿಡಬೇಕು—ಇಲ್ಲವೇ, ಸಾಯುವ ವರೆಗೂ ಹುಚ್ಚನಾಗಿ ನಮ್ಮ ನೆಲಮಾಳಿಗೆಯಲ್ಲಿ ಬಿದ್ದಿರಬೇಕು. ನಾವು ಆಲೋಚಿಸಿ ಮಾಡಿದ ಸಂಕಲ್ಪವು ವ್ಯರ್ಥವಾಗುವುದೆಂದರೇನು? ನಮ್ಮನ್ನು ಆತನು ಪಶುಗಳೆಂದು ಭಾವಿಸಿರುವುದಾದರೆ, ಆತನ ಮರಣವು ಸಮೀಪಿಸಿಕೊಂಡು ಬಂದಂತೆಯೇ ಸರಿ. ಇದರಲ್ಲಿ ಸಂದೇಹವಿಲ್ಲ.

---

## ನಾಲ್ಕನೆಯ ವಿಲಾಸ

### ಸೌಭಾಗ್ಯಮಂದಿರ

ರಾಜಮಾರ್ತಂಡನು ಅರಿಂದಮ ದೇವೇಂದ್ರ ವಿಜಯರನ್ನು ಜತೆಯಲ್ಲಿ ಕರೆದುಕೊಂಡು ಅಪರಾಹ್ಣದಲ್ಲಿ ತನ್ನ ನಿವಾಸಸ್ಥಾನವನ್ನು ಕುರಿತುಹಿಂದಿರುಗಿದನು.

ಮನೆಗೆ ಬಂದ ಕೂಡಲೆ ಅರಿಂದಮನು ತನ್ನ ವಿಶ್ರಾಂತಿಮಂದಿರಕ್ಕೆ ಹೋಗಿ ಬಾಗಿಲನ್ನು ಬಂಧಿಸಿಕೊಂಡು ಧೂಮಪಾನಮಾಡುತ್ತಾ ಚಿಂತಾ ಸಮುದ್ರದಲ್ಲಿ ಮುಳುಗಿದನು.

ಆತನ ಆಲೋಚನಾ ಪ್ರಣಾಳಿಯು ಹೀಗಿದ್ದಿತು :—

"ಕಲ್ಯಾಣಮಲ್ಲನು ಕೃತ್ರಿಮ ಸಂಧಾನವನ್ನು ಅವಲಂಬಿಸಿ ಈಶ್ವರೀ ದುರ್ಗಕ್ಕೆ ಸ್ವತ್ವಾಧಿಕಾರಿಯಾಗಿ ಬಂದಿರುವನು. ಶ್ರೀಕುಮಾರನಾಗಲಿ ಆತನ ಪುತ್ರನಾಗಲಿ ಬದುಕಿರುವುದಾದರೆ, ಕಲ್ಯಾಣಮಲ್ಲನಿಗೆ ಜಹಗೀರಿಯ ಮೇಲೆ ಆವ ಅಧಿಕಾರವಿರುವುದು ? ತಾಂತಿಯನಿಗೆ ಶ್ರೀಕುಮಾರನು ಬದುಕಿರುವ ಸುದ್ದಿಯು ಪ್ರಾಯಿಕವಾಗಿ ತಿಳಿದಿರಬೇಕು. ಆದುದರಿಂದಲೇ ಆತನು ಕಲ್ಯಾಣಮಲ್ಲನನ್ನು ಹೆದರಿಸಿ ಲಂಚವನ್ನು ಕಿತ್ತುಕೊಳ್ಳುವುದಕ್ಕೆ ಅವನ ಬೆನ್ನ ಹತ್ತಿರುವನು. ತಾಂತಿಯನು ಬದುಕಿರುವ ವರೆಗೂ ಕಲ್ಯಾಣಮಲ್ಲನಿಗೆ ಸುಖಶಾಂತಿಯೆಲ್ಲಿಂದ ಬರಬೇಕು. ಇದನ್ನು ಅರಿತುಕೊಂಡೇ ಆತನು ತಾಂತಿಯಾ ಭಿಲ್ಲನನ್ನು ಕೊಲ್ಲುವುದಕ್ಕೆ ಯತ್ನ ಮಾಡಿರಬೇಕು. ಕಲ್ಯಾಣಮಲ್ಲನೊಡನೆ ಮತ್ತೊಬ್ಬನು ಕಾಣಿಸಿದನಲ್ಲ, ಆತನಾರಿರಬಹುದು ? ಆತನಿಗೂ ಇದಕ್ಕೂ ಸಂಬಂಧವೇನಿದ್ದೀತು ? "

ಅರಿಂದಮನು ಹೀಗೆ ಬಗೆಬಗೆಯಾಗಿ ಚಿಂತಿಸುತ್ತಾ ಹಗಲೆಲ್ಲವನ್ನೂ ಕಳೆದನು. ಕ್ರಮಕ್ರಮವಾಗಿ ರಾತ್ರಿಯಾಯಿತು. ರಾಜಮಾರ್ತಂಡನು ಅರಿಂದಮನನ್ನು ರಾತ್ರಿ ಭೋಜನಕ್ಕಾಗಿ ಎಬ್ಬಿಸಿದನು. ಅರಿಂದಮನು ತನಗೆ ಹಸಿವಿಲ್ಲವೆಂದೂ, ತಾನು ಹೊರಗೆ ಹೋಗಿ ಸುತ್ತಿಕೊಂಡು ಬರಬೇಕೆಂದೂ ಹೇಳಿ ಹೊರಹೊರಟನು. ದೇವೇಂದ್ರನು ನಾಯಿಯನ್ನು ಕಟ್ಟಿ ಹಿಡಿದುಕೊಂಡು ಅರಿಂದಮನನ್ನು ಹಿಂಬಾಲಿಸಿದನು. ರಾಜಮಾರ್ತಂಡನೂ ಅರಿಂದಮನ ಜತೆಯಲ್ಲಿ ಹೊರಡುವ ಅಭಿಪ್ರಾಯವನ್ನು ಸೂಚಿಸಿದನು.

ಅದಕ್ಕೆ ಅರಿಂದಮನು— ಮಹಾಶಯ ! ತಾವು ಬರಬೇಕಾದ ಆವಶ್ಯಕವೇನೂ ಇರುವುದಿಲ್ಲ. ತಮ್ಮ ಸಾಹಾಯ್ಯವು ಆವಶ್ಯವೆಂದು ತೋರಿಬಂದಲ್ಲ ತಮಗೆ ಹೇಳಿಕಳುಹುವೆನು, ಎಂದು ಉತ್ತರಕೊಟ್ಟನು

ಅರಿಂದಮನೂ ದೇವೇಂದ್ರನೂ ನಾಯಿಯೂ ದಾರಿ ಹಿಡಿದು ಹೊರಟು, ಆವ ಸ್ಥಲದಲ್ಲಿ ವಿದ್ಯುದ್ವ್ಯಾನವು ಕಮರಿಯಲ್ಲಿ ಉರುಳಿತೋ, ಆ ಸ್ಥಳಕ್ಕೆ ಬಂದು ಸೇರಿದರು.

ಅರಿಂದಮನು ಕಮರಿಯ ಹತ್ತಿರಕ್ಕೆ ಬಂದು ತನ್ನ ಕೈಲಾಂದ್ರದ ದೀಪವನ್ನು ಪ್ರಜ್ವಲಿಸುವಂತೆ ಮಾಡಿದನು. ಅಲ್ಲ ತಂತಿಗಳು ಬಿಗಿಯಲ್ಪಟ್ಟಿದ್ದ ಗಿಡು ಗುಂಡುಗಳನ್ನು ದೀಪದ ಬೆಳಕಿನಲ್ಲಿ ಪರೀಕ್ಷಿಸ ತೊಡಗಿದನು. ಹೀಗೆ ಪರೀಕ್ಷಿ

ಸುತ್ತಿರುವ ಸಮಯದಲ್ಲಿ ಆತನ ಮುಖವು ಸಂತೋಷದಿಂದ ವಿಕಸಿತವಾಯಿತು. ಅಲ್ಲಿ ಹತ್ತಿರದಲ್ಲಿಯೇ ಇದ್ದ ಮತ್ತೊಂದು ಮರವನ್ನು ಪರೀಕ್ಷಿಸುತ್ತಿರುವಲ್ಲಿ ಆ ಮರದ ತೊಗಟೆಯು ಸುಲಿದುಹೋಗಿದ್ದಿತು. ಅದನ್ನು ನೋಡಿದರೆ ಆರೋ ಮರವನ್ನು ಬಲವಾಗಿ ಒರಗಿಕೊಂಡಿದ್ದುದರಿಂದ ತೊಗಟೆಯು ಬಿದ್ದುಹೋಗಿರ ಬೇಕೆಂದು ಅರಿಂದಮನ ಬುದ್ಧಿಗೆ ಗೋಚರಿಸಲು, ಅರಿಂದಮನು ನಾಯಿಯನ್ನು ಬಿಟ್ಟು ಅದರ ವಾಸನೆಯನ್ನು ಆಘ್ರಾಣಿಸುವಂತೆ ಮಾಡಿದನು. ನಾಯಿಯು ವಾಸನೆಯನ್ನು ತೆಗೆದುಕೊಂಡ ಕೂಡಲೆ ಈಶ್ವರೀದುರ್ಗದ ಕಡೆಗೆ ನುಗ್ಗಲಾರಂಭಿಸಿತು. ಅದನ್ನು ಸರಪಳಿಯಿಂದ ಕಟ್ಟಿ ಹಿಡಿದುಕೊಂಡಿದ್ದ ದೇವೇಂದ್ರನು ಅದರ ಹಿಂದೆ ಹಿಂದೆಯೇ ಹೊರಟನು. ಆದರೆ ನಾಯಿಯು ಶಿವಪ್ರಾಸಾದಕ್ಕೆ ನುಗ್ಗದೆ ಅದರ ಎಡಗಡೆಯಲ್ಲಿದ್ದ ಕಾಡಿನ ಮಧ್ಯದಲ್ಲಿ ನುಗ್ಗಿತು. ಇದೇನಾಶ್ಚರ್ಯವಿರಬಹುದೆಂದು ಇಬ್ಬರೂ ಅದನ್ನು ಹಿಂಬಾಲಿಸಿದರು. ನಾಯಿಯು ಶಿವ ಪ್ರಾಸಾದಕ್ಕೆ ಕರೆದುಕೊಂಡು ಹೋಗುವುದೆಂದು ಅವರು ತಿಳಿದಿದ್ದರು, ಆದರೆ ಅವರ ಮನೋರಥವು ಈಡೇರಲಿಲ್ಲ. ತಮ್ಮ ಉದ್ದೇಶಕ್ಕೆ ಭಂಗವುಂಟಾಗಿದ್ದರೂ ನಾಯಿಯು ಏನಮಾಡುವುದೋ ಎಂದು ಅದರ ಹಿಂದೆಯೇ ಹೊರಟರು. ನಾಯಿಯು ಕೊಂಚ ಕಾಲದೊಳಗಾಗಿ ಅಲ್ಲಿ ನುಗ್ಗಿ ಇಲ್ಲಿ ನುಗ್ಗಿ ಕೊನೆಗೆ ಅಲ್ಲಿದ್ದ ಒಂದು ಸಣ್ಣ ಮನೆಯ ಬಳಿಗೆ ಬಂದು ಬಾಗಿಲನ್ನು ಕೆರೆಯಿತು. ಇದರಲ್ಲಿ ಏನೋ ತತ್ತ್ವವಿರಬೇಕೆಂದು ಅರಿಂದಮನು ಬೀಗಗಳನ್ನು ತೆಗೆಯತಕ್ಕ ಮೊಳೆಯಿಂದ ಬೀಗವನ್ನು ಸುಲಭವಾಗಿ ತೆಗೆದು ಒಳಗೆ ನುಗ್ಗಿ ದೀಪವನ್ನು ಕಚ್ಚಿಸಿದನು. ಬಳಿಕ ನಾಯಿಯು ಮೂಲೆಯಲ್ಲಿದ್ದ ಒಂದು ಪೆಟ್ಟಿಗೆಯ ಹತ್ತಿರಕ್ಕೆ ಹೋಯಿತು. ಅರಿಂದಮನು ಪೆಟ್ಟಿಗೆಯನ್ನು ತೆರೆದು ನೋಡಲಾಗಿ ಅದರಲ್ಲಿ ತಂತಿಗಳ ಸುರುಳಿಗಳೂ ಗಡಾರಿ ಗುದ್ದಲಿ ಎಲೆ ಗುದ್ದಲಿ ಪಿಕಾಶಿಗಳೂ ಇದ್ದುವು. ಅರಿಂದಮನು ಅವುಗಳಲ್ಲಿ ತಂತಿಗಳ ಸುರುಳಿಗಳನ್ನು ಹೊರಗೆ ತೆಗೆದುಕೊಂಡು ಪೆಟ್ಟಿಗೆಯನ್ನು ಮುಚ್ಚಿ ಹೊರಗೆ ಬಂದು ಬೀಗವನ್ನು ಮೊದಲಿನಂತೆಯೇ ಹಾಕಿಕೊಂಡು ದೇವೇಂದ್ರನನ್ನು ನೋಡಿದನು.

ದೇವೇಂದ್ರ—ದೇವ! ನಮ್ಮ ಪ್ರಯತ್ನವು ದಾರಿಗೆ ಬಂದಂತಿದೆಯಲ್ಲವೇ?

ಅರಿಂದಮ— ಇಷ್ಟರಿಂದಲೇ ಆದುದೇನು? ರಹಸ್ಯಭೇದನವೆಂಬ ನಾಟಕಕ್ಕೆ ಇದು ಪ್ರಸ್ತಾವನಾ ಮಾತ್ರವು.

ದೇವೇಂದ್ರ—ದಾರಿಗೆ ಅಡ್ಡಗಟ್ಟಿದ್ದ ತಂತಿಗಳು ಇವುಗಳೇ ಆಗಿರಬೇಕು.

ಅರಿಂದಮ—ಇದರ ತತ್ತ್ವಾರ್ಥವು ಮುಂದೆ ಗೊತ್ತಾಗಬೇಕು. ಈಗಲೇ ಸ್ಥಿರಪಡಿಸುವುದು ತಪ್ಪು.

ಅರಿಂದಮನು ಹೀಗೆ ಹೇಳುತ್ತಿರುವಲ್ಲಿ ನಾಯಿಯು ಮುಂದೆ ತೆರಳಿತು. ಇಬ್ಬರೂ ಮತ್ತೆ ನಾಯಿಯನ್ನೇ ಅನುಸರಿಸಿದರು. ನಾಯಿಯು ಕಾಲದಾರಿಯನ್ನು ಹಿಡಿದುಹೋಗಿ ಶಿವಪ್ರಾಸಾದದ ಹಿಂಗಡೆಯಲ್ಲಿ ಬಂದು ನಿಂತಿತು. ಅಲ್ಲಿದ್ದ ಸಣ್ಣ ಬಾಗಿಲೊಂದು ಒಳಗಡೆಯಿಂದ ಬಂಧಿಸಲ್ಪಟ್ಟಿದ್ದಿತು. ಇದನ್ನು ತೆಗೆಯುವುದು ಹೇಗೆಂದು ಅರಿಂದಮನು ಮಾರ್ಗವನ್ನು ಹುಡುಕುತ್ತಿರುವಲ್ಲಿ, ರಾಜಮಾರ್ಗದಲ್ಲಿ ಗಾಡಿಯೊಂದು ಬರುತ್ತಿದ್ದ ಶಬ್ದವು ಕೇಳಿಸಿದುದು ಮಾತ್ರವೇ ಅಲ್ಲದೆ ಅದರ ದೀಪವೂ ಕಾಣಿಸಿತು. ಗಾಡಿಯು ದೂರದಲ್ಲಿದ್ದುದರಿಂದ ಅದರಲ್ಲಿ ಇದ್ದವರಾರೆಂಬುದು ಅರಿಂದಮನಿಗೆ ಗೊತ್ತಾಗಲಿಲ್ಲ.

ಬಳಿಕ ಅರಿಂದಮನು ದೇವೇಂದ್ರನನ್ನು ಕುರಿತು— ಮಗು, ಆ ಗಾಡಿಯು ಶಿವಪ್ರಾಸಾದವನ್ನು ಬಿಟ್ಟು ಹೊರಗೆ ಹೋಗುವಂತಿದೆ. ಅದರಲ್ಲಿ ಇರುವವರಾರೆಂಬುದನ್ನು ತಿಳಿಯಬೇಕಾಗಿದೆ, ಎಂದು ಹೇಳಿ ದೇವೇಂದ್ರನನ್ನೂ ಜತೆಯಲ್ಲಿ ಕರೆದುಕೊಂಡು ರಾಜಮಾರ್ಗಕ್ಕೆ ಬಂದನು. ಕೊಂಚ ಹೊತ್ತಿನಲ್ಲಿ ಗಾಡಿಯೂ ಅವರ ಪಕ್ಕದಲ್ಲಿಯೇ ಹೊರಟಿತು. ಗಾಡಿಯೊಳಗೆ ಒಬ್ಬಾತನು ಕುಳಿತಿದ್ದನು. ಅರಿಂದಮನು ಕಲ್ಯಾಣಮಲ್ಲನನ್ನು ಗುರುತಿಸಿದ್ದನು. ಈತನು ಆತನ ಅತಿಥಿಯಾಗಿರಬೇಕೆಂದು ಊಹಿಸಿದನು ಆ ಅತಿಥಿಯಾರೆಂಬುದನ್ನು ನಮ್ಮ ಪ್ರಿಯ ಪಾಠಕ ಮಹಾಶಯರು ಬಲ್ಲವರಾಗಿರುವರು. ಆ ಅತಿಥಿಯೇ ವೈದ್ಯವಿದ್ಯಾವಿಶಾರದ, ಮನೋಜಮೋಹನವಾಗೀಶನು.

ಬಂಡಿಯು ಮುಂದಕ್ಕೆ ತೆರಳಿದ ಮೇಲೆ ಅರಿಂದಮನು ಮಾತನಾಡಿದನು.

ಅರಿಂದಮ—ಮಗು! ಅತಿಥಿಯಾರೆಂಬುದನ್ನು ಅರಿಯಬೇಕಾದುದು ಅತ್ಯಾವಶ್ಯಕವಾದುದು. ನೀನು ಗಾಡಿಯನ್ನು ಅನುಸರಿಸು. ಅವರು ಹೊಗೆ ಬಂಡಿಯನ್ನು ಏರುವುದಾದರೆ ನೀನೂ ಏರು. ಅವರನ್ನು ಮಟ್ಟಿಗೆ ನಿನ್ನ ದೃಷ್ಟಿಯಿಂದಾಚೆಗೆ ಬಿಡಬೇಡ, ಕಂಡೆಯಾ? ನೀನು ಬಹುದೂರ ಪ್ರಯಾಣ ಬೆಳೆಯಿಸಬೇಕಾದ ಸಂದರ್ಭದಲ್ಲಿ ನನಗೊಂದು ಪತ್ರವನ್ನು ಬರೆದು ಕಳುಹು. ನಾನು ರಾಜಘಟ್ಟದಲ್ಲಿಯೇ ಇರುವೆನು. ನಾನು ಇಲ್ಲಿದ್ದುಕೊಂಡು ತಾಂತಿಯಾಭಿಲ್ಲನ ಅನುಸಂಧಾನ ಮಾಡಬೇಕಾಗಿರುವುದು. ಮೊದಲು ನಾವು ಈ ಮೂವರ ಅಭಿಪ್ರಾಯವನ್ನು ಹೊರಪಡಿಸಬೇಕಾದುದು ಅವಶ್ಯ ಕರ್ತವ್ಯವಾಗಿರುವುದು.

ಅರಿಂದಮನು ಹೀಗೆ ಹೇಳಿ ದೇವೇಂದ್ರನ ಕೈಗೆ ಬೇಕಾದಷ್ಟು ಹಣವನ್ನು ಕೊಟ್ಟು ಅವರನ್ನು ಹಿಂಬಾಲಿಸುವಂತೆ ಹೇಳಿ ತಾನು ನಾಯಿಯನ್ನು ಜತೆಯಲ್ಲಿ ಕರೆದುಕೊಂಡು ರಾಜಮಾರ್ತಂಡನ ಮನೆಗೆ ಬಂದುಬಿಟ್ಟನು.

ಕಲ್ಯಾಣಮಲ್ಲನ ಗಾಡಿಯು ಮುಂದೆ ಮುಂದೆ ತೆರಳಿತು. ರಾಜಮಾರ್ಗದಲ್ಲಿ ಹಳ್ಳ ಕೊಳ್ಳಗಳಿದ್ದುದರಿಂದ ಗಾಡಿಯು ವೇಗವಾಗಿ ಹೋಗುವುದಕ್ಕೆ ತೊಂದರೆಯುಂಟಾಗಿ ಮೆಲ್ಲನೆ ಹೋಗುತ್ತಿದ್ದಿತು. ದೇವೇಂದ್ರನು ರಾಜಮಾರ್ಗದಲ್ಲಿ ಹೊರಟರೆ ಅವರಿಗೆ ಗೊತ್ತಾಗುವುದೆಂದು ತಿಳಿದು ಕಾಡಬಿದ್ದು ಕಾಡದಾರಿಯಲ್ಲಿ ತೆರಳಿದನು. ಆತನಿಗೆ ಹೆಚ್ಚಿನ ಉತ್ಸಾಹವಿದ್ದುದರಿಂದ, ಕಾಡದಾರಿಯ ತೊಂದರೆಗಳಾವುವೂ ಅವನ ಗಮನಕ್ಕೆ ಬರಲಿಲ್ಲ. ಅಂತೂ ಆತನು ಗಾಡಿಯನ್ನು ತನ್ನ ದೃಷ್ಟಿಯಿಂದಾಚೆಗೆ ಬಿಟ್ಟುಕೊಡದೆ ಅದರ ಹಿಂದೆಯೋ ಮುಂದೆಯೋ ಪಕ್ಕದಲ್ಲಿಯೋ ಹೇಗೋ ಗಾಡಿಯನ್ನೇ ಅನುಸರಿಸಿದ್ದನು.

ದೇವೇಂದ್ರನು ಇದೇ ರೀತಿಯಲ್ಲಿ ಎಂಟೊಂಬತ್ತು ಮೈಲಿಗಳ ದಾರಿಯನ್ನು ನಡೆದು ಕೊನೆಗೆ ಈಶ್ವರೀದುರ್ಗದ ಹೊಗೆ ಬಂಡಿಯ ನಿಲ್ದಾಣಕ್ಕೆ ಬಂದು ಸೇರಿದನು. ಅವನು ಸೇರಿದ ಕೊಂಚಕಾಲಕ್ಕೆ ಮುಂಚೆಯೇ ಕುದುರೆಯ ಬಂಡಿಯೂ ಅಲ್ಲಿಗೆ ಬಂದಿದ್ದಿತು.

ದೇವೇಂದ್ರನು ಟಿಕೆಟನ್ನು ಕೊಳ್ಳುವುದಕ್ಕೆ ಹೋದನು. ಕಾಲವು ಅತಿಕ್ರಮಿಸಿದ್ದುದರಿಂದ ಅದು ದೊರೆಯದೇ ಹೋಯಿತು. ಮುಂದೆ ಮಾಡಬೇಕಾದುದೇನೆಂದು ಆತನು ಚಿಂತಿಸುತ್ತಿರುವಷ್ಟರಲ್ಲಿಯೇ ಬಂಡಿಯು ಮುಂದಕ್ಕೆ ತೆರಳಿತು. ಮಾಡಿದ ಶ್ರಮವೆಲ್ಲವೂ ವ್ಯರ್ಥವಾಯಿತೆಂದು ದೇವೇಂದ್ರನ ಎದೆಯು ಡವ್‌ಡವ್ ಎಂದು ಹೊಡೆದುಕೊಳ್ಳಲಾರಂಭಿಸಿತು. ಆದರೂ ಸಮಯದಲ್ಲಿ ಧೈರ್ಯಗೆಡದ ದೇವೇಂದ್ರನು ಮತ್ತೊಂದು ಕಡೆಯಿಂದ ಬಂದು ಹೊರಟದ್ದ ಬಂಡಿಯ ಹಿಡಿಯನ್ನು ಹಿಡಿದುಕೊಂಡು ಪಾದಪೀಠದ ಮೇಲೆ ನಿಂತನು. ಬಂಡಿಯು ನಿಲ್ದಾಣವನ್ನು ಬಿಟ್ಟ ಬಳಿಕ ವೇಗವಾಗಿ ಹೊರಡಲುಜ್ಜುಗಿಸಿತು. ಹಿಡಿಯನ್ನು ಹಿಡಿದು ಪಾದಪೀಠದ ಮೇಲೆ ನಿಂತಿದ್ದ ದೇವೇಂದ್ರನು ಕಿಟಕಿಯಿಂದ ಬಂಡಿಯೊಳಗೆ ಇಣುಕಿ ನೋಡಿದನು. ಒಳಗೆ ದೀಪವಿರಲಿಲ್ಲವಾಗಿ ಜನರಾರೂ ಇಲ್ಲವೆಂದು ತಿಳಿದು ಕಿಟಕಿಯಿಂದಲೇ ಒಳಗೆ ಇಳೀಬಿದ್ದು ಒಂದಾಸನದ ಮೇಲೆ ಕುಳಿತುಕೊಂಡನು. ಇಷ್ಟಾದ ಮೇಲೆ ಆತನ ಮನವು ಸ್ತಿಮಿತಕ್ಕೆ ಬಂದಿತು. ಆದರೂ ಆ ವ್ಯಕ್ತಿಯು ಎಲ್ಲಿಳಿದುಬಿಡುವುದೋ ಎಂಬ ಶಂಕೆಯು ದೇವೇಂದ್ರನ ಮನದಲ್ಲಿ ಜಾಗರಿತವಾಗಿದ್ದುದರಿಂದ ಆತನು ರಾತ್ರಿಯಲ್ಲಿ ಕೊಂಚವೂ ನಿದ್ರೆಮಾಡದೆ ಪ್ರತಿಯೊಂದು ನಿಲ್ದಾಣದಲ್ಲಿಯೂ ಇಣುಕಿ ಇಣುಕಿ ನೋಡುತ್ತಾ ಕುಳಿತಿದ್ದನು. ಆ ವ್ಯಕ್ತಿಯು

ಆವ ನಿಲ್ದಾಣದಲ್ಲಿಯೂ ಇಳಿದಂತೆ ಕಾಣಲಿಲ್ಲ. ಹೀಗೆಯೇ ಬೆಳಗಾಗುತ ಬಂದಿತು. ಅಷ್ಟು ಹೊತ್ತಿಗೆ ಹೊಗೆ ಬಂಡಿಯು "ಭೂತನ ಕಣಿವೆ" ಎಂಬ ನಿಲ್ದಾಣದಲ್ಲಿ ಬಂದು ನಿಂತಿತು.

ದೇವೇಂದ್ರನು ಮೊದಲಿನಂತೆಯೇ ಅಲ್ಲಿಯೂ ಇಣಿಕಿ ನೋಡಿದನು. ಆ ವ್ಯಕ್ತಿಯು ಅಲ್ಲ ಬಂಡಿಯಿಂದಿಳಿಯಿತು. ದೇವೇಂದ್ರನೂ ಮತ್ತೊಂದು ಕಡೆಯಿಂದ ಬಂಡಿಯಿಳಿದು ದೂರದಿಂದಲೇ ಅವರನ್ನು ನೋಡುತ್ತಾ ನಿಂತುಕೊಂಡನು.

ವೈದ್ಯವಾಗೀಶನು ಸೇವಕನೊಬ್ಬನನ್ನು ಕರೆದು ತನ್ನ ಗಂಟುಮೂಟೆಗಳನ್ನು ಹೊರಿಸಿ ನಿಲ್ದಾಣದಿಂದ ಹೊರಗೆ ಬಂದನು. ಅಲ್ಲಿ ಒಂದು ಸುಂದರವಾದ ವಿದ್ಯುದ್ಯಾನವು ಸಿದ್ಧವಾಗಿ ನಿಂತಿದ್ದಿತು. ವೈದ್ಯನು ಅದರಲ್ಲಿ ಕುಳಿತುಕೊಂಡು ನಿಮೇಷ ಮಾತ್ರದಲ್ಲಿ ಕಣ್ಮರೆಯಾಗಿ ಬಿಟ್ಟನು.

ದೇವೇಂದ್ರನು ಆತನನ್ನು ಹಿಂಬಾಲಿಸುವುದಕ್ಕೆ ಉದ್ಯುಕ್ತನಾಗಲು, ಹೊಗೇ ಬಂಡಿಯ ಅಧಿಕಾರಿಯೊಬ್ಬನು ಬಂದು— ಮಹಾಶಯ! ತಮ್ಮ ಟಿಕೆಟು ಎಲ್ಲಿ? ಎಂದನು.

ದೇವೇಂದ್ರ—(ಕಿಸೆಗಳನ್ನು ಹುಡುಕಿದಂತೆ ನಟಿಸಿ) ಅಯ್ಯೋ! ಟಿಕೆಟು ಎಲ್ಲಿಯೋ ಮಾಯವಾಗಿಬಿಟ್ಟಿರುವುದು. ನಾನು ನಿದ್ರೆಮಾಡುತ್ತಿರುವಾಗ ಆರೋ ಅದನ್ನು ಕದ್ದಿರಬಹುದು.

ದೇವೇಂದ್ರನು ಹೀಗೆ ಹೇಳಿ ಅಧಿಕಾರಿಯ ಕೈಯ್ಯಲ್ಲಿ ಒಂದು ಸುವರ್ಣದ ನಾಣ್ಯವನ್ನು ಇಟ್ಟನು. ಅಧಿಕಾರಿಯು ಸಂತೋಷದಿಂದ ತಲೆತಿರುಗಿದವನಾಗಿ ದೇವೇಂದ್ರನಿಗೆ ನಮಸ್ಕಾರಮಾಡಿದನು. ದೇವೇಂದ್ರನು ಆತನನ್ನು ಕುರಿತು— ಸ್ವಾಮಿ! ಇದಕ್ಕಾಗಿ ತಾವು ವಂದಿಸಬೇಕಾದುದೇನೂ ಇರುವುದಿಲ್ಲ. ಲೋಕದಲ್ಲಿ ಒಬ್ಬರಿಗೊಬ್ಬರು ಒತ್ತಾಸೆಯಾಗಿರಲೇಬೇಕು. ಸರಕಾರದ ವಿಧಿನಿಯಮಗಳಿಗೆ ಗೆರೆಯಷ್ಟೂ ಮೀರುವುದಿಲ್ಲವೆಂದು ಕುಳಿತರೆ, ದ್ವೇಷವು ಹೆಚ್ಚುವುದೇ ಹೊರತು ಕಾರ್ಯಸಿದ್ಧಿಯಾಗಲಾರದು. ಸ್ವಕಾರ್ಯವು ಚೆನ್ನಾಗಿಯೂ ನಡೆಯಬೇಕು, ಸ್ವಾಮಿಕಾರ್ಯವೂ ನಡೆದರಾಯಿತು. ಮಹಾಶಯ! ಆ ವಿದ್ಯುದ್ಯಾನವನ್ನು ನೋಡೋಣವಾಯಿತೇ? ಅದು ಎಷ್ಟು ಸುಂದರವಾಗಿರುವುದು! ಈ ಯಾನವು ಆರದಿರಬಹುದು? ಎಂದು ಸಹಜವಾದ ರೀತಿಯಿಂದ ಪ್ರಶ್ನೆಮಾಡಿದನು.

ಅಧಿಕಾರಿ— ದೊಡ್ಡಮನುಷ್ಯರ ಯಾನವೇನು, ಎಲ್ಲವೂ ಸುಂದರವಾಗಿಯೇ ಇರುವುದು. ನಮ್ಮ ಈ ಸರಹದ್ದಿನಲ್ಲಿ ಇಂತಹ ದೊಡ್ಡಮನುಷ್ಯರು ಅತಿ ವಿರಳರು.

ದೇವೇಂದ್ರ—ಹಾಗೆಯೇ ? ಈತನಾರೆಂಬುದನ್ನು ಅರಿಯದ ನಾನೇ ಭಾಗ್ಯಹೀನನು.

ಅಧಿಕಾರಿ— ಈತನನ್ನು ತಾವು ಕಾಣಿರಾ ! ತಾವು ವಿದೇಶಿಗಳೆಂದು ತೋರುವುದು. ಇವರು ಸೌಭಾಗ್ಯಮಂದಿರವೆಂಬ ಹುಚ್ಚರ ವೈದ್ಯಶಾಲೆಗೆ ಅಧ್ಯಕ್ಷರು. ಇವರೇ ವೈದ್ಯವಿದ್ಯಾವಿಶಾರದ, ಮನೋಜಮೋಹನ ವಾಗೀಶಮಹಾಶಯರು.

ದೇವೇಂದ್ರ— ಸೌಭಾಗ್ಯಮಂದಿರ ! ಅದಿರುವುದೆಲ್ಲಿ ?

ಅಧಿಕಾರಿ—ಮಹಾಶಯ ! ತಮಗೆ ಪ್ರಪಂಚವೇ ಗೊತ್ತಿಲ್ಲವೆಂದು ತೋರುವುದು. ಇವರು ಜಗತ್ಪ್ರಸಿದ್ಧರಾದ ವೈದ್ಯವಾಗೀಶರೆಂಬುವರು. ಇವರು ಹುಚ್ಚರನ್ನು ಚಿಕಿತ್ಸೆಮಾಡುವುದಕ್ಕಾಗಿ ಸೌಭಾಗ್ಯಮಂದಿರವೆಂಬ ಹೆಸರಿನಿಂದ ಒಂದು ಹುಚ್ಚರ ವೈದ್ಯಶಾಲೆಯನ್ನು ಸ್ಥಾಪಿಸಿರುವರು. ಇವರು ಸ್ವಂತ ವೆಚ್ಚದಿಂದಲೇ ವೈದ್ಯಶಾಲೆಯನ್ನು ನಡೆಯಿಸಿಕೊಂಡು ಬರುತ್ತಿರುವರು. ಇಂತಹ ಪ್ರಾತಃ ಸ್ಮರಣೀಯರಾದ ಸಿರೀಹ ಪುರುಷರು ನಮ್ಮ ದೇಶದಲ್ಲಿರುವುದೇ ನಮ್ಮ ಭಾಗ್ಯೋದಯವು.

ದೇವೇಂದ್ರ— ಆ ಸೌಭಾಗ್ಯಮಂದಿರವು ಇಲ್ಲಿಗೆ ಎಷ್ಟು ದೂರದಲ್ಲಿರುವುದು ?

ಅಧಿಕಾರಿ— ಆ ಮಂದಿರವು ಇಲ್ಲಿಗೆ ಮೂರು ಮೈಲಿಗಳ ದೂರದಲ್ಲಿರುವುದು. ವೈದ್ಯವಾಗೀಶರೂ ಅಲ್ಲಿಯೇ ವಾಸಮಾಡಿಕೊಂಡಿರುವರು.

ದೇವೇಂದ್ರನು ಮುಂದೆ ಮತ್ತಾವ ಮಾತನ್ನೂ ಆಡದೆ ನಿಲ್ದಾಣವನ್ನು ಬಿಟ್ಟು ಮುಂದೆ ತೆರಳಿದನು. ವಿದ್ಯುದ್ಯಾನವು ವೇಗದಿಂದ ಕಣ್ಮರೆಯಾಗಿ ಹೊರಟುಹೋದುದಕ್ಕಾಗಿ ಆತನು ವ್ಯಸನ ಪಡಲಿಲ್ಲ. ಇಷ್ಟು ದೂರ ಅನುಸರಿಸಿ ಬಂದವರಿಗೆ ಮೂರು ಮೈಲಿಗಳ ದೂರದಲ್ಲಿದ್ದ ಸೌಭಾಗ್ಯಮಂದಿರವನ್ನು ಕಂಡು ಹಿಡಿಯುವುದು ಅಷ್ಟಾಗಿ ಶ್ರಮಸಾಧ್ಯವಾಗಿರಲಿಲ್ಲವಾದುದರಿಂದ ವೈದ್ಯನು ಹೊರಟುಹೋದುದಕ್ಕಾಗಿ ವ್ಯಸನವುಂಟಾಗುವುದಕ್ಕೆ ಕಾರಣವೇನೂ ಇರಲಿಲ್ಲ.

ಅರಿಂದಮನ ಇಷ್ಟಾನುಸಾರವಾಗಿ ದೇವೇಂದ್ರನು ವೈದ್ಯವಾಗೀಶನನ್ನು ಅನುಸರಿಸಿಬಂದ ಕಾರ್ಯವು ಫಲಿಸಿತೆಂದು ತಿಳಿದು ಹಿಂದಿರುಗಬೇಕೆಂದು ಆಲೋಚಿಸುತ್ತಿರುವಷ್ಟರಲ್ಲಿಯೇ, ಆತನ ಮನದಲ್ಲಿ ತೋರಿದುದೇನೆಂದರೆ:–''ಶ್ರೀಕುಮಾರನು ಮಾಯವಾದ ಸಂಗತಿಯು ಗುರುವಿನಿಂದ ತಿಳಿದುಬಂದಿತು. ಕಲ್ಯಾಣಮಲ್ಲನಿಗೂ

ವೈದ್ಯವಾಗೀಶನಿಗೂ ಪರಮ ಮೈತ್ರಿಯಿರುವುದಾಗಿ ತಿಳಿಯಿತು. ಶ್ರೀಕುಮಾರನೇನಾದರೂ ವೈದ್ಯವಾಗೀಶನ ಸೌಭಾಗ್ಯಮಂದಿರದಲ್ಲಿ ನಿರ್ಬಂಧಿಸಲ್ಪಟ್ಟಿರಬಹುದೇ? ಇಷ್ಟು ದೂರ ಬಂದ ಮೇಲೆ ಇದನ್ನು ಸಿದ್ಧಾಂತಪಡಿಸಿಕೊಳ್ಳದೇ ಗುರುವಿನ ಬಳಿಗೆ ಹೋಗುವುದರಿಂದ ನಾನು ಹೆಚ್ಚಿನ ಕೆಲಸಮಾಡಿದಂತಾಗಲಾರದು. ಹೇಗಾದರೂ ಆಗಲಿ, ಸೌಭಾಗ್ಯಮಂದಿರವನ್ನು ಕಣ್ಣಿನಿಂದಲಾದರೂ ಒಂದು ಸಲ ನೋಡಿದ್ದರೆ ಎಷ್ಟೋ ಪ್ರಯೋಜನವುಂಟು.''

ದೇವೇಂದ್ರನು ಹೀಗೆ ಆಲೋಚಿಸಿ ಮುಂದಕ್ಕೆ ತೆರಳಿದನು. ಆತನು ದಾರಿಗರನ್ನು ಕೇಳಿಕೊಂಡು ಒಂದು ಗಂಟೆಯ ಕಾಲದೊಳಗಾಗಿ ಭೂತೇಶ್ವರ ಗ್ರಾಮಕ್ಕೆ ಬಂದು ಸೇರಿದನು. ಅಲ್ಲಿ ಫಲಾಹಾರಮಂದಿರವನ್ನು ಹುಡುಕಿಕೊಂಡು ಹೋಗಿ ಮೊದಲು ಆಯಾಸಪರಿಹಾರಕ್ಕಾಗಿ ಹಣ್ಣು ಹಂಪಲುಗಳನ್ನು ಸೇವಿಸಿ ಮಂದಿರದ ಯಜಮಾನನನ್ನು ಕುರಿತು— ಮಹಾಶಯ! ನಾನು ಪರಸ್ಥಲದವನು. ಈ ಗ್ರಾಮದಲ್ಲಿ ದರ್ಶನೀಯ ವಸ್ತುಗಳೇನಾದರೂ ಇರುವುದಾದರೆ ತಿಳಿಸಬೇಕು, ಎಂದು ಕೇಳಿದನು.

ಯಜಮಾನ— ನಮ್ಮ ಗ್ರಾಮವಾದರೋ ಬಲು ಚಿಕ್ಕದು. ಇಲ್ಲಿ ಇತರ ಸ್ಥಲಗಳಲ್ಲಿರುವಂತೆಯೇ ಪಾಠಶಾಲೆ, ವಾಚನಾಲಯ, ಭಜನ ಮಂದಿರ, ವೈದ್ಯಶಾಲೆ, ಧರ್ಮಶಾಲೆ ಮುಂತಾದುವುಗಳಿರುವುವು. ಇವುಗಳಲ್ಲಿ ವಿಶೇಷವೇನೂ ಕಂಡುಬರುವುದಿಲ್ಲ. ಆದರೆ ಇಲ್ಲಿಗೆ ಸಮೀಪದಲ್ಲಿಯೇ ಸೌಭಾಗ್ಯಮಂದಿರವೆಂಬುದೊಂದುಂಟು. ಅದು ಹುಚ್ಚರ ವೈದ್ಯಶಾಲೆಯು, ಅಲ್ಲಿ ಅನೇಕ ಜನ ಹುಚ್ಚರು ಚಿಕಿತ್ಸೆಮಾಡಲ್ಪಡುತ್ತಿರುವರು. ಇದನ್ನು ನೋಡುವುದಕ್ಕಾಗಿ ಅನೇಕರು ಪರಸ್ಥಲಗಳಿಂದ ಬಂದು ಹೋಗುತ್ತಿರುವರು. ವೈದ್ಯವಿದ್ಯಾವಿಶಾರದ ಮನೋಜನೋಹನ ವಾಗೀಶನೆಂಬ ಪ್ರಸಿದ್ಧನಾದ ವೈದ್ಯನು ಅದರ ಯಜಮಾನನಾಗಿರುವನು. ಪರಸ್ಥಲದವರು ಆ ಮಂದಿರವನ್ನು ಅವಶ್ಯವಾಗಿಯೂ ನೋಡತಕ್ಕುದಿದೆ. ಹುಚ್ಚರನ್ನು ನೋಡುವುದೂ ಕೋತಿಗಳನ್ನು ನೋಡುವುದೂ ಒಂದೇ ಬಗೆಯಾಗಿರುವುದು. ಒಬ್ಬ ಹುಚ್ಚನು ತಾನು ಮಹಾರಾಜಾಧಿರಾಜನೆಂದೂ, ಮತ್ತೊಬ್ಬನು ತಾನು ಚಕ್ರವರ್ತಿಯೆಂದೂ, ಇನ್ನೊಬ್ಬನು ತಾನು ಭೂಮಂಡಲಕ್ಕೆಲ್ಲಾ ಏಕಚ್ಛತ್ರಾಧಿಪತಿಯೆಂದೂ, ಮಗದೊಬ್ಬನು ತಾನು ಸಾಕ್ಷಾತ್ತಾಗಿ ಅವತರಿಸಿಬಂದ ಜಗದೀಶ್ವರನೆಂದೂ ಬಾಯಿಗೆ ಬಂದಹಾಗೆ ಬಗುಳುವನು. ಇದು ನೋಡುವುದಕ್ಕೂ ಕೇಳುವುದಕ್ಕೂ ಬಹು ರಮಣೀಯವಾಗಿರುವುದು. ಆದರೆ ಸೌಭಾಗ್ಯಮಂದಿರವು ಬಹು ಕಠಿನವಾದ ಸ್ಥಾನವು. ವೈದ್ಯವಾಗೀಶನ ಅಪ್ಪಣೆ

ಹೊರತು ಒಳಗೆ ಆರೂ ಪ್ರವೇಶಮಾಡಲಾಗದು. ದುಷ್ಟರು ಅದರ ಬಳಿಯಲ್ಲಿ ಸುಳಿವುದು ಕೂಡ ಇಲ್ಲ.

ದೇವೇಂದ್ರನು ಇದನ್ನು ಕೇಳಿ ಶ್ರಮಕೊಟ್ಟುದಕ್ಕೆ ಕ್ಷಮಿಸಬೇಕೆಂದು ಹೇಳಿ ಹೊರಹೊರಟನು. ಆತನು ಹೊರಹೊರಟು ಸೌಭಾಗ್ಯಮಂದಿರದ ಕಡೆಗೆ ತಿರುಗಿದನು. ಕೊಂಚ ದೂರ ನಡೆದು ಹೋಗುವುದರೊಳಗಾಗಿ ಸೌಭಾಗ್ಯಮಂದಿರವು ಕಾಣಿಸಿತು. ಸೌಭಾಗ್ಯಮಂದಿರದ ಪ್ರಾಚೀರದ ಮೇಲೆ ಮುಳ್ಳಿನ ಸಲಾಕೆಗಳು ಒತ್ತೊತ್ತಾಗಿ ನಡಲ್ಪಟ್ಟಿರುವುವು. ಅಂತಹ ಪ್ರಾಚೀರವನ್ನು ದಾಟಿ ಒಳಗಿನ ಅಂಗಳಕ್ಕೆ ಬರುವುದು ಅತಿ ದುಸ್ತರವೆಂದು ಆರಿಗಾದರೂ ತೋರಿ ಬರುತ್ತಿದ್ದಿತು. ಇದನ್ನು ನೋಡಿ ಆತನು ಚಿಂತಿಸಿದುದೇನೆಂದರೆ— "ಗೋಪ್ಯವಾಗಿ ಒಳಗೆ ಪ್ರವೇಶಮಾಡುವುದು ಸಾಧ್ಯಾತೀತವಾದುದು. ಇಂತಹ ದುಸ್ತರವಾದ ಪ್ರದೇಶದಲ್ಲಿ ಶ್ರೀಕುಮಾರನನ್ನು ಎಲ್ಲಿ ನಿರ್ಬಂಧಿಸಿಟ್ಟಿರುವರೆಂಬುದನ್ನು ಕಂಡುಹಿಡಿವ ಬಗೆ ಹೇಗೆ? ಕಲ್ಯಾಣಮಲ್ಲನಿಗೂ ಈ ವೈದ್ಯನಿಗೂ ಇರುವ ಸೌಹಾರ್ದವನ್ನು ನೋಡಿದರೆ ಶ್ರೀಕುಮಾರನು ಇಲ್ಲಿಯೇ ಇರಬೇಕೆಂದು ತೋರಿ ಬರುತ್ತಿರುವುದು. ಶಾಂತಿಯಾಭಿಲ್ಲನು ಈ ವಿಷಯವನ್ನು ಹೇಗೋ ಅರಿತಿರುವನೆಂದು ತಿಳಿದೇ ಇವರಿಬ್ಬರೂ ಆತನನ್ನು ಕೊಲ್ಲುವುದಕ್ಕೆ ಯತ್ನಮಾಡಿರಬೇಕು,— ಎಂದ ಮೇಲೆ, ಶ್ರೀಕುಮಾರನು ಬದುಕಿರುವುದಾದರೆ, ಆತನು ಇಲ್ಲಿಯೇ ಇರಬೇಕು. ಆತನನ್ನು ಕಂಡು ಹಿಡಿಯಲು ಆವ ಉಪಾಯವನ್ನು ಅವಲಂಬಿಸಬೇಕೋ ತಿಳಿಯದು. ಹೇಗಾದರೂ ಮಾಡಿ ಮರ್ಮವನ್ನು ಭೇದಿಸಲೇ ಬೇಕು."

ದೇವೇಂದ್ರನು ಹೀಗೆ ಆಲೋಚಿಸಿದ ಬಳಿಕ ಸೌಭಾಗ್ಯಮಂದಿರದ ಸನ್ನಿವೇಶವನ್ನು ಚೆನ್ನಾಗಿ ಅರಿತುಕೊಳ್ಳುವುದಕ್ಕಾಗಿ ಅದರ ಸುತ್ತಲೂ ಸುತ್ತಿಕೊಂಡು ಬಂದು ಅದರ ಮುಂದೆ ನಿಂತು ಅಲ್ಲಿ ತೂಗುಹಾಕಿದ್ದ ಮರದ ಹಲಗೆಯ ಮೇಲೆ ಬರೆದಿದ್ದುದನ್ನು ಓದಿ ನೋಡಿಕೊಂಡನು. ಬಲು ಹೊತ್ತು ಅಲ್ಲಿಯೇ ನಿಂತಿರುವುದಾದರೆ ಆರಾದರೂ ಸಂಶಯಪಡುವರೆಂದು ತಿಳಿದು ದೇವೇಂದ್ರನು ಅಲ್ಲಿ ನಿಲ್ಲದೆ ಪ್ರಾಚೀರದ ರಚನಾಕ್ರಮವನ್ನು ಪರೀಕ್ಷಿಸುತ್ತಾ ಕಾಲವನ್ನು ಕಳೆದನು. ಒಂದೆಡೆಯಲ್ಲಿ ಪ್ರಾಚೀರದ ಮೇಲಿದ್ದ ಮುಳ್ಳಿನ ಸಲಾಕೆಯು ಬಗ್ಗಿಹೋಗಿ ಒಬ್ಬ ಮನುಷ್ಯನು ತೂರಿಬರುವಷ್ಟು ಅವಕಾಶವು ತೋರಿಬರುತ್ತಿದ್ದಿತು. ಹಿಂದೊಂದು ದಿನ ಇದೇ ಸ್ಥಲದಿಂದಲೇ ಶ್ರೀಕುಮಾರನು ರಾತ್ರಿಯ ಕಾಲದಲ್ಲಿ ತಪ್ಪಿಸಿಕೊಂಡು ಓಡಿಹೋಗುವುದರಲ್ಲಿದ್ದನು. ಈ ವಿಷಯವು ನಮ್ಮ ಪ್ರಿಯಪಾಠಕ ಮಹಾಶಯರಿಗೆ ಇನ್ನೂ ಜ್ಞಾಪಕದಲ್ಲಿರಬಹುದು. ದೇವೇಂದ್ರನು ಈ ಪ್ರದೇಶವನ್ನು ನೋಡಿ 'ಸೌಭಾಗ್ಯಮಂದಿರಕ್ಕೆ ಗೋಪ್ಯವಾಗಿ ಪ್ರವೇಶಮಾಡಬೇಕಾದರೆ ಇದು ಬಿಟ್ಟರೆ

ಬೇರೊಂದು ಅನುಕೂಲವಾದ ಸ್ಥಲವೇ ದೊರೆಯದು' ಎಂದು ಮನದಲ್ಲಿ ಸಿದ್ಧಾಂತಪಡಿಸಿಕೊಂಡನು.

ಅರಿಂದಮನಿಗೆ ತಿಳಿಸದೆಯೇ ತಾನು ಈ ಕೆಲಸ ಮಾಡುವುದರಿಂದ, ಒಂದು ವೇಳೆ ಸಿಕ್ಕಿಕೊಳ್ಳುವುದಾದರೆ ತನ್ನ ಗುರುವಿನ ಕಾರ್ಯಕಲಾಪವು ಹಾಳಾಗಿ ಹೋಗುವುದೆಂದು ತಿಳಿದು ಒಳಗೆ ನುಗ್ಗುವುದಕ್ಕೆ ಇಷ್ಟವಿಲ್ಲದವನಾಗಿ ಬಂದ ದಾರಿ ಹಿಡಿದು ಹೊಗೆ ಬಂಡಿಯ ನಿಲ್ದಾಣಕ್ಕೆ ಬಂದನು. ಅಲ್ಲಿ ಸಲ್ಲಾಪಯಂತ್ರದ ಕೋಣೆ ಯೊಂದಿದ್ದಿತು. ದೇವೇಂದ್ರನು ಆ ಯಂತ್ರದ ಮುಂಗಡೆಯಲ್ಲಿ ನಿಂತು ರಾಜ ಘಟ್ಟಕ್ಕೆ ಸಂಬಂಧವನ್ನು ಕಲ್ಪಿಸಿ ಅರಿಂದಮನೊಡನೆ ಮಾತನಾಡಬೇಕೆಂಬ ತನ್ನ ಅಭಿಪ್ರಾಯವನ್ನು ಸೂಚಿಸಿದನು. ಒಂದೆರಡು ನಿಮಿಷಗಳಾದ ಬಳಿಕ ಝಣ್ ಝಣ್ ಎಂದು ಶಬ್ದವಾಗಲು, ದೇವೇಂದ್ರನು 'ತಾವಾರು?' ಎಂದನು. ದೇವೇಂದ್ರನಲ್ಲವೇ ಮಾತನಾಡುತ್ತಿರುವನು?' ಎಂದು ಪ್ರತ್ಯುತ್ತರ ಬಂದಿತು.

ದೇವೇಂದ್ರ— ಅಹುದು ಗುರುದೇವ! ನಾನೇ ದೇವೇಂದ್ರನು. ನಾನು ಭೂತನ ಕಣಿವೆಯೆಂಬ ಹೊಗೆ ಬಂಡಿಯ ನಿಲ್ದಾಣದಲ್ಲಿರುವ ಸಲ್ಲಾಪಯಂತ್ರದ ಬಳಿ ನಿಂತು ಮಾತನಾಡುತ್ತಿರುವೆನು. ನಾನು ತಮ್ಮ ಅಪ್ಪಣೆಯಂತೆ ಇಲ್ಲಿಯ ವರೆಗೂ ಅವರನ್ನು ಅನುಸರಿಸಿ ಬಂದೆನು. ಅವರು ಇಲ್ಲಿ ಇಳಿಯಲು, ನಾನೂ ಇಲ್ಲಿಯೇ ಇಳಿದುಬಿಟ್ಟೆನು. ಇಲ್ಲಿಗೆ ಬಂದಮೇಲೆ ಅವರಾರೆಂಬುದನ್ನು ನಾನು ವಿಚಾರಮಾಡಿ ತಿಳಿದೆನು. ವೈದ್ಯವಿದ್ಯಾವಿಶಾರದ ಮನೋಜಮೋಹನ ವಾಗೀಶ ರೆಂದು ಅವರ ಹೆಸರು. ಇಲ್ಲಿಗೆ ಮೂರು ಮೈಲಿಗಳ ದೂರದಲ್ಲಿರುವ ಸೌಭಾಗ್ಯ ಮಂದಿರವೆಂಬ ಹುಚ್ಚರ ವೈದ್ಯಶಾಲೆಗೆ ಅವರೇ ಯಜಮಾನರು. ಅವರು ಅಲ್ಲಿಯೇ ವಾಸವಾಗಿರುವರು.

ಅರಿಂದಮ—ಇದರಲ್ಲಿ ಸುಳ್ಳೇನೂ ಇಲ್ಲವಷ್ಟೇ?

ದೇವೇಂದ್ರ— ನಾನು ಕಣ್ಣಿನಿಂದಲೇ ನೋಡಿಕೊಂಡುಬಂದು ತಮಗೆ ತಿಳಿಸುತ್ತಿರುವೆನು. ಮುಂದಿನ ಕರ್ತವ್ಯವೇನೆಂಬುದನ್ನು ತಿಳಿಸಬೇಕು. ತಮ್ಮ ಪ್ರಯತ್ನವು ಎಷ್ಟರ ಮಟ್ಟಿಗೆ ಮುಂದೆ ಸಾಗಿರುವುದೆಂಬುದನ್ನು ಕೇಳಲಿಚ್ಛಿಸುವೆನು.

ಅರಿಂದಮ—ನಾನು ತಾಂತಿಯಾಭಿಲ್ಲನ ಅನುಸಂಧಾನದಲ್ಲಿರುವುದರಿಂದ, ಇಲ್ಲಿಂದ ಕಾಲೆತ್ತಿಡುವುದಕ್ಕಾಗಲಾರದು. ನೀನು ಸೌಭಾಗ್ಯಮಂದಿರದ ಮೇಲೆ ದೃಷ್ಟಿಯಿಟ್ಟುಕೊಂಡಿದ್ದು ಅಲ್ಲಿನ ಸಂಗತಿಗಳನ್ನು ಅರಿತು ನನಗೆ ತಿಳಿಸುತ್ತಿರು. ನಾನು ಇಷ್ಟರಲ್ಲಿಯೇ ಸರಕಾರದಿಂದ ಅಪ್ಪಣೆಯನ್ನು ಪಡೆದುಕೊಂಡು ಸೌಭಾಗ್ಯ ಮಂದಿರವನ್ನು ನೋಡುವುದಕ್ಕೆ ಬರುವೆನು. ವಿಪತ್ತು ಸಂಭವಿಸಬಹುದಾದ

ಆವ ಕಾರ್ಯಕ್ಕೂ ಕೈಹಾಕಬೇಡ; ಹಾಗೂ ನೀನು ಇಂಥವನೆಂಬುದನ್ನು ಆರಿಗೂ ತಿಳಿಸದ ಹಾಗೆ ನಡೆದುಕೊಳ್ಳುತ್ತಿರಬೇಕು. ಬಲು ಮಾತಿನಿಂದೇನು? ನನ್ನ ಸಂಕಲ್ಪಕ್ಕೆ ಕುಂದುಕೊರತೆಗಳುಂಟಾಗದ ಹಾಗೆ ವರ್ತಿಸುವುದು ನಿನ್ನ ಮೇಲೆ ಬಿದ್ದ ಭಾರವಾಗಿರುವುದು. ನಾನೂ ನನ್ನ ಕೆಲಸದಲ್ಲಿ ಬಹುದೂರ ಮುಂದು ವರಿದು ಬಂದಿರುವೆನು.

ದೇವೇಂದ್ರ— ತಮ್ಮ ಅಪ್ಪಣೆಗೆ ವಿರೋಧವಾಗಿ ಎಂದಿಗೂ ನಡೆಯ ಲಾರೆನು. ತಾವು ನಿಶ್ಚಿಂತವಾಗಿ ತಮ್ಮ ಕಾರ್ಯಕಲಾಪವನ್ನು ನೆರವೇರಿಸೋಣ ವಾಗಲಿ.

ದೇವೇಂದ್ರನು ಹೀಗೆ ಹೇಳಿ ಕೋಣೆಯಿಂದ ಹೊರಗೆ ಬಂದನು.

---

## ಐದನೆಯ ವಿಲಾಸ

### ಅಪೂರ್ವ ಕಾರಾವಾಸ

ದೇವೇಂದ್ರನು ಹೊಗೆ ಬಂಡಿಯ ನಿಲ್ದಾಣದಿಂದ ಹೊರಟು ಭೂತೇಶ್ವರ ಗ್ರಾಮಕ್ಕೆ ಬಂದು ಅಲ್ಲಿದ್ದ ಪಾನಾಹಾರಮಂದಿರದಲ್ಲಿ ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ವಾಸಮಾಡತೊಡಗಿ ಮಂದಿರದ ಯಜಮಾನನೊಡನೆ ವೈದ್ಯವಾಗೀಶನ ವಿಷಯವಾಗಿ ಕೆಲವು ಮಾತುಗಳನ್ನಾಡಿನೋಡಿದನು. ಆ ಸಂಭಾ ಷಣೆಯಿಂದ ಆತನಿಗೆ ಹೆಚ್ಚಿನ ಪ್ರಯೋಜನವೇನೂ ಆಗಲಿಲ್ಲ. ಆದರೆ ವೈದ್ಯ ವಾಗೀಶನು ಪ್ರಾತಃಸ್ಮರಣೀಯನಾದ ಮಹಾತ್ಮನೂ, ಸಚ್ಚರಿತ್ರನಾದ ದೊಡ್ಡ ಮನುಷ್ಯನೂ, ದಯಾದಾಕ್ಷಿಣ್ಯ ಪೂರ್ಣಹೃದಯನೂ, ನಿರಾಶ್ರಯರಿಗೆ ಆಶ್ರಯ ಪ್ರದಾತನೂ, ವಿಪನ್ನರಿಗೆ ಸಹಾಯನೂ, ಹುಚ್ಚರಿಗೆ ತಾಯಿತಂದೆಯೂ ಆಗಿದ್ದ ನೆಂದು ಸಂಭಾಷಣೆಯಿಂದ ತೋರಿಬಂದಿತು. ವೈದ್ಯನು ಇತರರಿಗೆ ತನ್ನ ಗುಟ್ಟನ್ನು ಬಿಟ್ಟುಕೊಡದೆ ಯೋಗ್ಯನಂತೆ ನಟನೆಮಾಡಿ ಕೀರ್ತಿಯನ್ನು ಸಂಪಾದಿಸಿಕೊಂಡಿರ ಬೇಕಾದರೆ, ಈತನು ಎಂತಹ ಮಾಯಾವಿಯಾದ ಪಿಶಾಚನಾಗಿರಬೇಕೆಂದು ದೇವೇಂದ್ರನು ತನ್ನಲ್ಲಿ ತಾನೇ ಆಶ್ಚರ್ಯಪಟ್ಟುಕೊಂಡನು.

"ವೈದ್ಯನೇ ಹೀಗಿರುವಾಗ, ಈತನ ಮಂದಿರವು ರಹಸ್ಯದಿಂದ ತುಂಬಿ ತುಳುಕಾಡುತ್ತಿರಬೇಕು; ಆದುದರಿಂದ ಮಂದಿರವನ್ನು ಹೇಗಾದರೂ ಮಾಡಿ ನೋಡಿಯೇ ತೀರಬೇಕೆಂದು ದೇವೇಂದ್ರನು ಸಂಕಲ್ಪಮಾಡಿಕೊಂಡನು. ಆದರೆ ಆವ ಉಪಾಯವನ್ನು ಅವಲಂಬಿಸಿದರೆ ಅದರೊಳಗೆ ಹೋಗಿ ನೋಡಬಹುದೋ

ಅದು ಇನ್ನೂ ಅವನಿಗೆ ಹೊಳೆಯಲಿಲ್ಲ. ಒಂದು ವೇಳೆ ಸುಮಾರ್ಗದಿಂದಲೋ ಕುಮಾರ್ಗದಿಂದಲೋ ಒಳಗೆ ಪ್ರವೇಶಮಾಡುವುದಾದರೆ, ದುರ್ದೈವಯೋಗದಿಂದ ಒಳಗೆ ಸಿಕ್ಕಿಕೊಂಡಲ್ಲಿ ತನ್ನ ಅವಸ್ಥೆಯು ಶೋಚನೀಯವಾಗುವುದಲ್ಲದೆ, ತನ್ನ ಗುರುಜಿನ ಕಾರ್ಯವೂ ಹಾಳಾಗಿಹೋಗುವುದು, ಎಂದು ದೇವೇಂದ್ರನು ಚೆನ್ನಾಗಿ ಅರಿತವನಾಗಿದ್ದರೂ ಅದನ್ನು ಹೇಗಾದರೂ ಮಾಡಿ ನೋಡಬೇಕೆಂಬ ಕುತೂಹಲವು ಮುಟ್ಟಿಗೆ ಅವನನ್ನು ತ್ವರೆಗೊಳಿಸುತ್ತಿದ್ದಿತು. ದೇವೇಂದ್ರನು ಅನೇಕ ಸ್ಥಲಗಳಲ್ಲಿ ಕಷ್ಟಕ್ಕೆ ಸಿಕ್ಕಿಬಿದ್ದಿರುವನು, ಎಷ್ಟೋ ಸ್ಥಲಗಳಲ್ಲಿ ಪ್ರಾಣದ ಮೇಲಿನ ಆಶೆಯನ್ನೇ ತ್ಯಾಗಮಾಡಿರುವನು, ಎಷ್ಟೋ ಸ್ಥಲಗಳಲ್ಲಿ ಶತ್ರುಗಳೊಡನೆ ಹೋರಾಡಿ ಮಣ್ಣಿಗೆ ಮಣ್ಣು ತಿಂದುಹೋಗಿರುವನು. ಆದರೂ ಅವನಿಗೆ ಇನ್ನೂ ಬುದ್ಧಿ ಬಂದಿರಲಿಲ್ಲ. ಇದು ಉಕ್ಕಿಬರುತ್ತಿರುವ ಯೌವನದ ಮಹಿಮೆಯಲ್ಲವೇ! ವೃದ್ಧನ ಎಂತಹ ಉಪದೇಶವಾದರೂ ಈ ಬಾಲ್ಯಚಾಪಲ್ಯವನ್ನು ಎಂದಿಗೂ ಹೋಗಲಾಡಿಸಲಾರದು. ಒಬ್ಬೊಬ್ಬನೂ ಸ್ವಾನುಭವವನ್ನು ಪಡೆದುಕೊಂಡೇ ಬುದ್ಧಿಮಂತನಾಗಬೇಕೇ ಹೊರತು ಇತರರ ಹೇಳಿಕೆಯು ಎಂದಿಗೂ ಪ್ರಯೋಜನಕ್ಕೆ ಬರಲಾರದು. ಪ್ರಕೃತಿ ನಿಯಮವು ಹೀಗಿರುವಲ್ಲಿ ವೃದ್ಧರು ಯುವಕರಿಗೆ ಬುದ್ಧಿಗಲಿಸುವುದಕ್ಕೆ ಮುಂದು ವರಿಯುವರು. ಇದು ವೃದ್ಧಚಾಪಲ್ಯವೇ ಹೊರತು ಮತ್ತು ಬೇರೆಯಲ್ಲ.

ಕಾಲವು ಕಳೆದ ಹಾಗೆಲ್ಲಾ ದೇವೇಂದ್ರನ ಮನವು ತತ್ತರಗುಟ್ಟಲಾರಂಭಿಸಿತು. ಕ್ರಮಕ್ರಮವಾಗಿ ಸಂಧ್ಯಾಕಾಲವು ಬಂದು ಅದೂ ಕಳೆದುಹೋಯಿತು. ದೇವೇಂದ್ರನು ಆವ ವಿಷಯವನ್ನೂ ಆರಿಗೂ ತಿಳಿಸದೆಯೇ ವೇಷವನ್ನು ಮಾರ್ಪಡಿಸಿಕೊಂಡು ಆಹಾರಮಂದಿರವನ್ನು ಬಿಟ್ಟು ಹೊರಗೆ ಬಂದನು.

ದೇವೇಂದ್ರನು ಸೌಭಾಗ್ಯಮಂದಿರದ ಬಳಿಗೆ ಬಂದಾಗ ರಾತ್ರಿಯಲ್ಲಿ ಎಂಟು ಗಂಟೆಯ ಹೊತ್ತಾಗಿದ್ದಿತು. ಬೆಕ್ಕು ಇಲಿಯನ್ನು ಹಿಡಿಯುವಾಗ, ಅದು ಆಮಿಷ (ಭೋಗ್ಯವಸ್ತು) ವನ್ನು ಆವ ರೀತಿಯಲ್ಲಿ ಏಕಾಗ್ರಚಿತ್ತತೆಯಿಂದ ನೋಡುತ್ತಿರುವುದೋ, ಅದೇ ರೀತಿಯಲ್ಲಿಯೇ ದೇವೇಂದ್ರನೂ ಸೌಭಾಗ್ಯಮಂದಿರವನ್ನು ನೋಡುತ್ತಾ ನಿಂತುಕೊಂಡನು. ಆತನು ಕೆಲವು ನಿಮಿಷಗಳ ವರೆಗೂ ಹೀಗೆ ನೋಡಿದ ಬಳಿಕ ಪ್ರಾಚೀರದ ಒಂದೆಡೆಗೆ ಬಂದು ನಿಂತನು. ಅದೇ ಸ್ಥಲದಲ್ಲಿಯೇ ಒಂದು ಮುಳ್ಳಿನ ಸಲಾಕೆಯು ಬಗ್ಗಿಹೋಗಿ ಒಬ್ಬ ಮನುಷ್ಯನು ಒಳಗೆ ನುಗ್ಗುವಷ್ಟು ಅವಕಾಶವುಂಟಾಗಿದ್ದಿತು. ಆತನು ಇದೇ ಸ್ಥಲದಲ್ಲಿಯೇ ಬಂದು ನಿಂತು ಕೆಳಗೂ ಮೇಲೂ ನೋಡಿದನು. ದೇವೇಂದ್ರನು ವ್ಯಾಯಾಮದಲ್ಲಿ ಸುದಕ್ಷನಾಗಿದ್ದುದರಿಂದ, ಈ ಗೋಡೆಯನ್ನು ಹತ್ತುವುದು ಅವನಿಗೆ ಅಷ್ಟಾಗಿ ಕಷ್ಟವೆಂದು ತೋರಲಿಲ್ಲ. ಶರೀರದ ಲವಲವಿಕೆಯಿಂದ ಆತನು ಗೋಡೆಯನ್ನು ಹಾರಿ ಸಲಾಕೆ

ಗಳ ಸಂದುಗಳಲ್ಲಿ ನುಗ್ಗಿ ಒಳಗಿನ ಅಂಗಳದಲ್ಲಿ ದುಮ್ಮಿಕ್ಕಿದನು. ಒಳಗೆ ಎಲ್ಲೆಲ್ಲಿಯೂ ಅಂಧಕಾರವಿದ್ದುದರಿಂದ ಅವನಿಗೆ ದಿಕ್ಕೇ ತೋರದೆ ಚಿಂತಿಸತೊಡಗಿದನು:- "ರಾತ್ರಿಯ ಕಾಲ; ಅದರಲ್ಲಿಯೂ ಅಪರಿಚಿತವಾದ ಸ್ಥಲ. ಇಂತಹ ಸ್ಥಲಗಳಲ್ಲಿ ವಿಪತ್ತಿಗೇನೂ ಅಭಾವವಿಲ್ಲ. ಹುಚ್ಚರು ಓಡಿಹೋಗಬಾರದೆಂದೂ, ಓಡಿ ಹೋಗುವುದಾದರೆ ಸಿಕ್ಕಿಬೀಳಬೇಕೆಂದೂ ವೈದ್ಯನು ಈ ಪ್ರದೇಶದಲ್ಲಿ ಮಾಯಾಜಾಲವನ್ನು ಬಿತ್ತರಿಸಿರಬೇಕು. ಇಂತಹ ಬಲೆಯಲ್ಲಿ ನಾನು ಸಿಕ್ಕಿಬೀಳುವುದಾದರೆ, ನಾನು ಸಾಯುವುದಕ್ಕೆ ಬೇರೆಯ ಉಪಾಯವೇ ಅವಶ್ಯವಿಲ್ಲ. ತಿಳಿತಿಳಿದೂ ಇಂತಹ ವಿಪತ್ತಿನಲ್ಲಿ ನುಗ್ಗುವುದಕ್ಕೆ ಪ್ರೇರಿಸುತ್ತಿರುವ ನನ್ನ ಲೋಕಾನುಭವವನ್ನರಿಯದ ಬುದ್ಧಿಯನ್ನು ಎಷ್ಟು ನಿಂದಿಸಿದರೂ ಸಾಲದುದಾಗಿದೆ. ಕೆಲಸ ಮಾಡಿದುದಾಯಿತು. ಇನ್ನು ಮುಂದಿನ ಪರಿಣಾಮವನ್ನು ನೋಡಿಕೊಳ್ಳುತ್ತಿರಬೇಕೇ ಹೊರತು ಹಿಂದಿನ ಸುದ್ದಿಗಳನ್ನೇ ಎತ್ತಿಕೊಂಡು ಆಡುತ್ತಿರುವುದು ಬುದ್ಧಿಮಂತನ ಲಕ್ಷಣವಲ್ಲ."

ದೇವೇಂದ್ರನು ಬಂದುದೆಲ್ಲಾ ಬರಲೆಂದು ಧೈರ್ಯವನ್ನು ತಾಳಿ ಸೌಭಾಗ್ಯಮಂದಿರದ ಹಿಂಗಡೆಗೆ ಬಂದನು. ಅಲ್ಲಿ ದೊಡ್ಡದೊಡ್ಡ ಮರಗಳು ಬೆಳೆದಿದ್ದುವು. ಆತನು ಒಂದು ಮರವನ್ನೇರಿ ಒಂದು ಕೊಂಬೆಯ ಮೇಲೆ ನಿಂತುಕೊಂಡು ಎರಡನೆಯ ಅಂತಸ್ತಿನ ಕಡೆಗೆ ನೋಡಿದನು. ಎರಡನೆಯ ಅಂತಸ್ತಿನಲ್ಲಿ ಅನೇಕ ಕೋಣೆಗಳೂ, ಒಂದೊಂದು ಕೋಣೆಯಲ್ಲಿಯೂ ದಪ್ಪನಾದ ಸಲಾಕೆಗಳಿಂದ ರಕ್ಷಿಸಲ್ಪಟ್ಟಿದ್ದ ದೊಡ್ಡದೊಡ್ಡ ಕಿಟಕಿಗಳೂ, ಆ ಕಿಟಕಿಗಳ ಮೂಲಕವಾಗಿ ಪ್ರಕಾಶಮಾನವಾದ ದೀಪಗಳೂ ಕಾಣಿಸಿದುವು. ಈ ಕೋಣೆಗಳಲ್ಲಿ ವಾಸವಾಗಿರುವವರಾರೆಂದು ದೇವೇಂದ್ರನು ನೋಡುತ್ತಿರುವಲ್ಲಿ, ಬಗೆಬಗೆಯ ಹುಚ್ಚರು ಕಾಣಿಸಿಕೊಂಡರು. ಅವರಲ್ಲಿ ಕೆಲವರು ಹಾಡುತ್ತಿದ್ದರು; ಕೆಲವರು ಹೊಡೆದಾಡುತ್ತಿದ್ದರು; ಕೆಲವರು ಕಿಲಕಿಲನೆ ನಗುತ್ತಿದ್ದರು; ಕೆಲವರು ಬಾಯಿಗೆ ಬಂದಹಾಗೆ ಮಾತನಾಡಿಕೊಳ್ಳುತ್ತಿದ್ದರು; ಕೆಲವರು ವಿಕಟ ಸ್ವರದಿಂದ ಚೀತ್ಕಾರಮಾಡುತ್ತಿದ್ದರು. ಕೆಲವರು ಕಿಟಕಿಗಳ ಸಲಾಕೆಗಳನ್ನು ಹಿಡಿದುಕೊಂಡು ಅವನ್ನು ಬಗ್ಗಿಸುವುದಕ್ಕೆ ತಮ್ಮ ಸಾಹಸವನ್ನೆಲ್ಲಾ ವೆಚ್ಚಮಾಡುತ್ತಿದ್ದರು. ಇದನ್ನು ನೋಡಿ ಕೆಲವರು ಕುಣಿಯುತ್ತಿದ್ದರು; ಕೆಲವರು ಅಣಕಿಸುತ್ತಿದ್ದರು; ಕೆಲವರು ಬೀಳುತ್ತಿದ್ದರು; ಕೆಲವರು ಏಳುತ್ತಿದ್ದರು; ಕೆಲವರು ಕುಳಿತಿದ್ದರು; ಕೆಲವರು ಮಲಗಿದ್ದರು; ಕೆಲವರು ತಮ್ಮ ಅನ್ನವನ್ನು ಚೆಲ್ಲಾಡಿ ಮತ್ತೊಬ್ಬರ ಅನ್ನವನ್ನು ಕಿತ್ತು ತಿನ್ನುತ್ತಿದ್ದರು; ಕೆಲವರು ಬಿದ್ದಿದ್ದ ಅನ್ನದ ಅಗುಳುಗಳನ್ನು ಆರಿಸಿಕೊಂಡು ಕೋತಿಗಳ ಹಾಗೆ ಬಾಯಿಗೆ ಹಾಕಿಕೊಳ್ಳುತ್ತಿದ್ದರು. ಅಯ್ಯೋ ಪಾಪ! ಬುದ್ಧಿಯು ಸ್ವಾಧೀನ ತಪ್ಪಿತೆಂದರೆ, ಹೀಗಾಗುವುದು ಅದೊಂ

ದಚ್ಚರಿಯ ಸುದ್ಧಿಯಲ್ಲ. ಬುದ್ಧಿಯಿಲ್ಲದವರ ಬಾಳೆಲ್ಲವೂ ಹೀಗೆಯೇ ಸರಿ. ಆದರೆ ಬುದ್ಧಿಯಿಲ್ಲದವರಾರೆಂಬುದು ಇನ್ನೂ ಜಿಜ್ಞಾಸಾವಿಷಯವಾಗಿರುವುದು.

ದೇವೇಂದ್ರನು ಹುಚ್ಚರ ವಿಚಿತ್ರವ್ಯಾಪಾರವನ್ನು ನೋಡಿ ಕೊಂಡಿರುವಷ್ಟರಲ್ಲಿಯೇ ಮತ್ತೊಂದು ಕೋಣೆಯಲ್ಲಿ ಒಬ್ಬನು ಕಿಟಕಿಯ ಬಳಿ ಬಂದು ನಿಂತುಕೊಂಡು ಒಂದು ಆಯುಧದ ಸಹಾಯ್ಯದಿಂದ ಕಿಟಕಿಯ ಚೌಕಟನ್ನು ಮೀಟಿ ಎತ್ತುವ ಕೆಲಸದಲ್ಲಿ ಉದ್ಯುಕ್ತನಾಗಿದ್ದನು. ದೇವೇಂದ್ರನು ಈ ಹುಚ್ಚನ ಕೆಲಸವನ್ನು ಎವೆಯಿಕ್ಕದೆ ನೋಡುತ್ತಾ ನಿಂತುಕೊಂಡನು.

ಸಾಹಸಿಯಾದ ಹುಚ್ಚನು ಕೊಂಚ ಹೊತ್ತಿನೊಳಗಾಗಿ ಕಿಟಕಿಯ ಅಡಿಯಲ್ಲಿದ್ದ ಕೆಲವು ಇಟ್ಟಿಗೆಗಳನ್ನು ಸಡಲಿಸಿದನು. ದೇವೇಂದ್ರನು ಇದನ್ನು ನೋಡಿ ಅಚ್ಚರಿಗೊಂಡವನಾಗಿ ಹುಚ್ಚರು ಆ ಕೆಲಸವನ್ನು ತಾನೇ ಮಾಡಲಾರರು ಎಂದುಕೊಂಡನು. ರಾತ್ರಿಯ ಕಾಲದಲ್ಲಿ ಸೇವಕರ ಬಾಧೆಯಿರುವುದಿಲ್ಲವೆಂದು ಕೆಲವು ಕಾಲದ ಅನುಭವದಿಂದ ಸಿದ್ಧಾಂತಪಡಿಸಿಕೊಂಡು ಇಂತಹ ಪ್ರಾಣಾಪತ್ತಿನ ಕೆಲಸಕ್ಕೆ ಕೈಹಾಕಿದ ಹುಚ್ಚನು ನಿಜವಾಗಿಯೂ ಹುಚ್ಚನೇ—ಇಲ್ಲವೇ, ಜಾಣ ಹುಚ್ಚನೇ ಎಂಬುದು ಆತನ ಮನಸ್ಸಿನಲ್ಲಿ ಭಾಸವಾಯಿತು. ಹುಚ್ಚನು ಮುಂದೇನ ಮಾಡುವನೋ ಎಂದು ದೇವೇಂದ್ರನು ಆಶ್ಚರ್ಯದಿಂದ ತನ್ನನ್ನು ತಾನು ಮರೆತು ನೋಡುತ್ತಾ ನಿಂತುಬಿಟ್ಟನು.

ಹುಚ್ಚನು ತನ್ನ ಪ್ರಯತ್ನಬಲದಿಂದ ಕೆಲವಿಟ್ಟಿಗೆಗಳನ್ನು ಸಡಲಿಸಿ ತಾನು ತೂರಿಹೋಗುವಷ್ಟು ಅವಕಾಶವನ್ನು ಕಲ್ಪಿಸಿಕೊಂಡನು. ಬಳಿಕ ತನ್ನಲ್ಲಿದ್ದ ಬಟ್ಟೆಬರೆಗಳೆಲ್ಲವನ್ನೂ ಒಂದಕ್ಕೊಂದು ಬಲವಾಗಿ ಗಂಟುಹಾಕಿ ಹಗ್ಗದಂತೆ ಮಾಡಿಕೊಂಡು ಅದರ ಒಂದು ಕೊನೆಯನ್ನು ಸಲಾಕೆಗೆ ಬಿಗಿದು ಮತ್ತೊಂದು ಕೊನೆಯನ್ನು ಕೆಳಗೆ ಇಳೆಬಿಟ್ಟು ತಾನು ಮಾಡಿದ್ದ ರಂಧ್ರದಿಂದ ತೂರಿ ಬಟ್ಟೆಯ ಹಗ್ಗವನ್ನು ಹಿಡಿದು ಮೆಲ್ಲಮೆಲ್ಲನೆ ಕೆಳಗಿಳಿದನು.

ದೇವೇಂದ್ರನು ಇದೆಲ್ಲವನ್ನೂ ನೋಡಿ ಇಂತೆಂದುಕೊಂಡನು:—"ಹುಚ್ಚನು ಕೌಶಲದಿಂದ ಪಲಾಯನವಾಗುತ್ತಿರುವನು. ಆತ್ಮೋದ್ಧಾರಕ್ಕಾಗಿ ಇಷ್ಟು ಯುಕ್ತಿಯನ್ನು ಅವಲಂಬಿಸಿದವನು ನಿಜವಾಗಿಯೂ ಹುಚ್ಚನಿರಬಹುದೇ? ಈ ಬಗೆಯ ಅಧ್ಯವಸಾಯವೂ, ದೃಢಸಂಕಲ್ಪವೂ, ಇಂತಹ ಪ್ರತ್ಯುತ್ಪನ್ನ ಮತಿಯೂ ಹುಚ್ಚರಿಗಿರಲು ಸಾಧ್ಯವೇ?"

ದೇವೇಂದ್ರನು ಇದರ ಮರ್ಮವನ್ನೇ ಅರಿಯದವನಾಗಿ ಬೆರಗಾಗಿ ನಿಂತು ನೋಡಿದನು.

ಹುಚ್ಚನು ರಂಧ್ರವನ್ನು ಮಾಡಿದ ಆಯುಧವನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ಮೆಲ್ಲಮೆಲ್ಲನೆ ಇಳಿಯಲಾರಂಭಿಸಿದನು. ಹುಚ್ಚನು ತಾನು ಮಾಡಿದ ಕೆಲಸವು ಫಲಿಸಿತೆಂದು ತಿಳಿದು ನೆಲಕ್ಕೆ ಇಳಿದುಬರುವಷ್ಟರೊಳಗಾಗಿ ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಆಯುಧವು ದಢೀರೆಂದು ನೆಲದಮೇಲೆ ಬಿದ್ದಿತು. ಆಗತಾನೇ ಕತ್ತಲೆಯಲ್ಲಿ ಅತ್ತಕಡೆ ಬರುತ್ತಿದ್ದ ಕಾವಲುಗಾರನೊಬ್ಬನು ಈ ಶಬ್ದವನ್ನು ಕೇಳಿ ಬೆಚ್ಚಿ ಬೆದರಿದವನಾಗಿ ಗಟ್ಟಿಯಾಗಿ ಅರಚಿಕೊಂಡನು. ಇಷ್ಟರಲ್ಲಿ ವುದರೊಳಗಾಗಿ ಹುಚ್ಚನು ನೆಲಕ್ಕಿಳಿದು ಆಯುಧವನ್ನು ತೆಗೆದುಕೊಂಡು ಪ್ರಾಚೀರದ ಬಳಿಗೆ ಓಡಿಬಂದು ಅದನ್ನು ಏರುವುದರಲ್ಲಿದ್ದನು. ಆದರೆ ದುರ್ಯೋಗದಿಂದ ಅದು ಫಲಿಸಲಿಲ್ಲ. ಕಾವಲುಗಾರನು ತಡಮಾಡದೆ ಬೆನ್ನಟ್ಟಿಹೋಗಿ ಹುಚ್ಚನನ್ನು ಬಲವಾಗಿ ಹಿಡಿದುಕೊಂಡನು. ಹುಚ್ಚನು ಇದರಿಂದ ಕೊಂಚವೂ ಹೆದರದವನಾಗಿ ತನ್ನ ಆಯುಧದಿಂದ ಕಾವಲುಗಾರನ ತಲೆಯ ಮೇಲೆ ಬಲವಾದ ಪ್ರಹಾರವನ್ನು ಮಾಡಿದನು. ಕಾವಲುಗಾರನು ಪೆಟ್ಟನ್ನು ತಾಳಲಾರದವನಾಗಿ ಹುಚ್ಚನನ್ನು ಬಿಟ್ಟುಬಿಟ್ಟು ಮೂರ್ಛೆಯೋಗಿ ನೆಲದಮೇಲೆ ಬಿದ್ದುಬಿಟ್ಟನು. ಹುಚ್ಚನು ಗೋಡೆಯನ್ನು ಹಾರುವುದಕ್ಕಿದ್ದನು. ಅಷ್ಟು ಹೊತ್ತಿಗೆ ನಾಲ್ಕಾರು ಜನ ಸೇವಕರು ದೀಪವನ್ನು ಹಿಡಿದುಕೊಂಡು ಆ ಸ್ಥಳಕ್ಕೆ ಬಂದು ದೀಪದ ಬೆಳಕಿನಿಂದ ಸುತ್ತಲೂ ನೋಡಿದರು. ಹುಚ್ಚನು ಓಡಿಹೋಗುವುದರಲ್ಲಿದ್ದುದನ್ನು ನೋಡಿ, ಆ ಸೇವಕರು "ಹಿಡಿ, ಹೊಡಿ, ಬಿಡಬೇಡ, ಅದೇ ಹುಚ್ಚನು ಓಡಿಹೋಗುತ್ತಿರುವನು," ಎಂದು ಗರ್ಜಿಸುತ್ತಾ ಆತನ ಬಳಿಗೆ ಬಂದುಬಿಟ್ಟರು. ಹುಚ್ಚನು ಪ್ರಾಣದ ಆಸೆಯನ್ನು ತ್ಯಾಗಮಾಡಿ ಆಯುಧವನ್ನು ಕೈಯಲ್ಲಿ ಹಿಡಿದುಕೊಂಡು ಹತ್ತಿರಕ್ಕೆ ಬಂದವರನ್ನು ತೀರಿಸಿಬಿಡುವೆನೆಂದು ಸಂಕಲ್ಪಮಾಡಿ ಮರೆಯಾಗಿ ನಿಂತುಕೊಂಡನು.

ಸೇವಕರ ಕೋಲಾಹಲವನ್ನು ಕೇಳಿ ವೈದ್ಯವಾಗೀಶನೂ ಅಲ್ಲಿಗೆ ಬಂದನು. ದೇವೇಂದ್ರನು ಮರೆಯಲ್ಲಿದ್ದುಕೊಂಡೇ ದೀಪದ ಬೆಳಕಿನಲ್ಲಿ ಆತನಾರೆಂಬುದನ್ನು ಅರಿತುಕೊಂಡನು.

ವೈದ್ಯನು ಬಂದಕೂಡಲೆ ಸೇವಕರನ್ನು ನೋಡಿ ರೇಗಿದವನಾಗಿ— ಈ ಹುಚ್ಚನು ಮೊದಲಿನಂತೆಯೇ ಈಗಲೂ ಪಲಾಯನವಾಗುವುದಕ್ಕೆ ಯತ್ನ ಮಾಡಿರುವನು. ಇವನನ್ನು ಎಷ್ಟು ದಂಡಿಸಿದರೂ ಪ್ರಯೋಜನವಾಗಲಿಲ್ಲ. ನೀವೆಲ್ಲರೂ ಸೇರಿಕೊಂಡು ಅವನನ್ನು ಹಿಡಿಯಿರಿ; ಹಿಡಿದು ನನ್ನಲ್ಲಿಗೆ ಕರೆದುಕೊಂಡು ಬನ್ನಿರಿ. ತಪ್ಪಿದಲ್ಲಿ ನಿಮ್ಮೆಲ್ಲರಿಗೂ ಮೈ ಚರ್ಮ ಸುಲಿಸಿಬಿಡುವೆನು, ಎಂದು ಅಬ್ಬರಿಸಿದನು.

ಸೇವಕರು ವಾಗೀಶನ ಮಾತನ್ನು ಕೇಳಿ ಹೆದರಿದವರಾಗಿ ಹುಚ್ಚನನ್ನು ಹುಡುಕುವುದಕ್ಕೆ ತೆರಳಿದರು. ಮರೆಯಲ್ಲಿ ನಿಂತಿದ್ದ ಹುಚ್ಚನು ಅವರ ಕಣ್ಣಿಗೂ ಬೀಳಲಿಲ್ಲ. ವಾಗೀಶನು ವ್ಯಸ್ತನಾಗಿ ತನ್ನಲ್ಲಿದ್ದ ಪ್ರಖರವಾದ ಕ್ರೈಲಾಂದ್ರದ ದೀಪವನ್ನು ಪ್ರಜ್ವಲಿಸುವಂತೆಮಾಡಿ ಒಂದೊಂದು ಸ್ಥಲದಲ್ಲಿಯೂ ಹುಡುಕಲಾರಂಭಿಸಿದನು. ದೇವೇಂದ್ರನು ತಾನು ಎಲ್ಲಿ ಸಿಕ್ಕಿಬೀಳುವೆನೋ ಎಂದು ಹೆದರಿ ಹೆದರಿ ಒಂದು ಮರೆಯಾದ ಸ್ಥಲದಲ್ಲಿ ದೇಹವನ್ನು ಕುಗ್ಗಿಸಿಕೊಂಡು ಅಲುಗಾಡದೆ ನಿಂತಿದ್ದನು. ಆದರೂ ಅವನಿಗೆ ವಿಪತ್ತಿನಿಂದ ಪಾರಾಗುವ ಭರವಸೆಯೇ ಇರಲಿಲ್ಲ.

ವಾಗೀಶನು ತನ್ನ ದೀಪವನ್ನು ಅಲ್ಲಲ್ಲಿ ಪಸರಿಸುತ್ತಿರುವಲ್ಲಿ, ಸೇವಕನೊಬ್ಬನು ಅಡಗಿದ್ದ ಹುಚ್ಚನನ್ನು ಕಂಡುಹಿಡಿದು ಅವನನ್ನು ಹಿಡಿದುಕೊಳ್ಳುವುದಕ್ಕೆ ಹೋಗಲು, ಹುಚ್ಚನು ತನ್ನ ಆಯುಧದಿಂದ ಅವನ ತಲೆಯ ಮೇಲೆ ಬಲವಾಗಿ ಹೊಡೆದನು. ಸೇವಕನು ಏಟನ್ನು ತಾಳಲಾರದೆ 'ಅಯ್ಯೋ! ಕುಯ್ಯೋ! ಮೊರೆಯೋ! ಸತ್ತೆನಲ್ಲಾ! ಎಂದು ಆರ್ತನಾದ ಮಾಡುತ್ತಾ ನೆಲದ ಮೇಲೆ ಬಿದ್ದುಬಿಟ್ಟನು. ಉಳಿದ ಸೇವಕರೆಲ್ಲರೂ ಸಾಹಸಮಾಡಿ ಹುಚ್ಚನನ್ನು ಹಿಡಿದು ಆತನ ಕಯ್ಯಿಂದ ಆಯುಧವನ್ನು ಕಸಿದುಕೊಂಡರು. ಹುಚ್ಚನು ನಿರಾಯುಧನಾಗಿ ಸೇವಕರ ಕೈಗೆ ಸಿಕ್ಕಿಬಿದ್ದನು.

ಇದನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದ ದೇವೇಂದ್ರನ ಎದೆಯು ದಢಾಸ್ ದಢಾಸ್ ಎಂದು ಹೊಡೆದುಕೊಳ್ಳಲಾರಂಭಿಸಿತು. ದೀಪವನ್ನು ಆರಿಸಿದ್ದರೆ ಹೇಗಾದರೂ ಮಾಡಿ ತಪ್ಪಿಸಿಕೊಳ್ಳೋಣವೆಂದು ದೇವೇಂದ್ರನು ಸಮಯವನ್ನು ಕಾಯುತ್ತಿದ್ದನು. ಆದರೆ ಅದು ಸಾಗದೇ ಹೋಯಿತು. ಸೇವಕನೊಬ್ಬನು ಮತ್ತಾರಾರು ತಪ್ಪಿಸಿಕೊಂಡಿರುವರೋ ಎಂದು ಕಣ್ಣಿನಲ್ಲಿ ಕಣ್ಣಿಟ್ಟು ಹುಡುಕುತ್ತಿರುವಲ್ಲಿ ಅಡಗಿದ್ದ ದೇವೇಂದ್ರನು ಆತನ ಕಣ್ಣಿಗೆ ಬಿದ್ದನು. ಆ ಕೂಡಲೆ ಆತನು ಓಡಿ ಬಂದು ದೇವೇಂದ್ರನನ್ನು ಬಲವಾಗಿ ಹಿಡಿದುಕೊಂಡು— ಇಲ್ಲೊಬ್ಬ ಹೊಸ ಮನುಷ್ಯನು ಅಡಗಿ ನಿಂತಿರುವನು. ಈತನು ಹುಚ್ಚನನ್ನು ಕರೆದುಕೊಂಡು ಹೋಗುವುದಕ್ಕೆ ಬಂದಿರತಕ್ಕ ದುರಾತ್ಮನಾಗಿರಬಹುದು. ಈ ಮನುಷ್ಯನು ಇಲ್ಲಿಗೆ ಬಂದುದು ಹೇಗೆ? ಎಂದು ಕೂಗಿದನು.

ಈ ಧ್ವನಿಯನ್ನು ಕೇಳಿದ ಕೂಡಲೆ ವಾಗೀಶನು ಓಡಿಬಂದು ದೇವೇಂದ್ರನನ್ನು ತೀಕ್ಷ್ಣವಾದ ದೃಷ್ಟಿಯಿಂದ ಆಪಾದಮಸ್ತಕವೂ ನೋಡಿ ವಿರಸವಾದ ಸ್ವರದಿಂದ-ನೀನಾರು? ಇಲ್ಲಿಗೆ ಬಂದುದೇಕೆ? ಎಲ್ಲಿಂದಬಂದೆ? ಎಂದು ಪ್ರಶ್ನೆಮಾಡಿದನು.

ದೇವೇಂದ್ರನು ವೈದ್ಯವಾಗೀಶನ ಪ್ರಶ್ನೆಗೆ ಆವ ಉತ್ತರವನ್ನೂ ಕೊಡದೆ ಹತ್ತಿರದಲ್ಲಿ ನಿರ್ಬಂಧಿಸಲ್ಪಟ್ಟಿದ್ದ ಹುಚ್ಚನನ್ನು ನೋಡಿ, "ನಿತ್ಯಮಂಗಳೆಯು ತನ್ನ ಗುರುದೇವನಿಗೆ ಕೊಟ್ಟಿದ್ದ ಭಾವಚಿತ್ರವೂ ಈತನ ರೂಪವೂ ಒಂದೇ ಆಗಿ ಕಾಣುವುದು. ನಿಜವಾಗಿಯೂ ಆತನೇ ಈತನಾಗಿರಬಹುದೇ? ಶ್ರೀಕುಮಾರ ನೆಂಬುವನು ಈತನೇ ಆಗಿರುವಲ್ಲಿ, ಈತನೇ ಈಶ್ವರೀದುರ್ಗಕ್ಕೆ ಸರ್ವಸ್ವತ್ವಾಧಿ ಕಾರಿಯು. ಅಂತಹ ಜಹಗೀರುದಾರನಿಗೆ ಇಂತಹ ದುರ್ದಶೆಯೇ! ಹಾ ದೇವ! ನಿನ್ನ ಲೀಲಾವಿಲಾಸವೇ ವಿಲಾಸವು."

ದೇವೇಂದ್ರನು ಆವ ಉತ್ತರವನ್ನೂ ಕೊಡದೆ ಸುಮ್ಮನಿರುವುದನ್ನು ನೋಡಿ ವಾಗೀಶನು ಭೃತ್ಯನನ್ನು ಕರೆದು—ಈತನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗಿ, ಓಡಿಹೋಗಲು ಸಾಧ್ಯವಿಲ್ಲದ ಹಾಗೆ ಈತನ ಕೈಕಾಲುಗಳನ್ನು ಬಿಗಿ ಯಾಗಿ ಕಟ್ಟಿಹಾಕಿರಿ, ಎಂದು ಕಟ್ಟಪ್ಪಣೆಯನ್ನು ಮಾಡಿದನು.

ಭೃತ್ಯನು ಅಪ್ಪಣೆಯಂತೆ ದೇವೇಂದ್ರನ ಕೈಗಳನ್ನು ಕಟ್ಟುವುದಕ್ಕೆ ಹೋಗಲು, ದೇವೇಂದ್ರನು ತಪ್ಪಿಸಿಕೊಳ್ಳಲು ತನ್ನ ಸಾಹಸವೆಲ್ಲವನ್ನೂ ವೆಚ್ಚ ಮಾಡಿನೋಡಿದನು. ಅವುದೂ ಪ್ರಯೋಜನವಾಗದಿರಲು, ದೇವೇಂದ್ರನು ಬಾಯ ಮುಚ್ಚಿಕೊಂಡು ಭೃತ್ಯನ ಹಿಂದೆಹಿಂದೆಯೇ ತೆರಳಿದನು. ಆಗ ತನ್ನನ್ನು ಕೊಲ್ಲದೆ ನಿರ್ಬಂಧದಲ್ಲಿಡುವುದಾದರೂ ಎಷ್ಟೋ ಕ್ಷೇಮವೆಂದು ದೇವೇಂದ್ರನು ತನ್ನಲ್ಲಿ ತಾನೇ ಆಲೋಚಿಸಿಕೊಳ್ಳುತ್ತಾ ತುಟಿ ಪಟಕ್ಕನ್ನದೆ ಹೊರಟನು. ಭೃತ್ಯನು ದೇವೇಂದ್ರನನ್ನು ವೈದ್ಯನ ಉಪವೇಶನಮಂದಿರದಲ್ಲ ಹಿಡಿತಂದು ನಿಲ್ಲಿಸಿ ಹೊರಟುಹೋದನು.

ಭೃತ್ಯನು ಹೊರಟುಹೋದ ಬಳಿಕ ವೈದ್ಯನು ಬಾಗಿಲನ್ನು ಮುಚ್ಚಿಕೊಂಡು ದೇವೇಂದ್ರನ ಇದಿರಿನಲ್ಲಿ ಬಂದು ನಿಂತನು. ಆತನ ಅಂಗಾಂಗಗಳೆಲ್ಲವೂ ಕೋಪಾಗ್ನಿಯಿಂದ ದಹಿಸಿಹೋಗಿ ಕಣ್ಣುಗಳಿಂದ ಕಿಡಿಗಳುದುರುತ್ತಿದ್ದುವು. ಇದನ್ನು ನೋಡಿ ದೇವೇಂದ್ರನು ತಾನು ಮಾಡಿದ ಕೆಲಸವು ಪ್ರಮಾದಕ್ಕಿಟ್ಟಿತೆಂದು ತಿಳಿದು ಅಪ್ರತಿಭನಾಗಿ ಸುಮ್ಮನೆ ನಿಂತಿದ್ದನು.

ವೈದ್ಯನು ದೀಪದ ಬೆಳಕಿನಲ್ಲಿ ದೇವೇಂದ್ರನನ್ನು ಮೇಲಿನಿಂದ ಕೆಳಗಿನ ವರೆಗೂ ನೋಡಿದ ಬಳಿಕ ದೇವೇಂದ್ರನ ಗಡ್ಡವನ್ನೂ ಮೀಸೆಯನ್ನೂ ಹಿಡಿದೆಳೆ ದನು. ಅವು ಸರಕ್ಕನೆ ಜಾರಿಬಿದ್ದುಹೋದುವು.

ವೈದ್ಯನು ಹೀ ಹೀ ಎಂದು ಪಿಶಾಚದ ನಗೆಯೊಂದನ್ನು ನಕ್ಕು—ಎಲಾ! ನನ್ನ ಅನುಮಾನವು ಸತ್ಯವಾಗಿಯೇ ಪರಿಣಮಿಸಿತು. ಆರೊಡನೆ ಪರಿಹಾಸ

ಮಾಡುವುದಕ್ಕೆ ಬಂದಿರುವೆ? ನಾನು ನಿನ್ನನ್ನು ನಿನ್ನೆಯ ದಿನ ಅರಿಂದಮನೊಡನೆ ಬೇಟಿಯಾಡುವುದಕ್ಕೆ ಬಂದಿದ್ದುದನ್ನು ನೋಡಿದೆನಲ್ಲವೇ! ಒಂದು ವ್ಯಕ್ತಿಯು ಒಂದು ಸಲ ನನ್ನ ಕಣ್ಣಿಗೆ ಬಿದ್ದರೆ ಸಾಕು. ಅದು ಯಮನ ಕಣ್ಣಿಗೆ ಬಿದ್ದಂತೆಯೇ ಸರಿ. ನಿಜವಾಗಿ ಹೇಳು, ನೀನು ಅರಿಂದಮನ ಕಡೆಯವನಲ್ಲವೇ? ಸುಳ್ಳುಹೇಳುವುದರಿಂದ ಆವ ಪ್ರಯೋಜನವೂ ಇರಲಾರದು, ಎಂದು ಮಾತನಾಡಿಸಿದನು.

ದೇವೇಂದ್ರ—ನಿಮ್ಮಂತಹ ಪಿಶಾಚರ ಇದಿರಿನಲ್ಲಿ ಸತ್ಯವನ್ನೇ ನುಡಿದರೂ ಆವ ಪ್ರಯೋಜನವೂ ಆಗಲಾರದು, ಆದರೂ ಸತ್ಯವನ್ನೇ ಹೇಳುವೆನು. ಅರಿಂದಮಮಹಾಶಯನೊಡನೆ ನನ್ನನ್ನು ತಾವು ನೋಡಿದುದು ಸತ್ಯವಾದುದು. ನನ್ನನ್ನು ದೇವೇಂದ್ರವಿಜಯನೆಂದು ಕರೆವರು.

ವಾಗೀಶ—(ಕರ್ಕಶ ಸ್ವರದಿಂದ) ಹುಚ್ಚರೆಲ್ಲರೂ ಸತ್ಯವನ್ನೇ ನುಡಿವರು; ನೀನೂ ಸತ್ಯವನ್ನೇ ನುಡಿದಿರುವೆ. ಅದುಕಾರಣ ನೀನು ಹುಚ್ಚನಾಗಿರಬೇಕು. ನೀನು ಹುಚ್ಚನಲ್ಲದಿದ್ದರೆ, ಹುಚ್ಚರ ವೈದ್ಯಶಾಲೆಯನ್ನು ಹುಡುಕಿಕೊಂಡು ಬರಲು ಕಾರಣ ತಾನೇ ಏನಿದ್ದಿತು? ನೀನಾಗಿಯೇ ಇಲ್ಲಿಗೆ ಬಂದುದು ಎಷ್ಟೋ ಉಪಕಾರವೇ ಆದಂತಾಯಿತು. ಹುಚ್ಚರನ್ನು ಹುಡುಕಿಕೊಂಡು ಹೋಗುವ ಕಷ್ಟವು ನನಗೆ ತಪ್ಪಿದುದಕ್ಕಾಗಿ ನಾನೇ ಧನ್ಯನು. ನಿನಗಾಗಿಯೇ ನಿರ್ಜನವಾದ ಕೋಣೆಯೊಂದು ಸಿದ್ಧಪಡಿಸಲ್ಪಟ್ಟಿರುವುದು. ಅಲ್ಲಿ ನಿನ್ನನ್ನು ನಿರ್ಬಂಧಿಸಿಡುವೆನು. ಇಲ್ಲಿಯೇ ಇದ್ದುಕೊಂಡು ಆರಾದರೂ ನಿನ್ನನ್ನು ತಿಂಗಳು ಗಟ್ಟಲೆ ಹುಡುಕಿದರೂ ನೀನಿರುವ ಸ್ಥಲವು ಮಟ್ಟಿಗೆ ಆರಿಗೂ ಗೋಚರಿಸಲೊಲ್ಲದು. ನಿಮ್ಮಂತಹ ವರಿಗೆ ಅಂತಹ ಸ್ಥಲವೇ ತಕ್ಕುದು.

ದೇವೇಂದ್ರ— ಹುಚ್ಚರ ವಿಷಯದಲ್ಲಿ ನೀವು ತೋರಿರುವ ಅನುಗ್ರಹವು ಅನ್ಯಾದೃಶವಾದುದು.

ದೇವೇಂದ್ರನಾಡಿದ ಈ ಮರ್ಮಭೇದಕವಾದ ಮಾತನ್ನು ಕೇಳಿದ ವಾಗೀಶನು ಉಕ್ಕಿಬರುತ್ತಿದ್ದ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು—ದೇವೇಂದ್ರ! ಅರಿಂದಮನು ರಾಜಮಾರ್ತಂಡನಿಗೆ ಅತಿಥಿಯಾಗಿ ಬರಲು ಕಾರಣವೇನು? ಎಂದು ಕೇಳಿದನು.

ದೇವೇಂದ್ರ— ಇಂದಿರಾಕಾಂತನೆಂಬ ದೊಡ್ಡಮನುಷ್ಯನನ್ನು ಕೊಂದ ಪಾಪಿಗಳನ್ನು ಪತ್ತೆಮಾಡುವುದಕ್ಕಾಗಿ.

ವಾಗೀಶ—ಮತ್ತಾವ ಉದ್ದೇಶವೂ ಇಲ್ಲವೇ?

ದೇವೇಂದ್ರ— ಇಲ್ಲ.

ವಾಗೀಶ— ಸುಳ್ಳು. ಈ ರಾತ್ರಿಯಲ್ಲಿ ತಪ್ಪಿಸಿಕೊಳ್ಳುವುದಕ್ಕೆ ಯತ್ನ ಮಾಡಿದ ಹುಚ್ಚನನ್ನು ನಿನ್ನ ಅರಿಂದಮನು ಬಲ್ಲನು. ಅದುಕಾರಣವೇ ಅರಿಂದಮನು ಆತನನ್ನು ಪತ್ತೇಮಾಡಿಕೊಂಡು ಬರುವುದಕ್ಕಾಗಿಯೇ ನಿನ್ನನ್ನು ಇಲ್ಲಿಗೆ ಗೋಪ್ಯವಾಗಿ ಕಳುಹಿರುವನು ಇದು ನಿಜವೋ, ಸುಳ್ಳೋ? ಸುಳ್ಳಾಡುವುದಾದರೆ ನಿನ್ನ ತಲೆಯ ಬುರುಡೆಯನ್ನು ಈಗಲೇ ಹಾರಿಸಿಬಿಡುವೆನು.

ದೇವೇಂದ್ರನು ಈ ಮಾತಿಗೆ ಉತ್ತರ ಕೊಡಲಿಲ್ಲ. ವಾಗೀಶನು ತನ್ನ ಪ್ರಶ್ನೆಗೆ ಉತ್ತರ ಬಾರದಿರುವುದನ್ನು ನೋಡಿ ಮತ್ತಷ್ಟು ರೇಗಿದವನಾಗಿ ದೇವೇಂದ್ರನ ಕಪೋಲದಲ್ಲಿ ಫಳೀರೆಂದು ಬಲವಾದ ಪೆಟ್ಟನ್ನು ಕೊಟ್ಟು—ಈಗಲಾದರೂ ನನ್ನ ಮಾತಿಗೆ ಉತ್ತರ ಕೊಡು, ಎಂದು ಹೆಬ್ಬುಲಿಯಂತೆ ಅಬ್ಬರಿಸಿದನು.

ದೇವೇಂದ್ರ— ನೀನು ಬೇಕಾದುದನ್ನು ಮಾಡು, ನನ್ನನ್ನು ಕೊಲ್ಲುವುದಾದರೂ ಕೊಲ್ಲು. ನಾನು ನಿನ್ನ ಪ್ರಶ್ನೆಗೆ ಉತ್ತರ ಕೊಡಲು ಬಾಧ್ಯನಿಲ್ಲ.

ವೈದ್ಯನು ಈ ಮಾತನ್ನು ಕೇಳಿ ಹುಬ್ಬು ಗಂಟಿಕ್ಕಿ ಕ್ಷಣಕಾಲ ನೀರವನಾಗಿದ್ದು ಬಳಿಕ 'ಆರಲ್ಲಿ?' ಎಂದು ಕೂಗಲಾಗಿ ಭೃತ್ಯನೊಬ್ಬನು ಓಡಿ ಬಂದು 'ಏನಪ್ಪಣೆ' ಎಂದು ಕೈಕಟ್ಟಿ ನಿಂತುಕೊಂಡನು.

ವಾಗೀಶ—ಈತನನ್ನು ಆ ಭಯಂಕರವಾದ ಕೋಣೆಯಲ್ಲಿ ನಿರ್ಬಂಧಿಸು. ಈತನು ನನ್ನ ಪ್ರಶ್ನೆಗೆ ಸರಿಯಾದ ಉತ್ತರ ಕೊಡುವ ವರೆಗೂ, ಈತನಿಗೆ ಅನ್ನಪಾನಗಳಾವುದನ್ನೂ ಕೊಡಲಾಗದು. ಈತನು ಹಸಿವೆಯಿಂದಲೂ ಬಾಯಾರಿಕೆಯಿಂದಲೂ ಅಲ್ಲಿಯೇ ಸಾಯಲಿ.

ಯಜಮಾನನ ಅಪ್ಪಣೆಯಂತೆ ಸೇವಕನು ದೇವೇಂದ್ರನನ್ನು ದರದರನೆ ಎಳೆದುಕೊಂಡು ಹೋದನು. ಬಳಿಕ ದೇವೇಂದ್ರನು ನೆಲಮಾಳಿಗೆಯ ಕತ್ತಲೆಯ ಕೋಣೆಯೊಂದರಲ್ಲಿ ಬಂಧಿಸಲ್ಪಟ್ಟನು. ಆ ಕೋಣೆಯ ದುರವಸ್ಥೆಯು ಬಲು ಶೋಚನೀಯವಾಗಿದ್ದಿತೆಂದು ಹೇಳುವುದರಿಂದಲೇ ನಮ್ಮ ಪ್ರಿಯಪಾಠಕ ಮಹಾಶಯರು ಆ ಕೋಣೆಯ ಲಕ್ಷಣವನ್ನು ಚೆನ್ನಾಗಿಯೂ ಅರಿಯಬಹುದು. ಭೃತ್ಯನು ಇಂತಹ ಕೋಣೆಯೊಳಗೆ ದೇವೇಂದ್ರನನ್ನು ತಳ್ಳಿ—ಸ್ವಾಮಿ! ತಾವು ಈ ಕೋಣೆಯಲ್ಲಿದ್ದುಕೊಂಡು ಸುಖಶಾಂತಿಗಳನ್ನು ಅನುಭವಿಸೋಣವಾಗಲಿ, ಎಂದು ಹೇಳಿ ಬಾಗಿಲಿಗೆ ಬೀಗ ಹಾಕಿಕೊಂಡು ಹೊರಟೇ ಹೋದನು.

ದೇವೇಂದ್ರನು ತನಗೆ ಇಲ್ಲಿಯೇ ಸಮಾಧಿಸ್ಥಾನವೇರ್ಪಟ್ಟಿತೆಂದು ಸಿದ್ಧಾಂತಪಡಿಸಿಕೊಂಡು ಆ ಕಗ್ಗತ್ತಲೆಯಲ್ಲಿ ದಿಕ್ಕುತೋರದವನಾಗಿ ನೆಲದ ಮೇಲೆ ಕುಳಿತುಕೊಂಡು ತನ್ನ ಅವಿವೇಕವನ್ನು ಪರಿಪರಿಯಾಗಿ ನಿಂದಿಸಿಕೊಂಡನು.

*

# ತೃತೀಯಾವತಾರ

---

## ಮೊದಲನೆಯ ವಿಲಾಸ

### ಕೋಟೇಶ್ವರನ ಕರ್ಮಫಲ

ದೇವೇಂದ್ರನು ಭೂತನ ಕಣಿವೆಯ ಹೊಗೆ ಬಂಡಿಯ ನಿಲ್ದಾಣದಲ್ಲಿ ಸಲ್ಲಾಪ ಯಂತ್ರದ ಮೂಲಕವಾಗಿ ಅರಿಂದಮನೊಡನೆ ಆವ ದಿನ ಮಾತನಾಡಿದ್ದನೋ ಆ ದಿನವು ಕಳೆದು ಅದರ ಮೇಲೆ ಮತ್ತೆರಡು ದಿನಗಳೂ ಕಳೆದು ಹೋದುವು. ಈ ಎರಡು ದಿನಗಳಲ್ಲಿ ದೇವೇಂದ್ರನಿಂದ ಹೆಚ್ಚಿನ ಸಮಾಚಾರವಾವುದೂ ಬಾರ ದಿರುವುದನ್ನು ನೋಡಿ ಅರಿಂದಮನು ಅತಿಯಾಗಿ ಕತಿಗೊಂಡನು. 'ದೇವೇಂದ್ರನು ಮೌನವಾಗಿರಲು ಕಾರಣವೇನು? ವಾಗೀಶನೇನಾದರೂ ನಮ್ಮ ಮಗುವನ್ನು ನಿರ್ಬಂಧದಲ್ಲಿಟ್ಟಿರುವನೇ— ಇಲ್ಲವೇ, ಸ್ವಾಮಿಪಾದಾರವಿಂದವನ್ನು ಸೇರಿಸಿ ಬಿಟ್ಟಿರುವನೇ?' ಎಂಬ ಶಂಕೆಯಿಂದ ಅವನ ಮನವು ಕಳವಳಗೊಂಡಿತು.

ಅರಿಂದಮನಿಗೆ ಕಾರ್ಯದ್ವಯದಲ್ಲಿ ವ್ಯಾಕುಲತೆಯು ತಲೆದೋರಿತು. ಒಂದು ಕಡೆ ತಾಂತಿಯಾಭಿಲ್ಲನನ್ನು ಹೇಗಾದರೂ ಮಾಡಿ ಸರಕಾರಕ್ಕೆ ತಂದೊಪ್ಪಿಸಬೇಕು. ಮತ್ತೊಂದು ಕಡೆ ದೇವೇಂದ್ರನು ಕಷ್ಟಕ್ಕೆ ಸಿಕ್ಕಿರುವ ಪಕ್ಷದಲ್ಲಿ ಆತನನ್ನು ಕಾಲ ಹರಣಕ್ಕೆಡೆಗುಡದೆ ಉದ್ಧಾರಮಾಡಬೇಕು. ಇವೆರಡರಲ್ಲ ಆವುದು ಅವಶ್ಯಕರ್ತವ್ಯ ವೆಂಬುದನ್ನು ಅರಿಂದಮನು ಮೊದಮೊದಲು ನಿರ್ಧರಿಸಲಾರದವನಾಗಿ ಬಲು ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡು ಪೇಚಾಡಿಹೋದನು.

ಬಲು ಹೊತ್ತು ಚಿಂತಿಸಿದ ಬಳಿಕ ಅರಿಂದಮನು ಸಿದ್ಧಾಂತಕ್ಕೆ ಬಂದುದೇ ನೆಂದರೆ:—"ತಪ್ಪುಮಾಡಿದವರನ್ನು ಪತ್ತೆಮಾಡುವುದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವೆನು,—ಎಂದ ಮೇಲೆ, ಅಪರಾಧಿಗಳನ್ನು ಬಿಟ್ಟುಹೋಗುವುದು ಕಾರ್ಯ ಲಕ್ಷಣವಲ್ಲ. ನಾನು ಇದೇ ಮುಖ್ಯವಾದ ಕೆಲಸವೆಂದು ಇಲ್ಲಿಯೇ ಕಾಲ ಕಳೆವು ದಾದರೆ, ಪ್ರಾಣಾಪತ್ತಿನಲ್ಲಿ ಸಿಕ್ಕಿಕೊಂಡಿರಬಹುದಾದ ನನ್ನ ಪ್ರಿಯಶಿಷ್ಯನ ಪಾಡೇ ನಾಗಬೇಕು? ಅಪರಾಧಿಯಾದ ತಾಂತಿಯಾಭಿಲ್ಲನು ಇಂದಲ್ಲದಿದ್ದರೆ ಎಂದಾದ ರೊಂದು ದಿನ ಸಿಕ್ಕಿಯೇ ಸಿಕ್ಕುವನು. ಶತ್ರುವಿನ ಕೈಯಲ್ಲಿ ಸಿಕ್ಕಿಕೊಂಡಿರುವ ದೇವೇಂದ್ರನು ಕೈಬಿಟ್ಟು ಹೋಗುವುದಾದರೆ, ನನ್ನ ಕೈ ಮುರಿದಂತಾಗಿಹೋಗು ವುದು. ಬಳಿಕ ನಾನು ಬದುಕಿಯೂ ಪ್ರಯೋಜನವಿಲ್ಲ. ಈ ಎರಡು ಗುರುತರ

ವಾದ ಕಾರ್ಯಗಳಲ್ಲಿ ದೇವೇಂದ್ರನನ್ನು ಉದ್ಧರಿಸುವುದೇ ನನ್ನ ಪ್ರಥಮ ಕರ್ತವ್ಯವಾಗಿರುವುದು. ”

ಅರಿಂದಮನು ಹೀಗೆ ಸಿದ್ಧಾಂತಪಡಿಸಿಕೊಂಡವನಾಗಿ ಮರುದಿನ ರಾಜ ಮಾರ್ತಂಡನ ಅಪ್ಪಣೆಯನ್ನು ಪಡೆದುಕೊಂಡವನಾಗಿ ಭೂತನ ಕಣಿವೆಗೆ ತೆರಳಿದನು. ಅರಿಂದಮನು ಯಥಾಸಮಯದಲ್ಲಿ ಹೊಗೆ ಬಂಡಿಯನ್ನು ಹತ್ತಿ ಭೂತನ ಕಣಿವೆ ಯೆಂಬ ನಿಲ್ದಾಣದಲ್ಲಿ ಇಳಿದನು. ಅದೇ ಸ್ಥಳದಲ್ಲಿಯೇ ಮತ್ತಿಬ್ಬರೂ ಇಳಿಯಲು, ಅರಿಂದಮನು ಅವರನ್ನು ನೋಡಿ ‘ ತಾಂತಿಯಾ ಭಿಲ್ಲನೇನಾದರೂ ಅನುಸರಿಸಿ ಬಂದಿರಬಹುದೇ ’ ಎಂದು ಸಂಶಯಪಟ್ಟವನಾಗಿ ಅವರನ್ನು ತಲೆಯಿಂದ ಕಾಲಿನ ವರೆಗೂ ದುರದುರನೆ ನೋಡಿದ ಬಳಿಕ ಆರೋ ದಾರಿಗರಿರಬಹುದೆಂದು ಅರಿತು ಕೊಂಡವನಾಗಿ ತನ್ನ ದಾರಿವಿಡಿದು ತೆರಳಿದನು.

ಆ ಸಮಯಕ್ಕೆ ಸರಿಯಾಗಿ ಸೂರ್ಯದೇವನು ಅಸ್ತೋನ್ಮುಖನಾಗಿದ್ದನು. ರಾತ್ರಿಯಾದ ಮೇಲೆ ಪರಸ್ಥಲಗಳಲ್ಲಿ ಸ್ವೇಚ್ಛೆಯಿಂದ ಸಂಚರಿಸುವುದು ಅಪಾಯ ಕರವೆಂದು ಅರಿಂದಮನು ಸಮೀಪದಲ್ಲಿದ್ದ ಪಾನಾಹಾರ ಮಂದಿರವನ್ನು ಹುಡುಕಿ ಕೊಂಡು ಹೋದನು. ಅಲ್ಲಲ್ಲ ವಿಚಾರಿಸಿದ ಬಳಿಕ ಭೋಜನಶಾಲೆಯು ಗೋಚರಿ ಸಲು, ಅರಿಂದಮನು ಅಲ್ಲಿಗೆ ಬಂದು ಸೇರಿದನು. ಇದೇ ಸ್ಥಳದಲ್ಲಿಯೇ ದೇವೇಂ ದ್ರನು ಕೆಲವು ದಿನಗಳ ಹಿಂದೆ ಬಂದು ತಂಗಿದ್ದನೆಂಬುದನ್ನು ನಮ್ಮ ಪ್ರಿಯ ಪಾಠಕ ಮಹಾಶಯರು ಅರಿತುಕೊಳ್ಳತಕ್ಕುದು. ಅರಿಂದಮನು ಆ ಮಂದಿರದೊಳಗೆ ಪ್ರವೇಶಮಾಡಿದಾಗ ಮಂದಿರದ ಯಜಮಾನ ಹೊರತಾಗಿ ಮತ್ತಾರೂ ಇರಲಿಲ್ಲ. ಅರಿಂದಮನು ಒಂದಾಸನದ ಮೇಲೆ ಕುಳಿತುಕೊಂಡು ಪಾನೀಯವನ್ನು ತಂದು ಕೊಡುವಂತೆ ಯಜಮಾನನಿಗೆ ತಿಳಿಸಿದನು. ಯಜಮಾನನು ಅರಿಂದಮನನ್ನು ಉಪಚರಿಸಿದ ಮೇಲೆ ಅರಿಂದಮನು ಯಜಮಾನನನ್ನು ಕುರಿತು ಲೋಕಾಭಿ ರಾಮದ ಮಾತುಗಳನ್ನಾಡಿದ ಬಳಿಕ— ಮಹಾಶಯ! ಇಲ್ಲಿ ಜನರಾರೂ ಇಲ್ಲ ದಿರುವುದನ್ನು ನೋಡಿದರೆ, ಈ ಸ್ಥಲದಲ್ಲಿ ಪರಸ್ಥಲದವರು ಬಂದಿರುವುದು ಕಡಮೆ ಯೆಂದು ತೋರುವುದು, ಎಂದು ಸ್ವಕಾರ್ಯಸಾಧನೋಪಾಯದ ಪ್ರಶ್ನೆಯನ್ನು ಮಾಡಿದನು.

ಯಜಮಾನ— ಪರಸ್ಥಲದವರು ಬರದೇ ಉಂಟೆ, ಮಹಾಶಯ! ಅವರು ಬಾರದಿದ್ದಲ್ಲಿ ನಾನು ಹೊಟ್ಟೆಹೊರೆಯುವ ಬಗೆ ಹೇಗೆ? ಚಳಿಗಾಲಕ್ಕಿಂ ತಲೂ ಬೇಸುಗೆಯಲ್ಲಿ ಪರಸ್ಥಲದವರು ಇಲ್ಲಿಗೆ ವಿಶೇಷವಾಗಿ ಬಂದು ಹೋಗುವರು. ಇಂತಹ ಕಾಲಗಳಲ್ಲಿಯೂ ಆಗಿಂದಾಗ ಒಬ್ಬಿಬ್ಬರು ಬಂದೇ ಬರುವರು. ಇಂದಿಗೆ ಮೂರು ನಾಲ್ಕು ದಿನಗಳ ಹಿಂದೆ ವಿದೇಶದ ಯುವಕನೊಬ್ಬನು ಬರದು ಇಲ್ಲಿಯೇ

ವಾಸವಾಗಿದ್ದನು. ಇಂದು ತಾವು ಬಂದಿರೋಣವಾಗಿದೆ. ಆವುದೋ ಒಂದು ರೀತಿಯಲ್ಲಿ ದೇವರು ಜೀವನದ ಮಾರ್ಗವನ್ನು ತೋರುವನು.

ಅರಿಂದವು—ಆತನು ಇಲ್ಲಿ ಎಷ್ಟು ದಿನಗಳು ವಾಸವಾಗಿದ್ದನು? ತಮ್ಮ ಬಾಡಿಗೆಯ ದರವೆಷ್ಟು?

ಯಜಮಾನ—ಆತನು ಇಲ್ಲಿ ಒಂದು ವಾರವಿರುವುದಾಗಿ ಹೇಳಿ ಬಾಡಿಗೆಯನ್ನು ಮುಂಗಡವಾಗಿಯೇ ಸಲ್ಲಿಸಿ ಬಂದ ದಿನದ ರಾತ್ರಿಯಲ್ಲಿಯೇ ಹೊರಗೆ ಹೋದವನು ಇಂದಿನವರೆಗೂ ಹಿಂದಿರುಗಿ ಬರಲಿಲ್ಲ. ಆತನು ಹೀಗೆ ಮಾಡಲು ಕಾರಣವೇನೋ ನನಗೆ ತಿಳಿಯದು ನನ್ನಲ್ಲಿಯೇ ವಾಸಮಾಡತಕ್ಕವರಿಗೆ ದಿನವೊಂದಕ್ಕೆ ಒಂದು ರೂಪಾಯಿಯಂತೆ ದರವನ್ನು ಏರ್ಪಡಿಸಿರುವೆನು. ಇಷ್ಟಪಡುವುದಾದರೆ ತಾವೂ ಒಂದು ಪ್ರಶಸ್ತವಾದ ಕೋಣೆಯನ್ನು ಬಾಡಿಗೆಗೆ ತೆಗೆದುಕೊಳ್ಳಬಹುದು.

ಈ ಮಾತನ್ನು ಕೇಳಿ ಅರಿಂದಮನು ಚಿಂತಿಸಿದನು :—"ಮಂದಿರದ ಯಜಮಾನನು ದೇವೇಂದ್ರನ ವಿಷಯವಾಗಿಯೇ ಹೇಳಿರಬೇಕು. ಹೆಚ್ಚಾಗಿ ಹಣವನ್ನು ಮೊದಲೇ ಸಲ್ಲಿಸಿರುವವನು ಇಲ್ಲಿಗೆ ಬರದೇ ಮತ್ತೆಲ್ಲಿಗೆ ಹೋದಾನು? ಆತನನ್ನು ಆರೋ ನಿರ್ಬಂಧಿಸಿರಬೇಕು. ಇಲ್ಲದಿದ್ದರೆ ದೇವೇಂದ್ರನು ಹೇಳದೆ ಕೇಳದೆ ಹೀಗೆ ತಪ್ಪಿಸಿಕೊಳ್ಳಲು ಕಾರಣವೇನು? ಈ ವಿಷಯದಲ್ಲಿ ಅಚಾತುರ್ಯವೇನೋ ನಡೆದಿರಬೇಕು. ಇದರಲ್ಲಿ ಕಿಂಚಿತ್ತಾದರೂ ಸಂಶಯಪಡಬೇಕಾದುದಿರುವುದಿಲ್ಲ. ಇದರ ತತ್ತ್ವವನ್ನು ಹೇಗಾದರೂ ಮಾಡಿ ಹೊರಪಡಿಸಬೇಕು, ಇರಲಿ."

ಹೀಗೆಂದುಕೊಂಡು ದೇವೇಂದ್ರನ ವಿಷಯವಾಗಿ ಹೆಚ್ಚಿನ ಸುದ್ದಿಯನ್ನು ತಿಳಿಯಲೋಸುಗ ಅರಿಂದಮನು— ಮಹಾಶಯ! ಹುಡುಗನು ಹೊರಟುಹೋಗುವಾಗ ತನ್ನ ಸಾಮಗ್ರಿಗಳನ್ನು ತೆಗೆದುಕೊಂಡು ಹೋದನೋ—ಇಲ್ಲವೇ, ಬರಿಯ ಕೈಯಲ್ಲಿ ಹೋದನೋ? ಎಂದು ಪ್ರಶ್ನೆಮಾಡಿದನು.

ಯಜಮಾನ— ಆತನು ಏನನ್ನೂ ತೆಗೆದುಕೊಂಡು ಹೋಗಲಿಲ್ಲ. ಹುಡುಗರ ಬುದ್ಧಿಯೆಲ್ಲವೂ ಹೀಗೆಯೇ ಸರಿಯೆಂದು ಹೇಳುವುದಕ್ಕಾಗುವುದಿಲ್ಲ. ಆತನು ಇಲ್ಲಿಗೆ ಬಂದ ಮೇಲೆ ಹೊಗೆ ಬಂಡಿಯ ನಿಲ್ದಾಣಕ್ಕೆ ಹೋಗಿ ಬಂದು ಬಳಿಕ ಗ್ರಾಮದ ಕಡೆಗೆ ಹೋದನು. ಮತ್ತೆ ಆತನನ್ನು ನಾನು ನೋಡಲಿಲ್ಲ. (ಕೊಂಚ ಹೊತ್ತು ಸುಮ್ಮನಿದ್ದು) ಆತನು ಸೌಭಾಗ್ಯ ಮಂದಿರವನ್ನು **ನೋಡುವುದಕ್ಕೇನಾದರೂ ಹೋಗಿ**—

ಅರಿಂದಮ— (ಆತುರತೆಯಿಂದ) ಸೌಭಾಗ್ಯಮಂದಿರ ವೆಂದರೇನು, ಮಹಾಶಯ ?

ಯಜಮಾನ— ಈ ಊರಲ್ಲಿರುವ ಹುಚ್ಚರ ವೈದ್ಯಶಾಲೆಗೆ ಸೌಭಾಗ್ಯ ಮಂದಿರವೆಂದು ಹೆಸರು.

ಅರಿಂದಮ— (ಆದರದಿಂದ) ಅದಿರುವುದೆಲ್ಲಿ ?

ಯಜಮಾನ— ಅದು ಇಲ್ಲಿಂದ ಎರಡು ಮೈಲಿಗಳಷ್ಟು ದೂರವೂ ಇಲ್ಲ. ದುರ್ಭಾಗ್ಯರಿರುವ ಸ್ಥಲಕ್ಕೆ ಸೌಭಾಗ್ಯಮಂದಿರವೆಂಬದೊಂದು ಆಶ್ಚರ್ಯವು. ಕುರುಡಿಗೆ ವಿಶಾಲಾಕ್ಷಿಯೆಂದು ಹೆಸರಿರುವುದಾದರೆ, ಅದು ಎಷ್ಟು ಶೋಭಾವಹವೋ ಸೌಭಾಗ್ಯಮಂದಿರವೆಂಬುದೂ ಅಷ್ಟೇ ಶೋಭಾವಹವು. (ಹೀಗೆ ಹೇಳಿ ನಕ್ಕನು.)

ಅರಿಂದಮ— ಸೌಭಾಗ್ಯಮಂದಿರದಲ್ಲಿ ಹುಚ್ಚರು ಗಿಚ್ಚರೇನಾದರೂ ಇರುವರೋ ?

ಯಜಮಾನ—ಹುಚ್ಚರಿಗೇನು ದಾರಿದ್ರ್ಯ ? ನೂರಾರು ಮಂದಿ ಹುಚ್ಚರು ಅನ್ನಪಾನಾದಿಗಳಿಂದ ರಕ್ಷಿತರಾಗಿ ಚಿಕಿತ್ಸೆಯನ್ನು ಪಡೆದುಕೊಳ್ಳುತ್ತಿರುವರು. ವೈದ್ಯ ವಿದ್ಯಾವಿಶಾರದನಾದ ಮನೋಜಮೋಹನ ವಾಗೀಶನೆಂಬುವನು ಆ ಮಂದಿರದ ಅಧ್ಯಕ್ಷನು. ಆತನ ದಯೆಯಿಂದ ದೇಶದ ಹುಚ್ಚರು ಅನ್ನ ಕಂಡು ಬದುಕು ತ್ತಿರುವರು.

ಅರಿಂದಮನು ಮುಂದೆ ಮಾತ್ರಾವ ಮಾತನ್ನೂ ಆಡದೆ ಯಜಮಾನನ ಅಪ್ಪಣೆಯನ್ನು ಪಡೆದುಕೊಂಡು ಹೊಗೆಬಂಡಿಯ ನಿಲ್ದಾಣದ ಕಡೆಗೆ ಬಂದನು. ಆಗ ಆತನ ಮನದಲ್ಲಿ ಹೊಳೆದುದೇನೆಂದರೆ:— "ದೇವೇಂದ್ರನು ನಿಜವಾಗಿಯೂ ವೇಷವನ್ನು ಮಾರ್ಪಡಿಸಿಕೊಂಡು ಸೌಭಾಗ್ಯಮಂದಿರದಲ್ಲಿ ಶ್ರೀಕುಮಾರನನ್ನು ಹುಡುಕುವುದಕ್ಕಾಗಿ ಹೋಗಿ ದುಷ್ಟರ ಕೈಗೆ ಸಿಕ್ಕಿಬಿದ್ದಿರಬೇಕು. ಪಿಶಾಚ ಸ್ವರೂಪ ನಾದ ವೈದ್ಯವಾಗೀಶನು ದೇವೇಂದ್ರನನ್ನು ಚಿತ್ರಹಿಂಸೆಗೆ ಗುರಿಮಾಡದೇ ಬಿಡ ತಕ್ಕವನಲ್ಲ. ನಾನು ಅಲ್ಲಿಗೆ ಹೋಗಿ ದೇವೇಂದ್ರನನ್ನು ಕಂಡುಹಿಡಿಯುವ ಬಗೆ ಹೇಗೆ ? ಸ್ಥಳೀಯ ರಕ್ಷಣಾಧಿಕಾರಿಗಳ ಸಾಹಾಯ್ಯದಿಂದ ನಾನು ಸೌಭಾಗ್ಯಮಂದಿ ರಕ್ಕೆ ಹೋಗುವುದಾದರೆ ಫಲನಾಗಬಹುದೇ ? ಫಲವಾಗುವ ಮಾತು ಹಾಗಿರಲಿ ; ಕಾರ್ಯವು ಕೆಟ್ಟು ಹೋಗಿ ಶೋಚನೀಯವಾದ ಅನರ್ಥಕ್ಕೆ ದಾರಿಯಾದರೂ ಆಗಬಹುದು. ಉಪಾಯದಿಂದ ಕಾರ್ಯವನ್ನು ಸಾಧಿಸಿಕೊಳ್ಳಬೇಕೇ ಹೊರತು, ದುರ್ಧಾಂತರಲ್ಲಿ ಪರಾಕ್ರಮವನ್ನು ಪ್ರಯೋಗಿಸಿ ಕಾರ್ಯವನ್ನು ನೆರವೇರಿಸಿಕೊಳ್ಳ ಬೇಕೆಂಬುದು ಹೆಡ್ಡತನವು."

ಅರಿಂದಮನು ಹೀಗೆ ಆಲೋಚಿಸುತ್ತಿರುವಷ್ಟರಲ್ಲಿ ರಾಜನಗರಕ್ಕೆ ಹೋಗ ತಕ್ಕ ಹೊಗೆ ಬಂಡಿಯು ಭೂತನ ಕಣಿವೆಯ ನಿಲ್ದಾಣದಲ್ಲಿ ಬಂದು ನಿಂತಿತು. ಅಧಿ ಕಾರಿಯು ಅರಿಂದಮನನ್ನು ಕುರಿತು— ಮಹಾಶಯ! ಬಂಡಿಯು ಇಲ್ಲಿ ಬಲು ಹೊತ್ತು ನಿಲ್ಲುವುದಿಲ್ಲ. ರಾಜನಗರಕ್ಕೆ ಹೊರಡುವವರಾಗಿದ್ದರೆ, ಬೇಗನೆ ಟಿಕೆಟ್ಟನ್ನು ಪಡೆದುಕೊಂಡು ಬಂಡಿಯನ್ನು ಹತ್ತಿರಿ, ಎಂದು ಹೇಳಿದ ಮಾತನ್ನು ಕೇಳಿ ಅರಿಂ ದಮನು ರಾಜನಗರಕ್ಕೆ ಟಿಕೆಟ್ಟನ್ನು ಕೊಂಡುಕೊಂಡು ಬಂಡಿಹತ್ತಿದನು. ಬಂಡಿ ಯೂ ಸರ್ ಬಸ್ ಎಂದು ದನಿಮಾಡುತ್ತಾ ರಾಜನಗರಾಭಿಮುಖವಾಗಿ ತೆರಳಿತು.

ಅರಿಂದಮನು ಗಾಡಿಯಲ್ಲಿ ಕುಳಿತೊಡನೆಯೇ ತಟ್ಟನೆ ಅವನ ಮನಸ್ಸಿನಲ್ಲಿ ಒಂದು ವಿಷಯವು ಹೊಳೆಯಿತು :—" ರಾಜನಗರಕ್ಕೆ ಹೋದಕೂಡಲೆ ಸರಕಾರದ ವೈದ್ಯಶಾಲಾಧಿಕರಣದ ಪ್ರಧಾನಾಧಿಕಾರಿಯನ್ನು ಕಂಡು ಸೌಭಾಗ್ಯಮಂದಿರದ ಸ್ಥಿತಿಗತಿಗಳನ್ನು ನಿರೀಕ್ಷಿಸುವುದಕ್ಕಾಗಿ ಅಪ್ಪಣೆ ಚೀಟಿಯನ್ನು ಪಡೆದು ಬೇಗನೆ ಸೌಭಾಗ್ಯಮಂದಿರಕ್ಕೆ ಹೋಗಿ ಅಲ್ಲಿನ ವಿದ್ಯಮಾನಗಳನ್ನು ಅರಿತುಕೊಳ್ಳುವು ದಾದರೆ, ವೈದ್ಯನು ಸಂಶಯಪಡುವುದಕ್ಕೆ ಕಾರಣವಿರುವುದಿಲ್ಲ. ಹೀಗೆ ಮಾಡು ವುದರಿಂದ ಶ್ರೀಕುಮಾರನೂ ದೇವೇಂದ್ರನೂ ದೃಷ್ಟಿಗೆ ಬೀಳುವರು. ಮುಂದಿನ ಕೆಲಸವಂತೂ ಗೊತ್ತೇ ಇದೆ."

ಹೊಗೆ ಬಂಡಿಯು ಯಥಾಸಮಯದಲ್ಲಿ ರಾಜನಗರದ ನಿಲ್ದಾಣಕ್ಕೆ ಬರಲು ಅರಿಂದಮನು ಬಂಡಿಯಿಂದಿಳಿದು ಮುಂದಕ್ಕೆ ತೆರಳಿದನು. ಆಗ ರಾತ್ರಿಯಲ್ಲಿ ಹನ್ನೊಂದು ಗಂಟೆಯ ಸಮಯವಾಗಿದ್ದಿತು. ರಾತ್ರಿಯ ಕಾಲದಲ್ಲಿ ಎಲ್ಲಿಗೆ ಹೋಗು ವುದೂ ಆರನ್ನು ನೋಡುವುದೂ ಅನುಚಿತವೆಂಬುದನ್ನು ಅರಿಂದಮನು ಚೆನ್ನಾಗಿ ಬಲ್ಲವನಾಗಿದ್ದರೂ, ಪ್ರಕೃತ ಸ್ಥಿತಿಯ ಕಾರ್ಯಗೌರವವೆಂಥವೆಂಬುವನ್ನು ಆತನು ಅರಿತವನಾಗಿದ್ದುದರಿಂದ ತಡಮಾಡದೆ ಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ವೈದ್ಯಶಾಲಾಧಿಕರಣದ ಪ್ರಧಾನಾಧಿಕಾರಿಯೆನಿಸಿದ ತನ್ನ ಪೂರ್ವ ಪರಿಚಿತನಾದ ನಾಗೇಂದ್ರಭೂಷಣ ಮಹಾಶಯನನ್ನು ನೋಡುವುದಕ್ಕಾಗಿ ತೆರಳಿದನು

ನಾಗೇಂದ್ರಭೂಷಣನು ರಾತ್ರಿಯಲ್ಲಿ ಮನೆಯಲ್ಲಿಯೇ ಇದ್ದನು. ರಾತ್ರಿ ಯಲ್ಲಿ ಬಲು ಹೊತ್ತಾಗಿ ಹೋಗಿದ್ದರೂ ಅರಿಂದಮನು ಆತನನ್ನು ನೋಡುವು ದಕ್ಕೆ ಹೆಚ್ಚಿನ ಪ್ರಯಾಸಪಡಬೇಕಾಗಿರಲಿಲ್ಲ. ಅರಿಂದಮನು ಆತನ ಮನೆಯ ಬಾಗಲಿಗೆ ಬಂದಕೂಡಲೆ ತಾನು ಬಂದಿರುವ ಸುದ್ಧಿಯನ್ನು ಯಜಮಾನನಿಗೆ ತಿಳಿಸ ಬೇಕೆಂದು ಸೇವಕನೊಬ್ಬನಿಗೆ ತಿಳಿಸಿದನು. ಸೇವಕನು ಈ ಸುದ್ದಿಯನ್ನು ಯಜ ಮಾನನಿಗೆ ತಿಳಿಸಿದ ಕೂಡಲೆ ನಾಗೇಂದ್ರಭೂಷಣನು ತಾನು ಮಾಡುತ್ತಿದ್ದ ಕೆಲಸ

ವನ್ನು ಒತ್ತಟ್ಟಿಗಿಟ್ಟು ಅರಿಂದಮನನ್ನು ನೋಡುವುದಕ್ಕೆ ಹೊರಗೆ ಬಂದು ವಿಶ್ವಾಸ ದೊಡನೆ ಆತನನ್ನು ತನ್ನ ಕೋಣೆಗೆ ಕರೆದುಕೊಂಡು ಹೋಗಿ ಒಂದಾಸನದ ಮೇಲೆ ಕುಳ್ಳಿರಿಸಿದನು. ಇವರಿಬ್ಬರಿಗೂ ಯೋಗಕ್ಷೇಮದ ವಿಚಾರವು ನಡೆದ ಬಳಿಕ ನಾಗೇಂದ್ರಭೂಷಣನು ಅರಿಂದಮನನ್ನು ಕುರಿತು— ಮಹಾಶಯ! ಈ ವೇಳೆ ಯಲ್ಲಿ ತಾವು ಬಂದಿರುವುದು ನೋಡಿದರೆ, ಗುರುತರವಾದ ಕಾರ್ಯವೇನೋ ಇರ ಬೇಕೆಂದು ತೋರುವುದು, ಎಂದು ವಿನಯದಿಂದ ಮಾತನಾಡಿದನು.

ಅರಿಂದಮ— ಅಹುದು, ಮಹಾಶಯ! ಕೆಲಸವೇನೋ ಗುರುತರ ವಾಗಿಯೇ ಇರುವುದು. ಭೂತನ ಕಣಿವೆ ಹತ್ತಿರವಿರುವ ಸೌಭಾಗ್ಯಮಂದಿರವೆಂಬ ಹುಚ್ಚರ ವೈದ್ಯಶಾಲೆಯನ್ನು ರಾಜಕಾರ್ಯಕ್ಕಾಗಿ ನಾನು ಪರೀಕ್ಷಿಸಿ ನೋಡಬೇಕಾ ಗಿರುವುದು. ತಡವಾಗುವುದಾದರೆ ಪ್ರಾಣಭಯವುಂಟು. ನಾಳೆಯ ಬೆಳಗಿನ ವೇಳೆ ಯೊಳಗಾಗಿ ನಾನು ಅಲ್ಲಿಗೆ ಹೋಗದಿದ್ದರೆ ಕಾರ್ಯವೆಲ್ಲವೂ ಹಾಳಾಗಿಹೋಗುವ ಸಂಭವವುಂಟು. ಅದುಕಾರಣ ತಾವು ನನ್ನಲ್ಲಿ ಕೃಪೆಯಿಟ್ಟು ಸೌಭಾಗ್ಯಮಂದಿರ ವನ್ನು ಪರೀಕ್ಷಿಸಿ ನೋಡುವ ಹಾಗೆ ಆಜ್ಞಾಪತ್ರವನ್ನು ಈಗಲೇ ಕೊಡೋಣವಾಗ ಬೇಕು; ಅಲ್ಲದೆಯೂ ನನ್ನ ಜತೆಯಲ್ಲಿಯೇ ತಮ್ಮ ಅಧೀನಾಧಿಕಾರಿಗಳಿಬ್ಬರನ್ನು ಕಳುಹಿಸಿಕೊಡುವುದಾದರೆ ನನ್ನ ಇಷ್ಟಾರ್ಥವು ನೆರವೇರುವುದು. ತಾವು ಇಷ್ಟರ ಮಟ್ಟಿಗೆ ನನ್ನ ಪ್ರಾರ್ಥನೆಯನ್ನು ನೆರವೇರಿಸಿಕೊಡಬೇಕು. ಇದೇ ನನ್ನ ಮುಖ್ಯೋದ್ದೇಶವು.

ನಾಗೇಂದ್ರಭೂಷಣ—(ಕೊಂಚ ಹೊತ್ತು ಗಂಭೀರಭಾವದಿಂದ ಚಿಂತಿಸಿ) ಅರಿಂದಮ ಮಹಾಶಯ! ತಮ್ಮ ಇಷ್ಟದಂತೆ ಆಜ್ಞಾಪತ್ರವನ್ನು ಕೊಡುವ ವಿಷಯದಲ್ಲಿ ಆಲೋಚಿಸಿ ಕೆಲಸಮಾಡಬೇಕಾಗಿರುವುದು. ಮಿತ್ರರಾದ ತಮಗೆ ಉಪಕಾರ ಮಾಡುವುದು ನನ್ನ ಧರ್ಮವೇ ಆಗಿರುವುದು. ಆದರೆ ಪ್ರಕೃತ ಸಂದರ್ಭದಲ್ಲಿ ನನ್ನ ವಿಜ್ಞಾಪನೆಯನ್ನು ತಾವು ಲಾಲಿಸಿ ಕೆಲಸಮಾಡಬೇಕು.

ವೈದ್ಯವಾಗೀಶನು ಸ್ವಂತ ವೆಚ್ಚದಿಂದ ಸೌಭಾಗ್ಯಮಂದಿರವನ್ನು ನಡೆಯಿಸಿ ಕೊಂಡುಬರುತ್ತಿರುವನು. ಅದರ ಮೇಲೆ ನಮ್ಮ ಅಧಿಕಾರವೇನೂ ಇರುವುದಿಲ್ಲ. ಜನರು ಆಡಿಕೊಳ್ಳುತ್ತಿರುವುದೇನೆಂದರೆ— ವಾಗೀಶನು ಸಮರ್ಥನಾದ ವೈದ್ಯನು. ಆತನು ತನ್ನ ಕಾರ್ಯಕಲಾಪಗಳನ್ನು ಹತ್ತಾರು ಜನರು ಮೆಚ್ಚುವಂತೆ ನೆರ ವೇರಿಸಿಕೊಂಡು ಬರುತ್ತಿರುವನು. ಆತನಿಗೆ ವಿರೋಧಜನಕವಾದ ಸುದ್ದಿಗಳು ಇಂದಿನ ವರೆಗೂ ನನ್ನ ಕಿವಿಗೆ ಬಿದ್ದಿಲ್ಲ. ಅಲ್ಲದೆಯೂ, ಪರೀಕ್ಷಕರು ಆಗಿಂದಾಗ ಸೌಭಾಗ್ಯಮಂದಿರವನ್ನು ಪರೀಕ್ಷಿಸಿ ಒಳ್ಳೆಯ ಅಭಿಪ್ರಾಯಗಳನ್ನೇ ಕೊಡುತ್ತ

ಬಂದಿರುವರು. ಹೀಗಿರಲಿಕ್ಕಾಗಿ ನಾವು ಆಕಸ್ಮಿಕವಾಗಿ ಪರೀಕ್ಷಕರನ್ನು ಕಳುಹುವುದಾದರೆ ಅದರ ಪರಿಣಾಮವನ್ನು ನಾವೇ ಹೊತ್ತುಕೊಳ್ಳಬೇಕಾದೀತು. ದೋಷವೇನೂ ಕಂಡುಬಾರದಿದ್ದಲ್ಲಿ, ಅಪವಾದಕ್ಕೆ ನಾವಲ್ಲದೆ ಮತ್ತಾರು ಗುರಿಯಾದಾರು ?

ಪತ್ತೇದಾರಿಯಲ್ಲಿ ಸಮರ್ಥರಾದ ತಾವು ಸುಳ್ಳಿನ ಸುದ್ದಿಯನ್ನು ನಂಬಿಕೊಂಡು ಕೆಲಸಮಾಡತಕ್ಕವರಲ್ಲವೆಂದು ನಾನು ಚೆನ್ನಾಗಿಯೂ ಬಲ್ಲೆನು. ಪ್ರಕೃತದ ಆಂತರ್ಯವನ್ನು ನನಗೆ ತಿಳಿಸೋಣವಾಗಲಿ. ಅದಕ್ಕನುಸಾರವಾಗಿ ಉಪಾಯಾಂತರವನ್ನು ಹುಡುಕಿ ನೋಡುವ.

ಅರಿಂದಮ—ನಾಗೇಂದ್ರ ಮಹಾಶಯ ! ಕಾರಣವನ್ನು ಕೇಳುವುದಾದರೆ, ತಾವೂ ಸುಮ್ಮನಿರಲಾರಿರಿ. ನಾನು ಸಲ್ಲದ ಸುದ್ದಿಗಳನ್ನು ಕಟ್ಟಿಕೊಂಡು ವ್ಯರ್ಥವಾಗಿ ಕಾಲಹರಣಮಾಡುವುದಕ್ಕಾಗಿ ಈ ಹೊತ್ತಿನಲ್ಲಿ ಇಲ್ಲಿಗೆ ಬಂದವನಲ್ಲ. ನಾನು ಬಂದುದಕ್ಕೆ ಕಾರಣವನ್ನು ಹೇಳುವೆನು, ಕೇಳೋಣವಾಗಲಿ.

ನನ್ನ ಸಹಚರನೆನಿಸಿದ ಪ್ರಿಯಶಿಷ್ಯನಾದ ದೇವೇಂದ್ರವಿಜಯನನ್ನು ವೈದ್ಯವಾಗೀಶನು ನಿಷ್ಕಾರಣವಾಗಿ ತನ್ನ ಸೌಭಾಗ್ಯಮಂದಿರದಲ್ಲಿ ನಿರ್ಬಂಧ ಪಡಿಸಿಟ್ಟಿರುವನು. ದೇವೇಂದ್ರನ ಮಾತು ಹಾಗಿರಲಿ. ವೈದ್ಯವಾಗೀಶನು ಶ್ರೀಕುಮಾರನೆಂಬ ಸತ್ಕುಲಪ್ರಸೂತನಾದ ಯುವಕನೊಬ್ಬನನ್ನು ಆವುದೋ ದುರಭಿಸಂಧಿಯಿಂದ ನಿರ್ಬಂಧ ಪಡಿಸಿಟ್ಟಿರುವನು. ಶ್ರೀಕುಮಾರನೆಂಬುವನನ್ನು ತಾವು ಬಲ್ಲಿರೋ ಇಲ್ಲವೋ ನನಗೆ ತಿಳಿಯದು. ಆತನು ಈಶ್ವರೀದುರ್ಗವೆಂಬ ವಿಶಾಲವಾದ ಜಹಗೀರಿಗೆ ನಿಜವಾದ ಉತ್ತರಾಧಿಕಾರಿಯು. ಇಂಥವನು ಮೋಸಗಾರರ ಬಲೆಯಲ್ಲಿ ಸಿಕ್ಕಿಕೊಂಡು ನರಳುತ್ತಿರುವನು.

ನಾಗೇಂದ್ರ—(ವಿಸ್ಮಯದಿಂದ) ಮಹಾಶಯ ! ತಾವು ಭಯಂಕರವಾದ ಸುದ್ದಿಯನ್ನು ಉಲ್ಲೇಖಿಸುತ್ತಿರುವಿರಿ. ಇದಕ್ಕೆ ಸಾಕಾದಷ್ಟು ಕಾರಣಗಳು ಇರಬೇಡವೇ ?

ಅರಿಂದಮ— ಪ್ರಮಾಣವೇ ! —ಇಲ್ಲ ; ಇದರಲ್ಲಿ ಆವ ಪ್ರಮಾಣವೂ ನನಗಿನ್ನೂ ದೊರೆತಿಲ್ಲ. ಪ್ರಮಾಣಗಳನ್ನು ಕಲ್ಪಿಸಿಕೊಂಡು ಕೆಲಸಮಾಡಿದರೆ, ಮುಂದೆ ಸರಕಾರಕ್ಕೆ ಉತ್ತರವಾದಿಯಾಗಬೇಕೆಂಬ ತನ್ನ ಭವಿಷ್ಯತ್ತನ್ನು ಮೊದಲೇ ಅರಿತುಕೊಂಡು ವಾಗೀಶನು ಎಚ್ಚರಿಕೆಯಿಂದ ಕೆಲಸಮಾಡುತ್ತಿರುವನು. ಇದು ನನ್ನ ಅಭಿಪ್ರಾಯವು ; ಇದನ್ನು ತಮಗೆ ತಿಳಿಸಿರುವೆನು. ನನ್ನ ಈ ಭಾವನೆಗೆ ಕಾರಣವೇನೆಂದು ತಾವು ಪ್ರಶ್ನೆಮಾಡುವುದಾದರೆ ಹೇಳುವೆನು, ಕೇಳೋಣವಾಗಲಿ.

ಅರಿಂದಮನು ಹೀಗೆ ಹೇಳಿ ಶ್ರೀಕುಮಾರನ ವಿಷಯವನ್ನೂ, ಕಲ್ಯಾಣ ಮಲ್ಲನ ವಿಷಯವನ್ನೂ, ಇಂದಿರಾಕಾಂತನ ವಿಷಯವನ್ನೂ, ಸಂಗ್ರಾಮಸಿಂಹ ತಾಂತಿಯಾಘಿಲ್ಲನ ವಿಷಯವನ್ನೂ, ವೈದ್ಯವಾಗೀಶನ ವಿಷಯವನ್ನೂ, ನಿತ್ಯಮಂಗಳೆಯ ವಿಷಯವನ್ನೂ ಸಂಕ್ಷೇಪವಾಗಿ ನಾಗೇಂದ್ರಭೂಷಣ ಮಹಾಶಯನಿಗೆ ಅರುಹಿದನು. ಹಾಗೂ ದೇವೇಂದ್ರನು ವೈದ್ಯವಾಗೀಶನನ್ನು ಅನುಸರಿಸಿ ಕಣ್ಮರೆಯಾದ ಸಂಗತಿಯನ್ನೂ ತಿಳಿಯಪಡಿಸಿದನು.

ನಾಗೇಂದ್ರ ಭೂಷಣನು ಈ ವಿಷಯಗಳೆಲ್ಲವನ್ನೂ ಕೇಳಿ ಕೋಪಾವೇಶದಿಂದ ಕೆಂಡಗೊಂಡವನಾಗಿ ಹುಬ್ಬು ಗಂಟಿಕ್ಕಿ ಕೊಂಚ ಹೊತ್ತು ಪರಿಪರಿಯಾಗಿ ಆಲೋಚಿಸಿದ ಬಳಿಕ ಇಂತೆಂದನು :—

"ಮಹಾಶಯ! ತಮ್ಮ ಮಾತನ್ನು ಕೇಳಿ ಕಾರ್ಯಕಾರಣಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡಿದೆನು. ತಮ್ಮ ಆಲೋಚನೆಯು ಯುಕ್ತಿಸಂಗತವಾಗಿದೆಯೆಂದೇ ನನಗೂ ತೋರಿಬರುತ್ತಿರುವುದು. ತಮ್ಮ ಭಾವನೆಯಾದರೋ ಸುಲಭವಾಗಿ ಗಾಳಿಗೆ ತೂರಿಬಿಡತಕ್ಕುದಾಗಿಲ್ಲ. ಅಕಟಕಟ! ಎಂತಹ ಭಯಂಕರವಾದ ಪೈಶಾಚವ್ಯಾಪಾರವು! ಈ ವಿಷಯದಲ್ಲಿ ಔದಾಸೀನ್ಯವನ್ನು ತಾಳುವುದಾದರೆ ಎಂತೆಂತಹ ಅನರ್ಥಗಳು ಸಂಭವಿಸುವುವೋ, ಬಲ್ಲವರಾರು?

ನಾನೂ ತಮ್ಮ ಅಭಿಪ್ರಾಯವನ್ನು ಅನುಮೋದಿಸುವವನಾಗಿರುವೆನು. ಇಂತಹ ಸಂದರ್ಭದಲ್ಲಿ ಸೌಭಾಗ್ಯಮಂದಿರದ ಪರೀಕ್ಷೆಗಾಗಿ ಇತರರನ್ನು ಕಳುಹಿದಲ್ಲಿ ಪ್ರಯೋಜನವಾಗಲಾರದು. ಆದುದರಿಂದ ನಾನೇ ತಮ್ಮ ಜತೆಯಲ್ಲಿ ಬರುವೆನು. ಬೆಳಗಾದ ಕೂಡಲೆಯೇ ನಾವಿಬ್ಬರೂ ಅಲ್ಲಿಗೆ ಹೋಗುವ. ಮಹಾಶಯ! ತಮಗೆ ಇತರರ ಸಾಹಾಯ್ಯವೇನಾದರೂ ಅವಶ್ಯವೇ ಹೇಗೆ?"

ಅರಿಂದಮ— (ಗೋಪ್ಯವಾಗಿ) ಸೂತ್ರಸ್ಥಾನದಿಂದ ಸಮರ್ಥರಾದ ಇಬ್ಬರು ಗ್ರಾಮರಕ್ಷಾಧಿಕಾರಿಗಳನ್ನೂ ಜತೆಯಲ್ಲಿಯೇ ಕರೆದುಕೊಂಡು ಹೋಗಬೇಕೆಂದಿರುವೆನು. ಅವರೊಡನೆ ಹತ್ತಾರು ಜನ ಪೋಲೀಸಿನವರು ಬರಬಹುದು.

ಸೌಭಾಗ್ಯಮಂದಿರದಲ್ಲಿ ವೈದ್ಯನ ಸ್ವಾಧೀನದಲ್ಲಿ ಅನೇಕ ಮಂದಿ ಸೇವಕರಿರುವರು. ಅವರೆಲ್ಲರೂ ಯಜಮಾನನ ಇಷ್ಟದಂತೆ ನಡೆದುಕೊಳ್ಳತಕ್ಕವರಾಗಿರುವರು. ಒಂದು ವೇಳೆ ನಮ್ಮ ಪ್ರಯತ್ನವು ಫಲಿಸುವುದಾದರೆ, ಅವರೆಲ್ಲರೂ ಪ್ರಾಣಭಯದಿಂದ ಓಡಿಹೋಗುವ ಯತ್ನಮಾಡಿದರೂ ಮಾಡಬಹುದು. ಅಂತಹ ಸಂದರ್ಭದಲ್ಲಿ ನಮ್ಮ ಕಡೆಯಲ್ಲಿಯೂ ಹತ್ತಾರು ಜನರು ಇದ್ದೇ ಇರಬೇಕಾಗು

ವುದು. ಹೇಗಾದರೂ ಆಗಲಿ; ನಾವುಗಳು ಆತ್ಮರಕ್ಷಣೆಯ ವಿಷಯದಲ್ಲಿ ಆವಾಗಲೂ ಜಾಗರೂಕರಾಗಿಯೇ ಇರಬೇಕು.

ನಾಗೇಂದ್ರ— ಮತ್ತೇನಾದರೂ ತಿಳಿಸತಕ್ಕ ವಿಷಯವಿರುವುದಾದರೆ ತಿಳಿಸಬಹುದು.

ಅರಿಂದಮ— ಹಾಗಾದರೆ ನನ್ನ ಉದ್ದೇಶವನ್ನಾದರೂ ಕೇಳೋಣವಾಗಲಿ. ದುರ್ದಾಂತನಾದ ಶಾಂತಿಯಾಭಿಲ್ಲನನ್ನು ದಸ್ತಗಿರಿ ಮಾಡಿ ಸರಕಾರಕ್ಕೆ ಒಪ್ಪಿಸುವ ಭಾರವು ನನ್ನ ತಲೆಯ ಮೇಲೆ ಬಿದ್ದಿರುವುದು. ನಾನು ಆತನ ಕಾರ್ಯಕಲಾಪಗಳನ್ನು ಒಂದು ಬಗೆಯಲ್ಲಿ ಪತ್ತೆಮಾಡಿಕೊಂಡಿರುವೆನು. ಈಗ ನಾನು ಸೌಭಾಗ್ಯಮಂದಿರವನ್ನು ಪರೀಕ್ಷಿಸಿದ ಕೂಡಲೆ ಅತ್ತಕಡೆ ದೃಷ್ಟಿಯಿಡದೇ ಹೋಗುವುದಾದರೆ, ನನ್ನ ಇಲ್ಲಿನ ವರೆಗಣ ಪ್ರಯತ್ನವೆಲ್ಲವೂ ಬೂದಿಯಲ್ಲಿ ಹೋಮ ಮಾಡಿದಂತಾಗುವುದು. ಅಲ್ಲದೆಯೂ ಇದಕ್ಕೆ ಸಂಬಂಧಪಟ್ಟಹಾಗೆ ಮತ್ತೊಂದು ಗುರುತರವಾದ ಕಾರ್ಯಭಾರವನ್ನು ಕೈಕೊಂಡಿರುವೆನು. ಇದರಿಂದ ಈಶ್ವರೀದುರ್ಗದ ಕಲ್ಯಾಣಮಲ್ಲನು ಅವಶ್ಯವಾಗಿಯೂ ದಸ್ತಗಿರಿಯಾಗತಕ್ಕವನಾಗಿರುವನು. ಇಂದಿರಾಕಾಂತನನ್ನು ಸಂಹರಿಸುವ ಪ್ರಯತ್ನದಲ್ಲಿ ಈತನೇ ಪ್ರಧಾನ ಸಹಕಾರಿಯು. ಇದಕ್ಕೆ ನನಗೆ ಬೇಕಾದ ಹಾಗೆ ಪ್ರಮಾಣಗಳು ಸಿಕ್ಕಿರುವುವು. ಮೇಲೆ ಹೇಳಿದ ಕಲ್ಯಾಣಮಲ್ಲನು ಮೋಸದಿಂದ ಈಶ್ವರೀದುರ್ಗವನ್ನು ಅಪಹರಿಸಿರುವನು. ಆತನು ನಿಜವಾದ ಉತ್ತರಾಧಿಕಾರಿಯೆನಿಸಿದ ಶ್ರೀಕುಮಾರನನ್ನು ಎಲ್ಲಿಯೋ ಅಟ್ಟಿಬಿಟ್ಟು ತನ್ನ ರೊಟ್ಟಿಯು ಜಾರಿ ತುಪ್ಪದಲ್ಲಿಯೇ ಬಿದ್ದಿತೆಂದು ತಿಳಿದು ಹಿಗ್ಗುತ್ತಿರುವನು. ಶ್ರೀಕುಮಾರನನ್ನು ಮರೆಮಾಡಿದುದರಿಂದ ಅವನಿಗೆ ಬಂದ ಭಾಗ್ಯವೇನೋ ತಿಳಿಯದು. ಅಯ್ಯೋ ಪಾಪ! ಶ್ರೀಕುಮಾರನಿಗೊಬ್ಬ ಮಗನಿರುವನೆಂಬ ಸಂಗತಿಯು ಅವನಿಗೇನು ಗೊತ್ತು! ಶ್ರೀಕುಮಾರನ ಹೆಂಡಿತಿಯನ್ನೂ ಗಂಡುಮಗುವನ್ನೂ ನನ್ನ ಮಿತ್ರನೊಬ್ಬನಲ್ಲಿ ಅರ್ಪಿಸಿ ಅವರನ್ನು ರಕ್ಷಿಸಿಕೊಂಡು ಬರುತ್ತಿರುವೆನು. ಈ ಸಂದರ್ಭದಲ್ಲಿ ಮತ್ತಾರಾರು ಅಪರಾಧಿಗಳೋ ನಾಳೆ ಗೊತ್ತಾಗುವುದು.

ನಾಗೇಂದ್ರ ಮಹಾಶಯ! ಈಗ ಬಲು ಹೊತ್ತಾಗಿಹೋಗಿರುವುದು. ನಾಳೆ ಬೆಳಗಿನ ಹತ್ತು ಗಂಟೆಗೆ ತಾವು ಹೊರಡುವುದಕ್ಕೆ ಸಿದ್ಧರಾಗಿದ್ದರೆ, ಅಷ್ಟರೊಳಗಾಗಿ ನಾನೂ ನನ್ನ ಕೆಲಸಗಳನ್ನು ಮಾಡಿಕೊಂಡು ತಮ್ಮಲ್ಲಿಗೆ ಬಂದು ಸೇರುವೆನು. ನಾಳೆ ನಾನು ತಮ್ಮಲ್ಲಿಗೆ ಬಂದಾಗ, ನೀವು ನನ್ನನ್ನು ನೋಡಿ ಪ್ರಕಾರಾಂತರ ತಿಳಿಯಲಾಗದು. ನಾಳೆ ನಾನು ಅಶ್ವಿನೀಕುಮಾರನೆಂಬ ಹೆಸರಿನಿಂದ ಒಬ್ಬ ವೈದ್ಯನ ವೇಷವನ್ನು ತಾಳಿಕೊಂಡು ಬರುವೆನು. ನನ್ನನ್ನು ತಾವು ವೈದ್ಯರಾಜ

ನೆಂದೇ ಭಾವಿಸಿ ನನ್ನೊಡನೆ ಕಾರ್ಯವಾಗುವ ವರೆಗೂ ವ್ಯವಹರಿಸುತ್ತಿರಬೇಕೆಂಬುದೇ ನನ್ನ ಕೋರಿಕೆ.

ನಾಗೇಂದ್ರ— (ಮುಗುಳ್ನಗೆ ನಕ್ಕು) ಹಾಗಾದರೆ ತಾವು ವೃದ್ಧನಾದ ವೈದ್ಯರಾಜನಂತೆ ವೇಷವನ್ನು ಹಾಕಿಕೊಂಡು ಬರುವಿರೇನು? ಆ ವೇಷದಲ್ಲಿ ತಮ್ಮನ್ನು ಗುರುತು ಹಿಡಿಯುವುದಕ್ಕೆ ಆಗುವುದೋ ಇಲ್ಲವೋ ನೋಡುವೆನು.

ಬಳಿಕ ಅರಿಂದಮನು ಹೊರಗೆ ಬಂದುಬಿಟ್ಟನು. ಆತನು ದಾರಿಯಲ್ಲಿ ನಡೆದು ಬರುತ್ತಾ ಚಿಂತಿಸಿದನದೆಂತೆನೆ:—“ ತಾಂತಿಯಾ ಭಿಲ್ಲನನ್ನೂ ಕಲ್ಯಾಣಮಲ್ಲನನ್ನೂ ಮೊದಲು ದಸ್ತಗಿರಿ ಮಾಡದೆಯೇ, ನಾನು ಸೌಭಾಗ್ಯಮಂದಿರವನ್ನು ಪರೀಕ್ಷಿಸಲು ತೆರಳುವುದಾದರೆ, ಈ ಸುದ್ದಿಯು ಅವರ ಕಿವಿಗೆ ಬೀಳದೇ ಹೋಗುವುದಿಲ್ಲ. ಮೊದಲೇ ನನ್ನ ಕಣ್ಣಿಗೆ ಮಣ್ಣೆರಚುವ ಆ ದುರಾತ್ಮರು ಇಷ್ಟಾದ ಬಳಿಕ ನನ್ನ ಕೈಗೆ ಸಿಕ್ಕುವ ಪಾಪವುಂಟೇ? ಒಂದು ವೇಳೆ ನನಗೆ ಆ ಕೆಲಸದಲ್ಲಿ ಫಲವಾಗದೇ ಹೋಗುವುದಾದರೆ, ನಾನು ಈ ಎರಡು ಕೆಲಸಗಳನ್ನೂ ಹಾಳುಮಾಡಿಕೊಂಡಂತಾಗುವುದು.

ನಾಳೆಯ ಬೆಳಗಿನ ಹತ್ತುಗಂಟೆಯ ವರೆಗೂ ನನಗೆ ಅವಕಾಶವಿರುವುದಷ್ಟೇ! ಇಷ್ಟರಲ್ಲಿ ನಾನು ಆವ ಕೆಲಸ ತಾನೇ ಮಾಡಲಾಗದು. ಪರ್ಯಾಲೋಚಿಸಿ ನೋಡುವಲ್ಲಿ, ಮೊದಲು ತಾಂತಿಯಾ ಭಿಲ್ಲನನ್ನೂ ಕಲ್ಯಾಣಮಲ್ಲನನ್ನೂ ತಡಮಾಡದೆಯೇ ದಸ್ತಗಿರಿ ಮಾಡುವುದೇ ಯುಕ್ತಿಸಂಗತವಾಗಿರುವುದು. ಧೂರ್ತರ ವಿಷಯದಲ್ಲಿ ನಾವು ಕಾಲಹರಣದಿಂದ ಮೈಮರೆತಿರುವುದು ಎಂದೆಂದಿಗೂ ಅಪಾಯಕರವೇ ಅಹುದು. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂದ ಮೇಲೆ ನಾವು ಬದುಕಿ ಬಾಳಿ ಫಲವೇನು?

ಈಗ ಕಾರ್ಯದ್ವಯವು ನನ್ನ ಮನವನ್ನು ಅಧೀರವನ್ನಾಗಿ ಮಾಡುತ್ತಿರುವುದು. ಇವೆರಡರಲ್ಲ ಸೌಭಾಗ್ಯಮಂದಿರದ ಕಾರ್ಯಕ್ಕಿಂತಲೂ ತಾಂತಿಯಾ ಭಿಲ್ಲಿನ ಅನುಸಂಧಾನದ ಕಾರ್ಯವೇ ಗುರುತರವಾದುದು. ತಾಂತಿಯಾ ಭಿಲ್ಲನ ಮೇಲಂತೂ ಸರಕಾರದ ಅನೇಕ ವಾರಂಟುಗಳು ಇದ್ದೇ ಇರುವುವು. ಸರದಾರ ಕಲ್ಯಾಣಮಲ್ಲನ ಮೇಲೆ ವಾರಂಟನ್ನು ಹುಟ್ಟಿಸುವುದು ಹೇಗೆ? ಲೋಕದಲ್ಲಿ ದೊಡ್ಡಮನುಷ್ಯರೆಂಬುವರು ತಪ್ಪುಮಾಡುವುದಿಲ್ಲವೆಂದೇ ಜನರ ನಂಬುಗೆಯು; ಹೀಗಿರುವಲ್ಲಿ ದೊಡ್ಡವರು ತಪ್ಪುಮಾಡಿರುವರೆಂದು ನಾನು ಹೇಳುವುದಾದರೂ, ನಂಬುವರಾರು? ಒಂದು ವೇಳೆ ದೊಡ್ಡವರು ನಿಜವಾಗಿಯೂ ತಪ್ಪುಮಾಡಿದ್ದರೂ. ಅವರ ಮೇಲೆ ವಾರಂಟು ಹುಟ್ಟುವುದೂ ಅತಿ ಪ್ರಯಾಸದ ಕೆಲಸವೇ ಆಗಿರುವುದು,—ಎಂದ

ಮೇಲೆ ನನ್ನ ಪ್ರಯತ್ನವೆಲ್ಲವೂ ಇನ್ನೂ ಸಿತಾಸಿತವಾಗಿಯೇ ನಿಲ್ಲುವುದು. ಈಗ ನನ್ನ ಪರಿಣಾಮವನ್ನು ಆಲೋಚಿಸಿ ನೋಡುವುದಾದರೆ, ಈ ಕೆಲಸದಲ್ಲಿ ಕೈಹಚ್ಚಿದ ನನಗೆ ಶ್ರಮವೂ ಅಪಯಶಸ್ಸೂ ಫಲವೆಂದೇ ಭಾವಿಸಿಕೊಳ್ಳಬೇಕಾಗಿರುವುದು. ಆದರೂ ಸೂತ್ರಸ್ಥಾನಕ್ಕೆ ಹೋಗಿ ನೋಡುವೆನು. ”

ಅರಿಂದಮನು ಹೀಗೆಂದು ಚಿಂತಿಸುತ್ತಿರುವಲ್ಲ ಬರುತ್ತಿದ್ದ ಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಸೂತ್ರಸ್ಥಾನಕ್ಕೆ ತೆರಳಿದನು. ಸೂತ್ರಸ್ಥಾನದ ಮುಖ್ಯಾಧಿಕಾರಿಯು ಅಲ್ಲಿಯೇ ಇದ್ದುದರಿಂದ ಅರಿಂದಮನು ಆತನೊಡನೆ ಗೋಪ್ಯವಾಗಿ ಬಲು ಹೊತ್ತು ಮಾತನಾಡುತ್ತಾ ಕುಳಿತಿದ್ದನು. ಅದರ ಫಲಿತಾಂಶವು ಮುಂದಣ ಘಟನಾಕ್ರಮದಲ್ಲಿ ಗೊತ್ತಾಗದಿರದು.

* * * * * * * * *

ಸರದಾರ ಕಲ್ಯಾಣಮಲ್ಲನು ವಿಪುಲವಾದ ಜಹಗೀರಿಗೆ ಏಕಮಾತ್ರಾಧಿಕಾರಿಯಾಗಿದ್ದರೂ ತಾನು ಅನಾಥನೆಂದೂ, ದರಿದ್ರ ಭಿಕ್ಷುಕನೆಂದೂ, ದುರದೃಷ್ಟನೆಂದೂ ಭಾವಿಸತೊಡಗಿದನು. ಆತನ ಭಯಕ್ಕೂ ಚಿತ್ತಚಾಂಚಲ್ಯಕ್ಕೂ ತುದಿಮೊದಲಿರಲಿಲ್ಲ. ಕಾರಣವೇನೆಂದರೆ— ಶಾಂತಿಯಾ ಭಿಲ್ಲನೊಂದುಕಡೆ, ವೈದ್ಯವಾಗೀಶನೊಂದುಕಡೆ ಕಲ್ಯಾಣಮಲ್ಲನನ್ನು ಗಾಳದಿಂದ ಹಿಡಿದೆಳೆಯುತ್ತಿದ್ದರು. “ ಶಾಂತಿಯನ ಬಾಯಿಗೆ ಒಂದು ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಾಗಿ ಸುರಿದುದಾಯಿತು. ಈಗ ಅವನು ಮೌನವನ್ನು ಅವಲಂಬಿಸಿರುವಂತೆ ನಟಿಸುತ್ತಿರುವನು. ಅವನ ದುರಾಶೆಯನ್ನು ನೋಡಿದರೆ, ಅದನ್ನು ಪರಿಹರಿಸುವುದಕ್ಕೆ ತೊಡಗುವ ಪಕ್ಷದಲ್ಲಿ— ನನ್ನ ಜಹಗೀರಿಯ ಮಾತು ಹಾಗಿರಲಿ, ಮೂರು ಲೋಕವಾದರೂ ಸಾಲದುದಾಗಿರುವುದು. ಇಂಥವರನ್ನು ತೃಪ್ತಿಪಡಿಸುವುದು ಹೇಗೆ? ನಾನು ಸ್ವಾರ್ಥವನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಯೋಗ್ಯತೆ ಮೀರಿ ಉಪಕರಿಸಬಹುದು. ನಾನು ಎಲ್ಲವನ್ನೂ ಕೊಟ್ಟು ಮಾಡುವುದೇನು? ಬಾಳಬೇಕೆಂದು ಕಟ್ಟಿಕೊಂಡ ಜಹಗೀರಿಯನ್ನೇ ಆತನ ಪಾಲು ಮಾಡಿದ ಬಳಿಕ ನಾನೇನಾಗಬೇಕು? ಅಂತೂ ಈತನ ಹಾವಳಿಯಿಂದ ನಾನು ಬದುಕಿರಲಾರೆನು, ಹಾಗೂ ಸಾಯಲಾರೆನು. ಈತನ ಭಯದಿಂದ ಗಜಭುಕ್ತ ಕಪಿತ್ಥದಂತೆ ನಾನು ಅಂತಸ್ಸಾರಶೂನ್ಯನಾಗಿ ಹೋಗಿರುವೆನು. ನನಗೆ ಈ ಸಂದರ್ಭದಲ್ಲಿ ಏನ ಮಾಡಬೇಕೋ, ಎಲ್ಲಿಗೆ ಹೋಗಬೇಕೋ ಒಂದೂ ಗೋಚರಕ್ಕೆ ಬರಲೊಲ್ಲದು.

ವೈದ್ಯವಾಗೀಶನಂತೂ ನನ್ನ ಬೆನ್ನ ಹತ್ತಿದ ಬೇತಾಳನೇ ಆಗಿ ಹೋಗಿರುವನು. ಶಾಂತಿಯಾ ಭಿಲ್ಲನನ್ನಾದರೂ ತೃಪ್ತಿಪಡಿಸಬಹುದು, ಆ ಪಿಶಾಚ ವೈದ್ಯನನ್ನು ಎಷ್ಟುಮಾತ್ರವೂ ತೃಪ್ತಿಪಡಿಸುವುದಕ್ಕಾಗಲಾರದು. ಜಿಗಣೆಯು

ರಕ್ತವನ್ನು ಹೀರುವಂತೆ ಆತನು ಹಣವನ್ನು ಸುಲಿದುಕೊಳ್ಳುವ ಪರಿಪಾಟಿಯಂತೂ ಹೇಳಲಸದಳವಾಗಿರುವುದು. ಆತನಿಗೆ ನನ್ನಲ್ಲಿ ಅಭಿಮಾನವೆಲ್ಲಿಯದು? ನನ್ನ ಹಣದಲ್ಲಿ ಆತನಿಗಿರುವ ಅಭಿಮಾನವೇ ಅಭಿಮಾನವು. ಆ ಮನೆ ಹಾಳ ವೈದ್ಯನಂತೂ ನನ್ನನ್ನು ಇರಗೊಳಿಸನು, ಹಾಗೂ ಸಾಯಗೊಳಿಸನು.

ಹಾ ದೈವವೇ! ನನ್ನನ್ನು ಈಗಲೇ ಇಹ ಲೋಕದಿಂದ ಪಾರಗಾಣಿಸಬಾರದೇ? ಉಪಕರಿಸುವುದಾಗಲಿ, ಸಹಕರಿಸುವುದಾಗಲಿ ನಿನ್ನ ಹಣೆಯಲ್ಲಿಯೇ ಬರೆದಿಲ್ಲವೆಂದು ತೋರುವುದು. ಬೇಡಿದವರಿಗೆ ಇದ್ದುದನ್ನೂ ಕಿತ್ತುಕೊಂಡು. ಅವರನ್ನು ಬೀದಿಯ ಬಿಕಾರಿಗಳನ್ನಾಗಿ ಮಾಡುವೆ. ಬೇಡದವರಿಗೆ ಬೇಡದುದನ್ನು ಕೊಟ್ಟಾದರೂ ಸಂಕಟಪಡಿಸುವೆ. ಅಂತೂ ಇಂತೂ ನಿನ್ನಿಂದ ಆರಿಗೂ ಸುಖವಿಲ್ಲ, ಆರಿಗೂ ಪ್ರಯೋಜನವಿಲ್ಲ." ಈ ಬಗೆಯಾದ ದುಶ್ಚಿಂತೆಗಳಿಂದ ಕಲ್ಯಾಣಮಲ್ಲನಿಗೆ ಆಹಾರದಲ್ಲಿ ರುಚಿ ತಪ್ಪಿದುದಲ್ಲದೆ, ನಿದ್ರಾದೇವಿಯೂ ದೂರ ಸರಿದುಬಿಟ್ಟಳು. ಆತನು ಚಿಂತೆಗಳನ್ನು ಮರೆಯಲೋಸುಗ ಸುರಾದೇವಿಯ ಅನುಸಂಧಾನ ಮಾಡತೊಡಗಿದನು. ದೇವತೆಯು ಪ್ರತ್ಯಕ್ಷದಲ್ಲಿ ಬಂದು ನಿಂತಳು. ಕಲ್ಯಾಣಮಲ್ಲನು ಆಕೆಯನ್ನು ಉದರದಲ್ಲಿಟ್ಟು ಪೂಜೆಮಾಡತೊಡಗಿದನು. ದೇವತೆಯು ಸ್ವಲ್ಪ ಕಾಲದೊಳಗಾಗಿಯೇ ಪ್ರಸನ್ನೆಯಾಗಿ ಕಲ್ಯಾಣಮಲ್ಲನ ದುಃಖಗಳೆಲ್ಲವನ್ನೂ ಕ್ಷಣಮಾತ್ರದಲ್ಲಿಯೇ ದೂರಮಾಡಿ ತನ್ನ ಅಧಿಕಾರವನ್ನು ನಿದ್ರಾದೇವಿಗೆ ಸಮರ್ಪಿಸಿಬಿಟ್ಟಳು. ನಿದ್ರಾಭಿಭೂತನಾದ ಕಲ್ಯಾಣಮಲ್ಲನು ನಿದ್ರಾದೇವಿಯ ಲಾಲನಪಾಲನದಲ್ಲಿದ್ದು ಬಳಿಕ ಅರೆನಿದ್ದೆಯಲ್ಲಿ ಎಚ್ಚತ್ತು—"ನನಗೆ ಆರ ಭಯ? ದಸ್ತಗಿರಿಯ ಭಯವೇ! ನನ್ನನ್ನು— ಸರದಾರ ಕಲ್ಯಾಣಮಲ್ಲನನ್ನು,—ದಸ್ತಗಿರಿ ಮಾಡಲು ಆರಿಗೆ ಸಾಹಸವಿದ್ದೀತು? ಈಶ್ವರೀದುರ್ಗದ ಒಡೆಯನನ್ನು ನಿಷ್ಕಾರಣವಾಗಿ ದಸ್ತಗಿರಿ ಮಾಡುವುದೆಂಬುದು ಹೇಳುವಷ್ಟು ಸುಲಭವಾದ ಕೆಲಸವಾಗಿಲ್ಲ. ಏನು! ಇಂದಿರಾಕಾಂತನನ್ನು ಕೊಲ್ಲಲೆಣಿಸಿದವನು ನಾನೇ? ಪೋಲೀಸಿನವರಂತೂ ಹಣಕ್ಕಾಗಿ ಬಾಯಬಿಟ್ಟುಕೊಂಡಿರುವರು. ಅವರ ಬಾಯಿಗೂ ಹಣವನ್ನು ಸುರಿದರಾಯಿತು. ಆ ಮೇಲೆ ಅವರಾದರೂ ನನ್ನನ್ನು ಏನು ಮಾಡಬಲ್ಲವರಾಗಿರುವರು? ತಾಂತಿಯಾ ಭಿಲ್ಲನು ಹಣದಾಸೆಯಿಂದ ನನ್ನ ಗುಲಾಮನಾಗಿರುವನು; ಆ ಹಣದಾಸೆಯಿಂದಲೇ ವೈದ್ಯವಾಗೀಶನೂ ನನ್ನ ಗುಲಾಮನಾಗಿ ಬಿದ್ದಿರುವನು,- ಎಂದ ಮೇಲೆ, ಆರು ನನ್ನ ಗುಲಾಮರಲ್ಲ. ಅರಿಂದಮನೆನ್ನುವಿರೋ? ಅರಿಂದಮನು ಪ್ರಸಿದ್ಧನಾದ ಪತ್ತೇದಾರನೆಂದು ನಾನು ಬಲ್ಲೆನು. ಆತನು ನನ್ನನ್ನು ಹಿಡಿಯಬಲ್ಲನೇ? ನಾನು ಸರದಾರ ಕಲ್ಯಾಣಮಲ್ಲನೆಂಬುದು ಅರಿಂದಮನಿಗೆ ಇನ್ನೂ ಗೊತ್ತಿಲ್ಲವೆಂದು ತೋರುವುದು," ಎಂದು ಬಾಯಿಗೆ ಬಂದ ಹಾಗೆ ಮಾತನಾಡಿಕೊಂಡನು. ಆತನಿಗಿನ್ನೂ ಸುರಾದೇವಿಯ ಆವಾಹನೆಯು ಕಡಮೆಯಾಗಿರ

ಲಿಲ್ಲವಾಗಿ ಮನದೊಳಗೆ ಇದ್ದುದೆಲ್ಲಾ ಮಾತಿನ ರೂಪದಲ್ಲಿ ಹೊರಹೊರಟಿತು. ಈ ಸಮಯದಲ್ಲಿ ತಾಂತಿಯಾ ಭಿಲ್ಲನು ಆತನ ಸಮೀಪದಲ್ಲಿದ್ದಿದ್ದರೆ, ಮತ್ತಷ್ಟು ಹಣವನ್ನು ಕಸಿದುಕೊಳ್ಳುವುದಕ್ಕೆ ದಾರಿ ಮಾಡದೇ ಬಿಡುತ್ತಿರಲಿಲ್ಲ; ಆದರೆ ಆತನು ಹಿಂದಣ ರಾತ್ರಿಯಲ್ಲಿಯೇ ರಾಜನಗರಕ್ಕೆ ಹೊರಟುಹೋಗಿದ್ದನಾದುದರಿಂದ ಕಲ್ಯಾಣಮಲ್ಲನಿಗೆ ಆ ಭಯವೇನೂ ಇರಲಿಲ್ಲ.

ಕಲ್ಯಾಣಮಲ್ಲನು ಹೀಗೆಲ್ಲಾ ಮಾತನಾಡಿಕೊಳ್ಳುತ್ತಿರುವ ಸಮಯದಲ್ಲಿ ಭೃತ್ಯನೊಬ್ಬನು ಬಂದು ನೋಡಿದನು. ಕಲ್ಯಾಣಮಲ್ಲನಿಗೆ ಇನ್ನೂ ಸಂಪೂರ್ಣವಾಗಿ ಬಾಹ್ಯಜ್ಞಾನವುಂಟಾಗಿರಲಿಲ್ಲವಾಗಿ, ಭೃತ್ಯನು ಕೊಂಚ ಹೊತ್ತು ನಿರೀಕ್ಷಿಸಿ ನೋಡಿದನು. ಆದರೂ ಏನೂ ಪ್ರಯೋಜನವಾಗದಿರಲು, ಆತನು ಕಲ್ಯಾಣಮಲ್ಲನ ಬಾಹುಮೂಲದ ಮೇಲೆ ಕೈಯಿಟ್ಟನು. ಕಲ್ಯಾಣಮಲ್ಲನು ತಟ್ಟನೆ ಹಿಂದಿರುಗಿದವನಾಗಿ, ರೋಷದಿಂದ— ಎಲಾ, ಕೊತ್ತಿನ ಮಗನೇ! ನನ್ನ ಮೈಮೇಲೆ ಕೈ ಹಾಕುವಷ್ಟು ಸಲಿಗೆಯು ನಿನಗಾದುದೇ? ನಿನಗೆ ಹುಚ್ಚೋ, ಇಲ್ಲವೇ ಅರುಳುಮರುಳೋ? ಇಲ್ಲಿಗೆ ಬರಲು ನಿನಗೆ ಅಪ್ಪಣೆ ಮಾಡಿದವರಾರು? ಎಂದು ಗದ್ದರಿಸಿದನು.

ಭೃತ್ಯ— (ವಿನಯದಿಂದ) ಸ್ವಾಮಿ! ನನ್ನ ತಪ್ಪೇನಿದ್ದರೂ ಕ್ಷಮಿಸಬೇಕು. ಇಬ್ಬರು ದೊಡ್ಡ ಮನುಷ್ಯರು ಅವಶ್ಯವಾಗಿ ತಮ್ಮನ್ನು ನೋಡಬೇಕೆಂದು ಹೊರಗೆ ಕಾದಿರುವರು. ಅವರಲ್ಲಿ ಒಬ್ಬಾತನು ಮದ್ದಾನೆಯಂತೆ ಕೊಬ್ಬಿದ ಶರೀರವುಳ್ಳವನಾಗಿರುವನು.

ಕಲ್ಯಾಣಮಲ್ಲ— (ಮದ ವಿಹ್ವಲನಾಗಿ) ಆನೆ ಬಂದಿರುವುದೇ? ಅದನ್ನು ಲಾಯದಲ್ಲಿ ಕಟ್ಟು. ಬೆಳಗಾದ ಕೂಡಲೆ ಆ ಆನೆಯ ಮೇಲೆ ನಾನೇ ಹತ್ತಿ ಸವಾರಿ ಮಾಡುವೆನು.

ಭೃತ್ಯ— (ನಗೆಯನ್ನು ಅಡಗಿಸಿಕೊಂಡು) ಪ್ರಭೂ! ಆನೆಯಲ್ಲ. ಆನೆಯಂತಹ ಮನುಷ್ಯನೊಬ್ಬನು ತಮ್ಮನ್ನು ನೋಡಬೇಕೆಂದು ಬಾಗಿಲಲ್ಲಿ ನಿಂದಿರುವನು.

ಕಲ್ಯಾಣ—ಆನೆಯಲ್ಲದಿದ್ದರೆ ಬಿಕಾರಿಯಾಗಿರಬೇಕು. ಈ ಅವೇಳೆಯಲ್ಲಿ ಅವನಿಗೆ ಏನು ಬೇಕೋ, ಕೇಳು. ಎಲಾ! ಬಿಕಾರಿಗಳಿಗೆ ಹೊತ್ತಿಲ್ಲ, ಗೊತ್ತಿಲ್ಲ. ಆತನನ್ನು ಕುತ್ತಿಗೆ ಹಿಡಿದು ನೂಕಿ ಬಿಡು, ಬೇಗ ನೂಕಿ ಬಿಡು.

ಭೃತ್ಯ— ಪ್ರಭೂ! ಬಿಕಾರಿಯಲ್ಲ, ಬಿಕಾರಿಯಲ್ಲ. ಆತನು ದೊಡ್ಡ ಮನುಷ್ಯನಂತೆ ವೇಷಭೂಷಿತನಾಗಿರುವನು.

ಕಲ್ಯಾಣ— (ಜುಗುಪ್ಸೆಯಿಂದ) ದೊಡ್ಡ ಮನುಷ್ಯನೋ, ದಪ್ಪ ಮನುಷ್ಯನೋ ನೋಡುವ. ಅವನು ಬಿಕಾರಿಯಲ್ಲದ ಮೇಲೆ, ಆತನು ನನಗೆ ಭಿಕ್ಷೆಗಿಕ್ಷೆ ಕೊಡುವುದಕ್ಕೇನಾದರೂ ಬಂದಿರಬಹುದೇ? ವಿಚಾರಿಸು. ವಿಚಾರಿಸುವುದೇಕೆ? ಆತನನ್ನು ಇಲ್ಲಿಗೆ ಕರೆದುಕೊಂಡು ಬಾ. ನಾನೇ ವಿಚಾರಿಸುವೆನು.

ಕಲ್ಯಾಣಮಲ್ಲನು ಹೀಗೆ ಹೇಳಿದ ಕೂಡಲೆ ಭೃತ್ಯನು ಆಗಂತುಕರಿಬ್ಬರನ್ನೂ ಕಲ್ಯಾಣಮಲ್ಲನ ಇದಿರಿನಲ್ಲಿ ಕರೆತಂದು ನಿಲ್ಲಿಸಿದನು. ಇವರನ್ನು ನೋಡಿದ ಕೂಡಲೆ, ಕಲ್ಯಾಣಮಲ್ಲನಿಗೆ ಮದ ನಿಳಿದು ಜ್ಞಾನೋದಯವಾಯಿತು. ಬಳಿಕ ಆತನು ದೀಪದ ಬೆಳಕಿನಲ್ಲಿ ಆಗಂತುಕರ ಮುಖವನ್ನು ನೋಡಿದ ಕೂಡಲೆ ಏಕ ಕಾಲದಲ್ಲಿಯೇ ಎದೆ ನಡುಗಿ, ಮುಖಕೆಟ್ಟು ದನಿ ಕುಗ್ಗಿತು. ಕಲ್ಯಾಣಮಲ್ಲನು ಅಪ್ರತಿಭನಾಗಿ— ಅರಿಂದಮ! ನೀವೇ? ಈ ಅವೇಳೆಯಲ್ಲಿ—ನೀವು—ಇಲ್ಲಿಗೆ—, ಎಂದು ತಬ್ಬಿಬ್ಬಾಗಿ ಮಾತನಾಡಿದನು.

ಬಳಿಕ ಕಲ್ಯಾಣಮಲ್ಲನು ಆನೆಯಂತಿದ್ದ ಮತ್ತೊಬ್ಬನನ್ನು ನೋಡಿ ಸೊಕ್ಕಿ ಸೊರಗಿದವನಾಗಿ ಕೆಳಗೆ ಮೇಲೆ ನೋಡುತ್ತಾ ನಿಂತುಬಿಟ್ಟನು. ಆತನೇ ವಾರಂಟನ್ನು ತೆಗೆದುಕೊಂಡು ಬಂದಿದ್ದ ಸರಕಾರದ ಅಧಿಕಾರಿಯೊಬ್ಬನಾಗಿದ್ದನು. ಮನುಷ್ಯನ ಹೊರಗಣ ಆಕಾರವೇ ದೊಡ್ಡತನಕ್ಕೆ ಕಾರಣವೆನ್ನುವುದಾದರೆ, ಆತನಿಗೆ ರಾಜ್ಯದಲ್ಲಿ ಮಂತ್ರಿತ್ವವೇ ದೊರೆಯಬೇಕಾಗಿದ್ದಿತು. ಆತನ ಬುದ್ಧಿಯೂ ದೇಹದಂತೆಯೇ ಸ್ಥೂಲವಾಗಿದ್ದುದರಿಂದ ಗ್ರಾಮರಕ್ಷಣಾಧಿಕರಣದಲ್ಲಿ ಆತನೊಬ್ಬ ಸಾಮಾನ್ಯಾಧಿಕಾರಿಯಾಗಿದ್ದನು. ಇಂತಹ ಅದ್ಭುತ ಮೂರ್ತಿಯನ್ನು ನೋಡಿದ ಕೂಡಲೆ ಕಲ್ಯಾಣಮಲ್ಲನು ಶಕ್ತಿಯಡಗಿದವನಾಗಿ ನಿಂತಿರಲಾರದೆ ಕುಳಿತುಬಿಟ್ಟನು.

ಅರಿಂದಮನು ಅಧಿಕಾರಿಯನ್ನು ನೋಡಿ— ಮಹಾಶಯ! ಈತನೇ ಸರದಾರ ಕಲ್ಯಾಣಮಲ್ಲ ಮಹಾಶಯನು. ಈತನು ಅಪರಾಧಿಯು; ಅಪರಾಧಿಯು ತಮ್ಮ ಇದಿರಿನಲ್ಲಿಯೇ ಇರುವನು. ಮಾಡಬೇಕಾದ ಮುಂದಣ ಕೆಲಸವನ್ನು ತಡಮಾಡದೆಯೇ ನೆರವೇರಿಸೋಣವಾಗಲಿ, ಎಂದನು.

ಇಷ್ಟಾದ ಮೇಲೆ ಅಧಿಕಾರಿಯು ಕಲ್ಯಾಣಮಲ್ಲನ ಹತ್ತಿರಕ್ಕೆ ಬಂದು, 'ತಮ್ಮ ಮೇಲೆ ವಾರಂಟು ಹುಟ್ಟಿರುವುದು' ಎಂದು ಹೇಳಿ ಆತನ ಎರಡು ಕೈಗಳನ್ನೂ ಹಿಡಿದುಕೊಂಡು ಅವುಗಳಿಗೆ ಕೈಬೇಡಿಗಳನ್ನು ತೊಡಿಸಿದನು. ಕಲ್ಯಾಣಮಲ್ಲನು ಆತ್ಮರಕ್ಷಣೆಗಾಗಿ ಹಿಗ್ಗಾಡತೊಡಗಲು, ಅಧಿಕಾರಿಯು ಆತನನ್ನು ಕುರಿತು—

ಸರದಾರರೇ! ಇಂದಿರಾಕಾಂತನನ್ನು ಕೊಲ್ಲಲೆಣಿಸಿದ ಅಪರಾಧಕ್ಕಾಗಿ ನಾವು ತಮ್ಮನ್ನು ದಸ್ತಗಿರಿ ಮಾಡಿರುವೆವು. ತಾವು ಅಪರಾಧಿಗಳಲ್ಲವೆಂಬುದಕ್ಕೆ ತಕ್ಕ ಪ್ರಮಾಣ ಗಳೇನಾದರೂ ನಿಮ್ಮಲ್ಲಿರುವುದಾದರೆ ಅವನ್ನು ನ್ಯಾಯಸ್ಥಾನದಲ್ಲಿ ತಂದೊಪ್ಪಿಸ ಬಹುದು, ಎಂದು ನುಡಿದನು.

ಕಲ್ಯಾಣಮಲ್ಲನು ವಜ್ರಾಹತನಂತೆ ಬೆಪ್ಪಾದುದನ್ನು ನೋಡಿ, ಅರಿಂದಮನು ಕಲ್ಯಾಣಮಲ್ಲನನ್ನು ಕುರಿತು— ಮಹಾಶಯ! ವ್ಯಸನವೇಕೆ? ಸಂಗ್ರಾಮಸಿಂಹ ನೆಂಬ ಹೆಸರಿನ ತಾಂತಿಯಾಭಿಲ್ಲನು ನಿನ್ನೆಯ ರಾತ್ರಿಯಲ್ಲಿಯೇ ರಾಜನಗರಕ್ಕೆ ಹೊರಟುಹೋದನೆಂದು ಕೇಳುವೆನು ; ಅದು ನಿಜವೇ? ಎಂದು ಪ್ರಶ್ನೆ ಮಾಡಿದನು.

ಕಲ್ಯಾಣಮಲ್ಲನು ಉತ್ತರ ಕೊಡಲು ಯತ್ನಮಾಡತೊಡಗಿದನು. ಆದರೆ ಅವನ ಬಾಯಿಂದ ಗೊರ್ ಗೊರ್ ಎಂಬ ಧ್ವನಿ ಹೊರಟಿತೇ ಹೊರತು ಸರಿಯಾದ ಉತ್ತರ ಬರಲಿಲ್ಲ.

ಅರಿಂದಮ— (ಅಧಿಕಾರಿಯನ್ನು ನೋಡಿ) ಮಹಾಶಯ! ತಾಂತಿಯನು ಇಲ್ಲಿಲ್ಲವೆಂಬುದು ನಿಜವಾದ ವಿಷಯವಾಗಿರಬೇಕು ; ಆದರೂ ಎಚ್ಚರಿಕೆಯಿಂದ ನಮ್ಮ ಪೋಲೀಸಿನವರು ಈ ಪ್ರಾಸಾದದ ಸುತ್ತಲೂ ಕಾದುಕೊಂಡಿರುವರಷ್ಟೆ?

ಅಧಿಕಾರಿ— ಎಲ್ಲವೂ ಸರಿಯಾಗಿಯೇ ಇರುವುದು. ಒಂದು ನೊಣವು ಕೂಡ ಇಲ್ಲಿಂದ ಹೊರಗೆ ತಪ್ಪಿಸಿಕೊಂಡು ಹೋಗಲಾರದು,— ಎಂದ ಮೇಲೆ ಮನುಷ್ಯನ ಪಾಡೇನು?

ಇದಾದ ಬಳಿಕ ಅರಿಂದಮನು ಆ ಕೋಣೆಯನ್ನು ಬಿಟ್ಟು ಹೊರಗಣ ಹಜಾ ರಕ್ಕೆ ಬಂದು ನೋಡಿದನು. ಅಲ್ಲೊಬ್ಬ ಸೇವಕನು ಬೆದರಿ ಬೆರಗಾಗಿ ನೋಡುತ್ತಾ ನಿಂತಿರಲು, ಅರಿಂದಮನು ಅವನನ್ನು ಕುರಿತು— ಎಲಾ! ಇಲ್ಲಿ ತಾಂತಿಯನು ಎಲ್ಲಿಯೋ ಅಡಗಿಕೊಂಡಿರುವುದಾಗಿ ತಿಳಿಯಬರುತ್ತಿರುವುದು. ಒಳ್ಳೆಯ ಮಾತಿ ನಿಂದ ಆತನಿರುವ ಸ್ಥಳವನ್ನು ತೋರಿಸು, ನಡೆ ; ಇಲ್ಲವಾದರೆ ನಿನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ, ಎಂದು ಕಠಿನೋಕ್ತಿಗಳನ್ನಾಡಿದನು.

ಭೃತ್ಯ— (ನಡುಗುತ್ತಾ) ಸ್ವಾಮಿ! ಆತನಿಲ್ಲವೆಂದು ತಮಗೆ ನಾನು ಮೊದಲೇ ತಿಳಿಸಲಿಲ್ಲವೇ? ವ್ಯರ್ಥವಾಗಿ ತಾವು ಏತಕ್ಕೆ ಶ್ರಮ ತೆಗೆದುಕೊಳ್ಳುವಿರಿ. ಆತನು ಈಗ ರಾಜನಗರದಲ್ಲಿ ಹಳಬನಾಗಿಹೋಗಿರುವನು. ಹೊಗೆ ಬಂಡಿಯ ನಿಲ್ದಾಣದ ವರೆಗೂ ಆತನೊಡನೆ ನಾನೇ ಹೋಗಿ, ಆತನನ್ನು ಬಂಡಿಯಲ್ಲಿ ಕೂರಿಸಿ ಕಳುಹಿಸಿ ಬಂದಿರುವೆನು. ಇದಕ್ಕಿಂತಲೂ ಹೆಚ್ಚಿನ ಪ್ರಮಾಣವನ್ನು ನಾನು

ತಮಗೆ ಎಲ್ಲಿಂದ ತಂದೊಪ್ಪಿಸಲಿ? ಇದರಲ್ಲಿ ಕೊಂಚವಾದರೂ ಸುಳ್ಳಿಲ್ಲ; ತಾವು ಇದನ್ನು ನಂಬಿ ಕೆಲಸಮಾಡಬಹುದು.

ಭೃತ್ಯಸಾಡಿದ ಮಾತು ನಿಜವಾಗಿರಬೇಕೆಂದು ತಿಳಿದ ಬಳಿಕ ಮುಂದೇನ ಮಾಡಬೇಕೆಂಬುದನ್ನು ಚಿಂತಿಸುತ್ತಾ ಅಲ್ಲಿಯೇ ನಿಂತಿರುವಲ್ಲಿ, ಕೋಣೆಯೊಳಗಿದ್ದ ಅಧಿಕಾರಿಯು ಪಡಬಡನೆ ಓಡಿಬಂದು— ಮಹಾಶಯ! ಅಪರಾಧಿಯು ವಿಷಪಾನ ಮಾಡಿದಂತಿದೆ. ಅಪರಾಧಿಯು ನಮ್ಮ ವಶವಾಗಿಬಿಟ್ಟನೆಂದು ನಾನು ಉದಾಸೀನ ನಾಗಿ ಕೋಣೆಯೊಳಗಿದ್ದ ತೈಲಚಿತ್ರಗಳನ್ನು ನೋಡುತ್ತಿರುವಲ್ಲಿ, ಆತನು ತನ್ನ ಜೇಪಿನಿಂದ ಏನನ್ನೋ ತೆಗೆದು ಬಾಯಿಗೆ ಹಾಕಿಕೊಂಡನು. ಈಗ ಅವನ ರೀತಿಯೇ ಬೇರೆಯಾಗಿ ಹೋಗಿರುವುದು, ಎಂದು ನುಡಿದ ಕೂಡಲೆಯೇ ಅರಿಂ ದಮನು ಬೆದರಿದವನಾಗಿ ಕೋಣೆಗೆ ಬಂದನು. ಅಧಿಕಾರಿಯೂ ಅವನ ಹಿಂದೆ ಹಿಂದೆಯೇ ಬಂದನು. ಅರಿಂದಮನು ಕಲ್ಯಾಣಮಲ್ಲನನ್ನು ನೋಡುತ್ತಿದ್ದ ಹಾಗೆಯೇ ಆತನ ತಲೆಯು ಕುತ್ತಿಗೆಯ ಮೇಲೆ ನಿಲ್ಲಲಾರದೆ ಚೌಪದಿಯ ಬೆನ್ನಿಗೆ ವಾಲಿತು, ಬಾಯಿ ಬಿಟ್ಟುಕೊಂಡಿತು, ಕಣ್ಣಿನ ಗುಡ್ಡೆಗಳು ಸ್ಥಿರವಾದುವು ಅರಿಂ ದಮನು ಹೀಗೆಯೇ ನೋಡುತ್ತಿರುವಾಗ, ಆತನ ಬಲದ ಕೈಯಲ್ಲಿ ಸಣ್ಣ ಸೀಸೆ ಯೊಂದು ಇದ್ದಂತೆ ಕಂಡುಬಂದಿತು. ಅರಿಂದಮನು ಅದನ್ನು ತೆಗೆದುಕೊಂಡು ಚೆನ್ನಾಗಿ ಪರೀಕ್ಷೆಮಾಡಿದ ಬಳಿಕ— ಹತಭಾಗ್ಯನಾದ ಕಲ್ಯಾಣಮಲ್ಲನು ನಿಜ ವಾಗಿಯೂ ವಿಷವನ್ನೇ ಪಾನಮಾಡಿ ಸತ್ತಿರುವನು. ಅಪಮಾನದ ಭಯದಿಂದ ಆತ್ಮಹತ್ಯೆಯನ್ನುಂಟುಮಾಡಿಕೊಂಡಿರುವನು. ಮಹಾಶಯ! ನೀವು ಕೊಂಚ ಎಚ್ಚರಿಕೆಯಿಂದಿದ್ದಿದ್ದರೆ, ಈತನು ವಿಷಪಾನಮಾಡುವುದಕ್ಕೆ ಅವಕಾಶವಾಗುತ್ತಿರ ಲಿಲ್ಲ, ಎಂದನು.

ಅರಿಂದಮನ ಮಾತನ್ನು ಕೇಳಿದ ಕೂಡಲೆ, ಅಧಿಕಾರಿಯು ಅಪಮಾನದಿಂದ ಕಂಗೆಟ್ಟವನಾಗಿ ಗದ್ಗದ ಸ್ವರದಿಂದ— ಮಹಾಶಯ! ಆತನು ಹೀಗೆ ವಿಷವನ್ನು ಪಾನಮಾಡುತ್ತಾನೆಂದು ನನಗೆ ಮೊದಲೇ ಗೊತ್ತಿದ್ದಿದ್ದರೆ, ನಾನು ಇಷ್ಟಕ್ಕೆ ಆಸ್ಪದ ಕೊಡುತ್ತಿದ್ದೆನೇ? ದಸ್ತಗಿರಿ ಮಾಡುತ್ತಾರೆಂಬ ಶಂಕೆಯನ್ನೇ ಅರಿಯದ ಆತನು ಇಷ್ಟು ಬೇಗನೆ ವಿಷಪಾನಮಾಡಬಲ್ಲನೆಂದು ಆರಿಗೆ ತಾನೇ ಊಹಿಸಲು ಸಾಧ್ಯವು? ಲೋಕದಲ್ಲಿ ಅನೇಕರು ಇಂತಹ ಸಂದರ್ಭಗಳಲ್ಲಿ ಆತ್ಮಸಮರ್ಥನ ಮಾಡಿಕೊಳ್ಳುವುದನ್ನು ನಾನು ಎಷ್ಟೋ ಕಡೆಗಳಲ್ಲಿ ನೋಡಿರುವೆನು; ಆದರೆ ಇಂತಹ ಆತ್ಮಸಮರ್ಪಣದ ಬಗೆಯನ್ನು ನಾನು ಎಲ್ಲಿಯೂ ನೋಡಿಲ್ಲ, ಕೇಳಿಯೂ ಇಲ್ಲ, ಎಂದು ಅಭಿಜ್ಞನಂತೆ ಮಾತನಾಡಿದನು.

ಅರಿಂದಮ— ದಾರಿಯಲ್ಲಿ ನಡೆದ ನರಹತ್ಯಾ ಪ್ರಯತ್ನದ ವಿಷಯದಲ್ಲಿ ಅಪರಾಧವು ಕಲ್ಯಾಣಮಲ್ಲನ ಮೇಲೆ ಒರಗಿದರೂ ಒರಗಬಹುದು, ಬಿಟ್ಟರೂ ಬಿಡಬಹುದು. ಅದಕ್ಕಾಗಿ ಅವನು ಎಂದಿಗೂ ಚಿಂತಿಸಿದವನಲ್ಲ. ಈತನು ಮತ್ತೊಂದು ಗುರುತರವಾದ ವಿಪತ್ತಿಗೆ ಸಿಕ್ಕಿಬಿದ್ದಿರುವನು. ಅದು ನನ್ನಿಂದ ರಟ್ಟಾಗಿ ತನಗೆಲ್ಲಿ ಶಿಕ್ಷೆಯಾಗುವುದೋ ಎಂದು ತಿಳಿದು ಮೊದಲೇ ವಿಷಪಾನ ಮಾಡಿ ಸತ್ತನು.

ಅಧಿಕಾರಿ— ಮುಂದೆ ಮಾಡಬೇಕಾದುದೇನು, ಮಹಾಶಯ ? ವೈದ್ಯನನ್ನು ಕರೆಯಿಸಿಕೊಂಡು ಆತನ ಅಭಿಪ್ರಾಯದಂತೆ ನಾವು ನಡೆದುಕೊಳ್ಳಬೇಕಲ್ಲವೇ ?

ಅರಿಂದಮನು " ಹಾಗೆಯೇ ಮಾಡಬೇಕು, " ಎಂದು ಹೇಳಿ ಭೃತ್ಯನೊಬ್ಬನನ್ನು ಕರೆದು ಕಲ್ಯಾಣಮಲ್ಲನ ಮನೆಯ ವೈದ್ಯನನ್ನು ಕರೆತರುವಂತೆ ಅಪ್ಪಣೆ ಮಾಡಿದನು. ಇದಾದ ಹತ್ತು ನಿಮಿಷಗಳೊಳಗಾಗಿ ವೃದ್ಧನಾದ ಗೃಹವೈದ್ಯನು ಅತ್ಯಂತ ಸಂಕಟದಿಂದ ಅಲ್ಲಿಗೆ ಬಂದನು.

ಲೋಕದಲ್ಲಿ ದೊಡ್ಡದೊಡ್ಡ ವಿಷಯಗಳು ಗುಟ್ಟಿನಲ್ಲಿರಲೊಲ್ಲವು ; ಅವು ಹೇಗೋ ಬಹಿರಂಗಕ್ಕೆ ಬಂದುಬಿಡುವುವು. ಇದರ ಕಾರಣವನ್ನು ತಿಳಿಯಲು ಆರಿಗೂ ಸಾಧ್ಯವಿಲ್ಲ. ಹೇಗಾದರೂ ಆಗಲಿ, ಕಲ್ಯಾಣಮಲ್ಲನು ವಿಷಪಾನದಿಂದ ಆತ್ಮಹತ್ಯೆಯನ್ನುಂಟುಮಾಡಿಕೊಂಡ ವಿಷಯವು ಆ ಕೂಡಲೆಯೇ ರಾಜನಗರಕ್ಕೆ ತಲಪಿ ಸೂರ್ಯಪ್ರಕಾಶವೆಂಬ ದೈನಂದಿನ ಪತ್ರಿಕೆಯಲ್ಲಿ ಬೆಳಗಾಗುವುದಕ್ಕೆ ಮುಂಚೆಯೇ ದೊಡ್ಡದೊಡ್ಡ ಅಕ್ಷರಗಳಲ್ಲಿ ಮುದ್ರಿಸಲ್ಪಟ್ಟಿದ್ದಿತು. ಆ ವಿಷಯ ವಿವರಣದ ಶಿರೋನಾಮವು ಈ ರೀತಿಯಲ್ಲಿದ್ದಿತು :—

— ಈಶ್ವರೀ ದುರ್ಗದ —

! ಸರದಾರ ಕಲ್ಯಾಣಮಲ್ಲನ ದಸ್ತಗಿರಿ !

! ವಿಷಪಾನದಿಂದ ಆತ್ಮಹತ್ಯೆ !

---

## ಎರಡನೆಯ ವಿಲಾಸ

ಕಳ್ಳನ ಭ್ರಮ ವಿಭ್ರಮ.

ತಾಂತಿಯಾಭಿಲ್ಲನು ರಾಜರಾಜೇಶ್ವರೀ ಮಂದಿರದ ತನ್ನ ಕೋಣೆಯಲ್ಲಿ **ಕುಳಿತುಕೊಂಡು ಚಿಂತಿಸುತ್ತಿರುವನು :—**

“ ವೇಷಪರಿವರ್ತನೆಯಿಂದಲೂ ಶತ್ರುವಿನ ಕೈಗೆ ಸಿಕ್ಕಿಬೀಳುವ ದುರ್ಯೋಗವು ನನಗೆ ಒದಗಿ ಬಂದಿದ್ದಿತೆಂದ ಮೇಲೆ ನನ್ನ ಸ್ವರೂಪವನ್ನು ಎಷ್ಟು ನಿಂದಿಸಿಕೊಂಡರೂ ಸಾಲದುದಾಗಿದೆ. ಕಳ್ಳನ ಮನವು ಆವಾಗಲೂ ಶಂಕೆಯಿಂದಲೇ ಕೂಡಿರುವುದೆಂಬುದನ್ನು ಆರು ತಾನೆ ಅರಿಯದವರಾಗಿರುವರು ? ಗ್ರಹಗಳು ಆವಾಗಲೂ ಉಚ್ಚವಾಗಿಯೇ ಇರುವುದಿಲ್ಲವೆಂದ ಮೇಲೆ, ಮನುಷ್ಯನಿಗೆ ಆವ ಕಾಲದಲ್ಲಿ ಆವ ವಿಪತ್ತು ಕಾದಿರುವುದೋ ಬಲ್ಲವರಾರು? ಅಲ್ಪಮತಿಯಾದ ಮಾನವನ ಕಣ್ಣಿಗೆ ಮಣ್ಣೆರಚಿ ಕೆಲಸಮಾಡಬಹುದು ; ಆದರೆ ದುರ್ದೈವವನ್ನು ವಂಚಿಸಿ ಬದುಕುವುದು ಸಾಧ್ಯವೇ? ತಲೆ ಗಟ್ಟಿಯಾಗಿದೆಯೆಂದು ಕಲ್ಲ ಹಾಯುವುದು ಎಂದಾದರೊಂದು ದಿನ ಪ್ರಾಣಕ್ಕೆ ಅಪಾಯವನ್ನೇ ತಂದೊಡ್ಡುವುದು. ಮಾನವನು ಕೆಲಕೆಲವು ವೇಳೆಗಳಲ್ಲಿ ಹದ್ದು ಮೀರಿ ಕೆಲಸಮಾಡುವುದಕ್ಕೆ ತೊಡಗುವನು. ಫಲಾಫಲ ಪ್ರಸಂಗವು ದೈವಾಯತ್ತವಾದುದರಿಂದ ನಾವು ಅಡಿಗಡಿಗೂ ಮುಗ್ಗರಿಸಿ ಬೀಳುವೆವು. ಇಷ್ಟಾದರೂ ಮನಸ್ಸಿಗೆ ವಿವೇಕವನ್ನು ತಂದುಕೊಳ್ಳದೆಯೇ ಅವಿಚ್ಛಿನ್ನವಾಗಿ ಕೆಲಸಮಾಡುತ್ತಲೇ ಇರುವೆವು. ಉಪದಿಷ್ಟನು ಮುಗ್ಗರಿಸುವುದಾದರೂ ಉಪದೇಶಕನೂ ಮುಗ್ಗರಿಸುವನು ; ಅವಿವೇಕಿಯು ಮುಗ್ಗರಿಸಿದನೆಂದು ಆಡಿಕೊಳ್ಳುವ ವಿವೇಕಿಯೂ ಮುಗ್ಗರಿಸುವನು. ತಪ್ಪುಹಜ್ಜೆಗಳನ್ನಿಡುವ ಮಗುವು ಮುಗ್ಗರಿಸುವುದು ಸಹಜವಾದರೂ, ಲೋಕಾನುಭವದಿಂದ ಯುಕ್ತಾಯುಕ್ತ ಪರಿಶೀಲನೆ ಮಾಡಿದ ಬುದ್ಧಿಮಂತನೆಂದು ಹೊಗಳಿಸಿಕೊಳ್ಳುವ ದೊಡ್ಡವನೂ ಮುಗ್ಗರಿಸುವುದಾದರೆ, ಈ ದೋಷವನ್ನು ಆರ ಮೇಲೆ ಒರಗಿಸಬಹುದು? ನಮ್ಮ ಬುದ್ಧಿಯೆಲ್ಲವೂ ಪರೋಪದೇಶಕ್ಕಾಗಿಯೇ ಹೊರತು ಸ್ವಪ್ರಯೋಜನಕ್ಕಲ್ಲ. ಹೇಗಾದರೂ ಆಗಲಿ, ಹಗಲ ಹೊತ್ತಿನಲ್ಲಿ ಹೊರಗೆ ಹೋಗುವುದು ಅಪಾಯಕರವೇ ಸರಿ. ರಾತ್ರಿಗೂ ಕಳ್ಳರಿಗೂ ನಿತ್ಯಸಂಬಂಧವಿರುವುದರಿಂದ, ರಾತ್ರಿಯಲ್ಲಿ ವೇಷಾಂತರಗಳಿಂದ ಸಂಚರಿಸುವುದೇ ಸರ್ವಪ್ರಕಾರದಲ್ಲಿಯೂ ಮೇಲಾದುದು. ”

ತಾಂತಿಯಾಭಿಲ್ಲನು ಹೀಗೆಲ್ಲಾ ಪರಿಪರಿಯಾಗಿ ಚಿಂತಿಸಿ ಚಿಂತಿಸಿ, ಆವ ರಾತ್ರಿಯಲ್ಲಿ ಕಲ್ಯಾಣಮಲ್ಲನು ವಿಷಪಾನದಿಂದ ಆತ್ಮಹತ್ಯೆಯನ್ನುಂಟುಮಾಡಿಕೊಂಡನೋ, ಅದೇ ರಾತ್ರಿಯ ಶೇಷಭಾಗದಲ್ಲಿ ವಿನೋದಾರ್ಥವಾಗಿ ಮನೆಯಿಂದ ಹೊರಹೊರಟನು. ಆಗ ಅವನನ್ನು ಆರಾದರೂ ನೋಡಿದ್ದಿದ್ದರೆ, ಆರೋ ಕೋಟೀಶ್ವರನಿರಬಹುದೆಂದು ಧಾರಾಳವಾಗಿ ಹೇಳುತ್ತಿದ್ದರು. ತಾಂತಿಯನ ಆಗಿನ ವೇಷದಲ್ಲಿ, ಅಮೂಲ್ಯ ರತ್ನಖಚಿತವಾದ ಸುವರ್ಣದ ಕರ್ಣಾಭರಣವು ಕಣ್ಣುಗಳನ್ನು ಕೋರೈಸುತ್ತಿದ್ದುವು ; ರತ್ನಹಾರವು ಆತನ ವಕ್ಷಃಪ್ರದೇಶವನ್ನು ಅಲಂಕರಿಸಿ ವೈಜಯಂತೀಮಾಲೆಯಂತೆ ಥಳಥಳಗುಟ್ಟುತಿದ್ದಿತು. ನವರತ್ನಗಳಿಂದ ದೇದೀಪ್ಯಮಾನವಾದ ಉಂಗುರಗಳು ಆತನ ಬೆರಳುಗಳ ಶೋಭಾರಾಶಿಯನ್ನು

ಇಮ್ಮಡಿಸುತ್ತಿದ್ದುವು. ಕೊಡುವುದೇ ಪಡೆವುದರ ಮರ್ಮವೆಂಬ ಧರ್ಮಕರ್ಮದ ರಹಸ್ಯವನ್ನು ಈತನು ಚೆನ್ನಾಗಿಯೂ ಬಲ್ಲವನಾಗಿದ್ದುದರಿಂದ, ಲೋಕದಲ್ಲಿ ಮಾನವನು ಹಣವನ್ನು ಹೇಗೆ ಸಂಪಾದಿಸಬೇಕು, ಸಂಪಾದಿಸಿದ ಹಣವನ್ನು ಹೇಗೆ ವೆಚ್ಚಮಾಡಬೇಕು, ಎಂಬುದನ್ನು ನಮ್ಮ ತಾಂತಿಯಾಭಿಲ್ಲನೊಬ್ಬನೇ ಅರಿತುಕೊಂಡಿದ್ದನು. ಆದುದರಿಂದ ಸಂಪಾದಿಸಿದ ಹಣವನ್ನು - ಆನಂದವಿಲಾಸ ದಲ್ಲಿ ವೆಚ್ಚಮಾಡಿ ಸುಖಿಸಬೇಕೆಂದು ಬಯಸಿ ತಾಂತಿಯನು ಈ ರಾತ್ರಿಯಲ್ಲಿ ಹೊರಹೊರಟಿದ್ದನು.

ರಾಜನಗರದಂತಹ ದೊಡ್ಡ ಪಟ್ಟಣಗಳಲ್ಲಿ ಆನಂದವಿಲಾಸಗಳಿಗೆ ಕೊರತೆ ಯೇನು? ಎಲ್ಲಿ ನೋಡಿದರೂ ಪಾನಾಹಾರಮಂದಿರಗಳೂ, ಎಲ್ಲಿ ನೋಡಿದರೂ ವೇಶ್ಯಾಂಗನೆಯರ ಘಮಘಮಿಸುವ ವಿಲಾಸಮಂದಿರಗಳೂ, ಎಲ್ಲಿ ನೋಡಿದರೂ ವಾದ್ಯವಿಶೇಷಗಳಿಂದ ಘೋರ್ಗರೆಯುತ್ತಿರುವ ನಾಟಕಮಂದಿರಗಳೂ, ಎಲ್ಲಿ ನೋಡಿ ದರೂ ಬಗೆಬಗೆಯ ಜೂಜಾಟದ ಗುಪ್ತಮಂದಿರಗಳೂ ವಿಲಾಸಪ್ರಿಯರ ಮನ ಸ್ಸನ್ನು ಆವಾಗಲೂ ಸೆಳೆಯುತ್ತಿರುವುವು. ವಿಲಾಸಪ್ರಿಯನಾದ ತಾಂತಿಯಾ ಭಿಲ್ಲನು ದೊಡ್ಡಮನುಷ್ಯರ ಜೂಜಿನ ಕಟ್ಟೆಯೊಂದಕ್ಕೆ ಹೋಗಿ ತನ್ನ ಅದೃಷ್ಟ ವನ್ನು ಪರೀಕ್ಷಿಸಿ ನೋಡಬೇಕೆಂದು ಸಂಕಲ್ಪಿಸಿದವನಾಗಿ ಐಶ್ವರ್ಯವಂತನಂತೆ ವೇಷವನ್ನು ತಾಳಿಕೊಂಡು ಒಂದು ಸುಂದರವಾದ ಗಾಡಿಯಲ್ಲಿ ಕುಳಿತು ಹೊರಟನು. ಬಂಡಿಯು ಬಲು ದೂರ ಸಾಗಿದ ಬಳಿಕ, ಪತ್ರಿಕೆಗಳ ಮಾರಾಟದವನೊಬ್ಬನು ಬಂಡಿಯ ಬಳಿಗೆ ಬಂದು "ಈ ದಿನದ ಬಿಸಿ ಬಿಸಿ ಸುದ್ದಿ! ದೊಡ್ಡ ಜಹಗೀರ ದಾರನ ದಸ್ತಗಿರಿ! ದಸ್ತಗಿರಿಯಾದ ಮೇಲೆ ವಿಷಪಾನ! ವಿಷಪಾನದಿಂದ ಆತ್ಮ ಹತ್ಯೆ! ಆಶ್ಚರ್ಯದ ಮೇಲೆ ಆಶ್ಚರ್ಯ! ಎಲ್ಲರೂ ಓದಬೇಕಾದ ಇಂದಿನ ದಿನದ ಮೊದಲನೆಯ ಸುದ್ದಿ! ಬನ್ನಿರಿ, ಬನ್ನಿರಿ; ಓದುವವರೆಲ್ಲಾ ಕೊಳ್ಳಿರಿ, ಕೊಳ್ಳಿರಿ!" ಎಂದು ಕೂಗಿಕೊಳ್ಳುತಿದ್ದನು. ತಾಂತಿಯನು ಆದರದಿಂದ ಒಂದು ಪತ್ರಿಕೆಯನ್ನು ಕೊಂಡುಕೊಂಡು ಗಾಡಿಯೊಳಗಿದ್ದ ದೀಪದ ಬೆಳಕಿನಲ್ಲಿ ಓದತೊಡಗಿದನು. ಅದ ರಲ್ಲಿ "ಈಶ್ವರೀದುರ್ಗದ ಜಹಗೀರುದಾರನಾದ ಸರದಾರ ಕಲ್ಯಾಣಮಲ್ಲನು ದಸ್ತ ಗಿರಿಯಾದ ಬಳಿಕ ವಿಷವನ್ನು ಪಾನಮಾಡಿ ಆತ್ಮಹತ್ಯೆಯನ್ನುಂಟುಮಾಡಿಕೊಂ ಡನು," ಎಂದು ಬರೆದಿದ್ದಿತು.

ಈ ವಿಷಯವು ತಾಂತಿಯನ ದೃಷ್ಟಿಗೆ ಬಿದ್ದಕೂಡಲೆ, ಅವನ ಕೈಯಿಂದ ಪತ್ರಿಕೆಯು ಕಸಿದು ಕೆಳಗೆ ಬಿದ್ದಿತು, ಆತನ ಮುಖವು ಕೂಡಲೆಯೇ ಕಂಗೆಟ್ಟು ದಲ್ಲದೆ ಮೇಲುಸಿರಿಗಿಟ್ಟಿತು. ತಾಂತಿಯನು ಕೊಂಚಹೊತ್ತು ಚೇತರಿಸಿಕೊಂಡವ ನಾಗಿ ಮುಂದಣ ವಿಷಯವನ್ನು ಓದಲಾರಂಭಿಸಿದನು.

“ಇದೇ ರಾತ್ರಿಯಲ್ಲಿ ಇಬ್ಬರು ಪೋಲೀಸಿನವರು (ದೊಡ್ಡ ಅಧಿಕಾರಿಗಳೇ ಇರಬಹುದು) ಈಶ್ವರೀದುರ್ಗಕ್ಕೆ ಹೋಗಿ ಅಲ್ಲಿನ ಸರದಾರನಾದ ಕಲ್ಯಾಣಮಲ್ಲ ಮಹಾಶಯನನ್ನು ದಸ್ತಗಿರಿ ಮಾಡಿದರು. ಸರದಾರನು ಮಾನಕ್ಕೆ ಅಂಜಿ ಮಾನಕ್ಕಿಂತಲೂ ಪ್ರಾಣವು ದೊಡ್ಡದಲ್ಲವೆಂಬುದನ್ನು ತೋರುವುದಕ್ಕಾಗಿ ವಿಷಪಾನ ಮಾಡಿ ಪ್ರಾಣಬಿಟ್ಟನು. ಆವ ಕಾರಣದಿಂದ ಸರಕಾರದ ಪೋಲೀಸಿನವರು ಸರದಾರನನ್ನು ದಸ್ತಗಿರಿಮಾಡಿದರೋ ಆ ವಿಷಯವಿನ್ನೂ ನಮ್ಮ ಕಿವಿಗೆ ಬಿದ್ದಿಲ್ಲ. ಪೋಲೀಸಿನವರು ಇದನ್ನು ಗುಟ್ಟಿನಲ್ಲಿಯೇ ಇಟ್ಟು ಕೆಲಸಮಾಡುತ್ತಿರುವರು.

ಕೆಲವು ದಿನಗಳ ಹಿಂದೆ ಇಂದಿರಾಕಾಂತನೆಂಬುವನು ರಾಜಘಟ್ಟದ ಜಹಗೀರದಾರನಾದ ರಾಜಮಾರ್ತಂಡ ಮಹಾಶಯನಿಂದ ಆಹೂತನಾಗಿ ರಾತ್ರಿಯ ಹೊತ್ತಿನಲ್ಲಿ ರಾಜಘಟ್ಟಕ್ಕೆ ಹೊರಡಬೇಕೆಂದು ಒಂದು ವಿದ್ಯುದ್ಯಾನದಲ್ಲಿ ಪಯಣ ಬಳೆಯಿಸುತ್ತಿದ್ದನು. ಮಧ್ಯಮಾರ್ಗದಲ್ಲಿ ದಾರಿಗೆ ಅಡ್ಡಲಾಗಿ ಬಿಗಿಸಿದ್ದ ತಂತಿಗಳಿಂದ ಅಟಕಾಯಿಸಲ್ಪಟ್ಟು ಪಕ್ಕದ ಕಮರಿಯಲ್ಲ ಮುಗುಚಿಕೊಂಡನು. ಆಗ ಆತನ ಪ್ರಾಣವುಳಿದುದೇ ಪೂರ್ವಪುಣ್ಯೋದಯವೆಂದು ಹೇಳಬೇಕಾಗಿದೆ. ಈ ದುರ್ಘಟನೆಯು ಈಶ್ವರೀದುರ್ಗಕ್ಕೆ ಸೇರಿದ ಸ್ಥಲದಲ್ಲಿ ನಡೆದಿರುವುದರಿಂದ, ಕಲ್ಯಾಣಮಲ್ಲನೇ ಈ ಅಪರಾಧದಲ್ಲಿ ಅಪರಾಧಿಯಾಗಿರಬೇಕೆಂದು ಜನರಾಡಿಕೊಳ್ಳುತ್ತಿರುವರು. ಈ ಆಧಾರದ ಮೇಲೆಯೇ ಪೋಲೀಸಿನವರು ಆತನನ್ನು ದಸ್ತಗಿರಿ ಮಾಡಿರಬಹುದು.”

ತಾಂತಿಯಾಭಿಲ್ಲನು ಇಷ್ಟನ್ನು ಓದಿದ ಕೂಡಲೆ ಅವನ ಕಣ್ಣುಗಳಲ್ಲಿ ಕತ್ತಲೆಯು ಕವಿದುಕೊಂಡಿತು ; ಬಳಿಕ ಆತನು ಸ್ತಂಭೀಭೂತನಾಗಿ ದಿಕ್ಕುತೋರದೇ ಕುಳಿತುಬಿಟ್ಟನು. ಸ್ವಕಾರ್ಯ ಸಾಧನೆಗಾಗಿ ಹೂಡಿದ್ದ ಹೂಟವೆಲ್ಲವೂ ಮಣ್ಣುಪಾಲಾಯಿತೆಂದು, ಆತನ ವ್ಯಸನಕ್ಕೆ ಪಾರವೇ ಇರಲಿಲ್ಲ. ಆಗ ಆತನ ಮನದಲ್ಲಿ ತೋರಿದುದೇನೆಂದರೆ:—

“ಆವ ಕಲ್ಯಾಣಮಲ್ಲನು— ವಿಪುಲವಾದ ಸಂಪತ್ತಿಗೆ ಏಕಾಧಿಪತಿಯಾದ ಕಲ್ಯಾಣಮಲ್ಲನು, ತನಗೆ ಭೃತ್ಯನಂತಾಗಿದ್ದನೋ, ಆವ ಕಲ್ಯಾಣಮಲ್ಲನಿಂದ ಬೇಕಾದ ಕಾಲಗಳಲ್ಲೆಲ್ಲಾ ಬೇಕುಬೇಕಾದ ಹಾಗೆ ಹಣವನ್ನು ಕಸಿದುಕೊಳ್ಳಬಹುದಾಗಿದ್ದಿತೋ ಅಂತಹ ಕಲ್ಯಾಣಮಲ್ಲನು ಆತ್ಮಹತ್ಯೆ ಮಾಡಿಕೊಂಡನೇ! ಹಾ ದೈವವೇ! ಸೌಭಾಗ್ಯದ ತುಂಗಶೃಂಗದಿಂದ ನನ್ನನ್ನು ಅಧಃಪಾತಾಳದಲ್ಲಿ ತಳ್ಳಿದೆಯಾ? ಕೈಗೆ ಬಂದ ತುತ್ತನ್ನು ಬಾಯಿಗೆ ಬಾರದ ಹಾಗೆ ಮಾಡಬಹುದೇ? ಇದಕ್ಕಾಗಿಯೇ ಎಲ್ಲರೂ ನಿನ್ನನ್ನು ನಿಂದಿಸುವರು; ಇದಕ್ಕಾಗಿಯೇ ನಿನ್ನನ್ನು ಕಂಡರೆ ಆರಿಗೂ ಆಗುವುದಿಲ್ಲ. ಜನರಿಗೆ ಆವ ಬಗೆಯ ಉಪಕಾರವೂ ಇಲ್ಲದ ನಿನ್ನ

ಹಾಳು ಬಾಳು ಅದೊಂದು ಬಾಳೇ! ನೀನು ಬದುಕಿರುವುದಕ್ಕಿಂತಲೂ ಸಾಯುವುದು ಮೇಲು."

ಈ ರೀತಿಯಾದ ದುಶ್ಚಿಂತೆಯಿಂದಲೂ ಚಿತ್ತಕ್ಷೋಭೆಯಿಂದಲೂ ತಾಂತಿಯನ ಹೃದಯವು ತಲ್ಲಣಿಸಿಹೋಯಿತು. ಈ ಘೋರತರವಾದ ವ್ಯಸನದಿಂದ ತಾಂತಿಯಾ ಭಿಲ್ಲನು ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ವಿಲವಿಲನೆ ಒದೆದಾಡಿ ಹೋದನು.

ಬಂಡಿಯು ಕೊಂಚ ಹೊತ್ತಿನೊಳಗಾಗಿ ನಿರ್ದಿಷ್ಟವಾದ ಸ್ಥಾನಕ್ಕೆ ಬಂದು ಸೇರಿತು, ಅದರೂ ತಾಂತಿಯನು ಬಂಡಿಯಿಂದ ಇಳಿಯಲಿಲ್ಲ. ಕಾರಣವೇನೆಂದು ಬಂಡಿಯವನು ಇಳಿದುಬಂದು ನೋಡಲು, ತಾಂತಿಯನು ಬಾಹ್ಯಜ್ಞಾನ ಶೂನ್ಯನಂತಾಗಿ ಕುಳಿತಿದ್ದನು. ಬಂಡಿಯವನು ಇದನ್ನು ನೋಡಿ—ಸ್ವಾಮಿ! ಬಂಡಿಯು ತಮ್ಮ ಉದ್ದಿಷ್ಟವಾದ ಸ್ಥಲಕ್ಕೆ ಬಂದಿರುವುದು, ಎಂದನು.

ತಾಂತಿಯಾ— ಗೊತ್ತಾಯಿತು. ನಾನು ಇಲ್ಲಿ ಇಳಿಯಲಾಗುವುದಿಲ್ಲ. ಮುಖ್ಯವಾದ ಪದಾರ್ಥವನ್ನೇ ಮರೆತು ಹೊರಟು ಬಂದಿರುವೆನು. ನಾನು ಅದನ್ನು ತರುವುದಕ್ಕಾಗಿ ಅವಶ್ಯವಾಗಿಯೂ ರಾಜರಾಜೇಶ್ವರೀ ಮಂದಿರಕ್ಕೆ ತೆರಳಲೇ ಬೇಕಾಗಿರುವುದರಿಂದ, ಗಾಡಿಯನ್ನು ಅತ್ತ ಕಡೆ ತಿರುಗಿಸು.

ಬಂಡಿಯವನು ಯಜಮಾನನ ಅಪ್ಪಣೆಯಂತೆ ಕೆಲವು ನಿಮಿಷಗಳೊಳಗಾಗಿಯೇ ಬಂಡಿಯನ್ನು ರಾಜರಾಜೇಶ್ವರೀ ಮಂದಿರದ ಬಳಿಯಲ್ಲಿ ತಂದು ನಿಲ್ಲಿಸಿದನು. ತಾಂತಿಯನು ಬಂಡಿಯವನಿಗೆ ಬಾಡಿಗೆಯನ್ನು ಸಲ್ಲಿಸಿ ತನ್ನ ಕೋಣೆಗೆ ಹೋಗಿ ಬಾಗಿಲನ್ನು ಮುಚ್ಚಿಕೊಂಡು ಪರಿಪರಿಯಾಗಿ ಚಿಂತಿಸಿದನು:—

"ನನ್ನ ದೈವವು ಇನ್ನೂ ಅನುಕೂಲವಾಗಿರುವುದರಿಂದಲೇ, ನಾನು ಈಶ್ವರೀದುರ್ಗವನ್ನು ಸರಿಯಾದ ಕಾಲದಲ್ಲಿಯೇ ಬಿಟ್ಟು ಬಂದು ಬದುಕಿಕೊಂಡೆನು. ಇಲ್ಲವಾದರೆ, ನಾನೂ ಆ ಖೂಳ ಪತ್ತೇದಾರನಾದ ಅರಿಂದಮನ ಕೈಗೆ ಸಿಕ್ಕಿ ಕಲ್ಯಾಣಮಲ್ಲನಂತೆ ನರಳಬೇಕಾಗಿದ್ದಿತು. ಅರಿಂದಮನಾದರೋ ನಮ್ಮ ಬೆನ್ನ ಅಟ್ಟಿರುವನು. ಆತನಿಂದ ನಮಗೆ ಕೊಂಚವಾದರೂ ಸುಖಶಾಂತಿಗಳಿಲ್ಲ. ಇಂದು ಕಲ್ಯಾಣಮಲ್ಲನಿಗಾದರೆ, ಎಂದೋ ನಮ್ಮ ಗತಿಯೂ ಹೀಗೆಯೇ ಆದೀತು. ಇದನ್ನು ಈಗಳಿಂದಲೂ ಚಿಂತಿಸಿ ಫಲವಾದರೂ ಏನು?

ಕಲ್ಯಾಣಮಲ್ಲನು ಹಠಾತ್ತಾಗಿ ಆತ್ಮಹತ್ಯೆ ಮಾಡಿಕೊಂಡು ಸಾಯಲು, ನನ್ನ ಹಣ ಬರುವ ಮಾರ್ಗವು ರುದ್ಧವಾಗಿ ಹೋದುದೇನೋ ಸರಿ; ಆದರೆ, ಅದ

ರೊಡನೆ ನನ್ನ ಭಯವೂ ಒಂದು ತೆರನಾಗಿ ನಿವಾರಣೆಯಾದುದು. ಕಲ್ಯಾಣ ಮಲ್ಲನು ಆತ್ಮಹತ್ಯೆ ಮಾಡಿಕೊಳ್ಳದಿದ್ದರೆ, ನ್ಯಾಯಸ್ಥಾನದಲ್ಲಿ ಹೋಗಿ ನಿಲ್ಲಬೇಕಾಗಿದ್ದಿತು. ಅಲ್ಲಿ ನ್ಯಾಯವಾದಿಗಳ ಪ್ರಕೃತಾಪ್ರಕೃತಗಳಾದ ಪ್ರಶ್ನ ಪರಂಪರೆಗಳಿಂದ, ಆರಾರು ಬಯಲಿಗೆ ಬರುತ್ತಿದ್ದರೋ ಅವರ ಪರಿಣಾಮವೇನಾಗುತಿದ್ದಿತೋ ಕಂಡವರಾರು?

ಈ ಸಂದರ್ಭದಲ್ಲಿ ವೈದ್ಯವಾಗೀಶನೂ ಬದುಕಿದಂತಾಯಿತು. ಕಲ್ಯಾಣ ಮಲ್ಲನು ಬದುಕಿದ್ದ ಪಕ್ಷದಲ್ಲಿ, ವೈದ್ಯನನ್ನು ತಪ್ಪದೆಯೇ ಸಿಕ್ಕಿಸಿಬಿಡುತ್ತಿದ್ದನು. ವೈದ್ಯನಾದರೂ ಬದುಕಿರುವನೆಂಬುದು ನನ್ನ ಭಾಗ್ಯೋದಯವೇ ಸರಿ. ಆತನೂ ಹೋಗಿದ್ದಿದ್ದರೆ, ನನ್ನ ಪಾಡು ನಾಯ ಪಾಡಾಗಿ ಹೋಗುತ್ತಿದ್ದಿತು. ಈಗ ವೈದ್ಯನು ಬದುಕಿರಲಿಕ್ಕಾಗಿ, ನನಗೆ ವಿಶೇಷವಾಗಿ ತೊಂದರೆಗೆ ಕಾರಣವೇನೂ ಇರುವುದಿಲ್ಲ. ಹಣ ಬೇಕಾದಾಗಲೆಲ್ಲಾ ವೈದ್ಯನನ್ನು ಹಿಂಡಿದರಾಯಿತು ; ಹಣವು ಸುರಿದುಹೊಗುವುದು. ವೈದ್ಯನು ಕಲ್ಯಾಣಮಲ್ಲನನ್ನು ಸುಲಿದು ಸುಲಿದು ಗಳಿಸಿಟ್ಟಿರುವ ಹಣವನ್ನು ನನಗಾಗಿ ತೆರಲಿ. ವೈದ್ಯನೇನಾದರೂ ನನ್ನ ಇಷ್ಟಕ್ಕೆ ವಿರೋಧವಾಗಿ ನಡೆವುದಾದರೆ, ನಾನು ಅವನನ್ನೂ ಅವನ ಗುಟ್ಟನ್ನೂ ಹೊರಪಡಿಸಿ ಬಿಡುವೆನು. ಈ ಹೆದರಿಕೆಯಿಂದ ಅವನು ನನಗೆ ಹಣವನ್ನು ಆಗಿಂದಾಗ ಒಪ್ಪಿಸುತ್ತಲೇ ಇರುವನು.

ಪೋಲೀಸಿನವರು ಕಲ್ಯಾಣಮಲ್ಲನನ್ನು ದಸ್ತಗಿರಿಮಾಡಿರುವಂತೆ ವೈದ್ಯವಾಗೀಶನನ್ನೇನಾದರೂ ದಸ್ತಗಿರಿಮಾಡಿರಬಹುದೇ? ಹಾಗೆ ಮಾಡಿದ್ದರೆ ಅದೂ ಪತ್ರಿಕೆಯಲ್ಲಿ ಉಲ್ಲೇಖಿಸಲ್ಪಡುತ್ತಿದ್ದಿತು. ಪತ್ರಿಕೆಯಲ್ಲಿ ಆತನ ಸುದ್ದಿಯೇ ಇಲ್ಲದಿರುವುದರಿಂದ, ವೈದ್ಯನು ಇನ್ನೂ ಪೋಲೀಸಿನವರ ಕೈಗೆ ಸಿಕ್ಕಿಲ್ಲವೆಂದು ತೋರುವುದು. ಅರಿಂದಮನಿಗೆ ವೈದ್ಯನ ಮೇಲೆ ಸಂದೇಹಪಡುವುದಕ್ಕೆ ಅವಕಾಶ ವೊದಗಿದಂತೆ ಕಂಡುಬರುತ್ತಿಲ್ಲ. ಅರಿಂದಮನು ಎಷ್ಟೇ ಬುದ್ಧಿಮಂತನಾದರೂ, ಆತನು ಅಂತರ್ಯಾಮಿಯಲ್ಲ. ಇದರ ಮೇಲೂ ವೈದ್ಯನ ರಹಸ್ಯವನ್ನು ಭೇದಿಸುವುದು ಆರಿಗೂ ಸಾಧ್ಯದ ವಿಷಯವಲ್ಲ.

ವೈದ್ಯನು ದೇವೇಂದ್ರನನ್ನು ತನ್ನ ಸೌಭಾಗ್ಯಮಂದಿರದಲ್ಲಿ ನಿರ್ಬಂಧಿಸಿಟ್ಟಿರುವ ಸಂಗತಿಯನ್ನು ನಮಗೆ ಆಗಲೇ ತಿಳಿಯಪಡಿಸಿದ್ದನು. ಅದರ ಮುಂದಣ ಸಂಗತಿಯೇನೆಂಬುದನ್ನು ತಿಳಿದುಕೊಳ್ಳದೆಯೇ ನಾನು ಇಲ್ಲಿಗೆ ಹೊರಟುಬಂದುಬಿಟ್ಟೆನು. ಈಗ ಅಲ್ಲಿನ ವಿದ್ಯಮಾನವೇನೆಂಬುದನ್ನಾದರೂ ತಿಳಿದು ಮುಂದಣ ಕೆಲಸ ಮಾಡಬೇಕಾಗಿರುವುದು."

ತಾಂತಿಯನು ಅರ್ಧಘಂಟೆಯ ವರೆಗೂ ಹೀಗೆ ಆಲೋಚಿಸಿ, ಭೃತ್ಯನೊಬ್ಬನನ್ನು ಕರೆದು ಬಾಡಿಗೆಯ ಗಾಡಿಯೊಂದನ್ನು ತರುವಂತೆ ಅಪ್ಪಣೆಮಾಡಿದನು. ಗಾಡಿಯು ಸಿದ್ಧವಾಗಲು, ತಾಂತಿಯನು ತನಗೆ ಬೇಕಾದ ಸಾಮುಗ್ರಿಗಳನ್ನು ತೆಗೆದುಕೊಂಡು ಅದರಲ್ಲಿ ಕುಳಿತು— ಭೂತನ ಕಣಿವೆಯನ್ನು ಬಲ್ಲೆಯಾ? ಎಂದು ಬಂಡಿಯವನನ್ನು ಪ್ರಶ್ನೆಮಾಡಿದನು.

ಬಂಡಿಯವನು— ಬಲ್ಲೆನು, ಒಂದೆರಡು ಸಲ ನಾನು ಅಲ್ಲಿಗೆ ಹೋಗಿದ್ದೆನು. ಇಲ್ಲಿಗೆ ಅದು ಐವತ್ತು ಮೈಲಿಗಳ ದೂರದಲ್ಲಿರುವುದು. ದಾರಿಯಾದರೋ ಅಷ್ಟು ಪ್ರಶಸ್ತವಾಗಿಲ್ಲ. ಅಲ್ಲಿಗೆ ಹೋಗಿ ಸೇರಬೇಕಾದರೆ ಕಡೆಯ ಪಕ್ಷದಲ್ಲಿ ಮೂರು ಗಂಟೆಗಳ ಕಾಲವಾದರೂ ಬೇಕಾಗುವುದು.

ತಾಂತಿಯಾ— ಐವತ್ತು ಮೈಲಿಗಳ ದಾರಿ ನಡೆಯಬೇಕಾದರೆ ಮೂರು ಗಂಟೆಗಳ ಕಾಲ ಬೇಕಾಗುವುದೇ? ಬಂಡಿಯನ್ನು ವೇಗವಾಗಿ ನಡೆಯಿಸಿದಲ್ಲಿ ಒಂದೇ ಗಂಟೆಯಲ್ಲಿ ಅಲ್ಲಿಗೆ ಹೋಗಬಹುದು.

ಬಂಡಿಯವನು— ಒಂದು ನಿಮಿಷಕ್ಕೆ ಒಂದು ಮೈಲಿಯೇ! ಆಗಲಾರದು, ಸ್ವಾಮಿ! ರಸ್ತೆಯು ಸರಿಯಾಗಿದ್ದಿದ್ದರೆ ಯತ್ನಮಾಡಿ ನೋಡುತ್ತಿದ್ದೆನು. ದಾರಿಯಲ್ಲಿ ಏರುಪೇರುಗಳಿರುವುದರಿಂದ ತಮ್ಮಿಷ್ಟವು ನೆರವೇರಲಾರದು. ನಾನು ನನ್ನ ಸಾಹಸವೆಲ್ಲವನ್ನೂ ವೆಚ್ಚಮಾಡಿ ಎರಡುಗಂಟೆಗಳ ಕಾಲದೊಳಗಾದರೂ ತಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗಬಲ್ಲೆನು. ಕಾಲವು ಅದಕ್ಕಿಂತಲೂ ಕಡಮೆಯಾಗಲಾರದು.

ತಾಂತಿಯಾ—ಎಷ್ಟು ಬೇಗನೆ ಬಿಟ್ಟರೆ ಅಷ್ಟು ಹೆಚ್ಚಿನ ಪಾರಿತೋಷಿಕವು ಸಲ್ಲುವುದು. ಲಾಭಾಲಾಭದ ವಿಚಾರವನ್ನು ನೀನೇ ನೋಡಿಕೊಳ್ಳು.

ಬಂಡಿಯವನು ಮತ್ತಾವ ಮಾತನ್ನೂ ಆಡದೆ ಒಂದೇ ಉಸಿರಿನಲ್ಲಿ ಬಂಡಿಯನ್ನು ಮುಂದಕ್ಕೆ ಸಾಗಿಸಿಕೊಂಡು ಹೊರಟನು.

---

## ಮೂರನೆಯ ವಿಲಾಸ

### ಪಿಶಾಚ ಮಂತ್ರ

ಎರಡು ಗಂಟೆಗಳ ಕಾಲದೊಳಗಾಗಿಯೇ ಬಂಡಿಯು ಭೂತನ ಕಣಿವೆಗೆ ಬಂದು ಸೇರಿತು. ಬಳಿಕ ತಾಂತಿಯನು ಬಂಡಿಯವನನ್ನು ಕುರಿತು— ಇದರ

ಸಮೀಪದಲ್ಲಿರುವ ಸೌಭಾಗ್ಯಮಂದಿರದ ಕಡೆಗೆ ಬಂಡಿಯನ್ನು ತಿರುಗಿಸು, ಎನಲಾಗಿ ಬಂಡಿಯವನು— ಸ್ವಾಮೀ! ಈ ಹೆಸರನ್ನು ಮೊದಲೇ ಹೇಳಿದ್ದರೆ, ಮತ್ತೊಂದು ಹತ್ತಿರದ ಮಾರ್ಗದಿಂದ ಇನ್ನೂ ಅಲ್ಪಕಾಲದಲ್ಲಿಯೇ ತಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗಿಬಿಡುತ್ತಿದ್ದೆನು, ಎಂದು ನುಡಿದನು.

ತಾಂತಿಯಾ ಭಿಲ್ಲನು ಬಂಡಿಯವನಿಗೆ ಸೌಭಾಗ್ಯಮಂದಿರಕ್ಕೆ ಹೋಗಬೇಕೆಂದು ಮೊದಲೇ ಅದೇಕೆ ತಿಳಿಸಲಿಲ್ಲವೋ, ಅದರಲ್ಲಿ ಅವನಿಗೆ ಅದಾವ ಉದ್ದೇಶವಿದ್ದಿತೋ ಬಲ್ಲವರಾರು? ಆತನೂ ಕಾರಣಾಂತರಗಳಿಗೊಳಪಟ್ಟು ಹೆಸರನ್ನು ಹೇಳದೇ ಇದ್ದರೂ ಇರಬಹುದು. ಕೆಲಸವಾದ ಮೇಲೆ ಅದರ ವಿಚಾರವನ್ನು ಕಟ್ಟಿಕೊಂಡು ನಮಗಾಗುವುದೇನಿರುವುದು?

ಬಂಡಿಯು ಯಥಾಸಮಯದಲ್ಲಿ ಸೌಭಾಗ್ಯಮಂದಿರದ ಮುಂಗಡೆಯಲ್ಲಿ ಬಂದು ನಿಂತಿತು. ತಾಂತಿಯನು ಬಲು ಹೊತ್ತು ಬಂಡಿಯಲ್ಲಿಯೇ ಕುಳಿತುಕೊಂಡು "ಪೋಲೀಸಿನವರಾಗಲಿ, ಪತ್ತೇದಾರರಾಗಲಿ ವೈದ್ಯವಾಗೀಶನ ವಿಷಯದಲ್ಲಿ ಸಂಶಯಪಟ್ಟು ಅಲ್ಲಲ್ಲಿ ಕಾದುಕೊಂಡಿರಬಹುದೇ?" ಎಂದು ಸುತ್ತಲೂ ನೋಡಿದನು. ಆ ಗಂಭೀರವಾದ ರಾತ್ರಿಯಲ್ಲಿ ಎಲ್ಲವೂ ನಿಶ್ಶಬ್ದವಾಗಿಯೇ ಇದ್ದುದರಿಂದ ಭಯಪಡುವುದಕ್ಕೆ ಕಾರಣವೇನೂ ಇರಲಾರದೆಂದು ತಾಂತಿಯನು ಭಾವಿಸಿಕೊಂಡವನಾಗಿ ಸೌಭಾಗ್ಯಮಂದಿರವನ್ನು ನೋಡಿದನು. ಎರಡನೆಯ ಅಂತಸ್ತಿನಲ್ಲಿ ದೀಪಗಳು ಎಂದಿನಂತೆ ಉರಿಯುತ್ತಿದ್ದುವು. ಸೌಭಾಗ್ಯಮಂದಿರದ ಪ್ರಕೃತಿಯು ಎಂದಿನಂತೆ ಶಾಂತಿಮಯಿಯಾಗಿದ್ದಿತು. ತಾಂತಿಯನು ಮನಸ್ಸಿನಲ್ಲಿ ಧೈರ್ಯವನ್ನು ತೆಗೆದುಕೊಂಡವನಾಗಿ ಬಂಡಿಯಲ್ಲಿ ಇದ್ದ ಹಾಗೆಯೇ ಮನದಣಿಯೆ ಮದ್ಯವನ್ನು ಸೇವಿಸಿ ಬಂಡಿಯಿಂದಿಳಿದು ಹೊರಗೆ ಬಂದನು. ಬಳಿಕ ಬಂಡಿಯವನಿಗೆ ಸಲ್ಲಿಸಬೇಕಾದ ಬಾಡಿಗೆ ಹಾಗೂ ಪಾರಿತೋಷಿಕವನ್ನು ಸಲ್ಲಿಸಿ,— ನನ್ನ ಕೆಲಸವು ಎರಡು ಗಂಟೆಗಳ ಕಾಲದೊಳಗಾಗಿ ಮುಗಿದು ಹೋಗಬಹುದು. ನೀನು ಅಲ್ಲಿಯ ವರೆಗೂ ನಿರೀಕ್ಷಿಸುತ್ತಿರು. ಅಷ್ಟರಲ್ಲಿ ನಾನು ಬಾರದಿದ್ದಲ್ಲಿ ನೀನು ಹೊರಟುಹೋಗಬಹುದು, ಎಂದು ಹೇಳಿ ಸೌಭಾಗ್ಯಮಂದಿರದ ಬಾಗಿಲಿಗೆ ಬಂದು ಗಂಟೆಯನ್ನು ಅಲ್ಲಾಡಿಸಿದನು. ಪ್ರಹರಿಯೊಬ್ಬನು ಆರೆಂದು ತಿಳಿಯುವುದಕ್ಕಾಗಿ ಬಾಗಿಲ ತೆಗೆದು ಹೊರಗೆ ಬಂದನು. ತಾಂತಿಯನು ಅವನನ್ನು ಕುರಿತು— ಯಜಮಾನರು ಮನೆಯಲ್ಲಿಯೇ ಇರುವರೇ? ಎಂದು ವಿನಯದಿಂದ ಪ್ರಶ್ನೆಮಾಡಿದನು.

ಪ್ರಹರಿ— ಈಗ ಅರ್ಧರಾತ್ರದ ವೇಳೆಯಾದುದರಿಂದ ಅವರು ಗಾಢನಿದ್ರೆಯಲ್ಲಿರುವರು.

ತಾಂತಿಯಾ— ಅವರನ್ನು ಕೂಡಲೆ ಎಬ್ಬಿಸಿ ಈ ವಿಶ್ರಾಂತಿ ಮಂದಿರಕ್ಕೆ ಬರಹೇಳು. ತಡಮಾಡಬೇಡ.

ಪ್ರಹರಿಯು ಸಂದೇಹ ಗ್ರಸ್ತನಾಗಿ ಆಗಂತುಕನನ್ನು ಮೇಲೂ ಕೆಳಗೂ ದುರದುರನೆ ನೋಡಿದನು. ಯಜಮಾನನ ಅಪ್ಪಣೆಯಿಲ್ಲದೆಯೇ ವಿಶ್ರಾಂತಿಮಂದಿರಕ್ಕೆ ಆರನ್ನು ಬಿಡುವುದಕ್ಕೂ ಅವನಿಗೆ ಧೈರ್ಯವಿರಲಿಲ್ಲ. ಹಿಂದೆ ಅತಿಥಿಯಾಗಿ ಬಂದ ಕಳ್ಳನೊಬ್ಬನು ಯಜಮಾನನಿಗೆ ಮಾಡಿದ್ದ ಪ್ರತ್ಯುಪಕಾರವನ್ನು ಪ್ರಹರಿಯು ಇನ್ನೂ ಮರೆತಿರಲಿಲ್ಲವಾಗಿ ಅವನಿಗೆ ಏನ ಮಾಡುವುದಕ್ಕೂ ತೋರಲಿಲ್ಲ. ಬಂದವರೆಲ್ಲರೂ ಕಳ್ಳರೆಂದು ಹೇಗೆ ತಾನೇ ಹೇಳುವುದಕ್ಕೆ ಸಾಧ್ಯವಹುದು? ಸಂಶಯ ಪಡುತ್ತಾ ಕುಳಿತಲ್ಲಿ ಅಯೋಗ್ಯರಿಗೆ ಸನ್ಮಾನವೂ, ಯೋಗ್ಯರಿಗೆ ಅಪಮಾನವೂ ನಡೆದು ಹೋಗುವುದು. ಆದರೂ ಪ್ರಹರಿಯು ತನ್ನ ಕರ್ತವ್ಯಾಂಶದಲ್ಲಿ ಏನ ಮಾಡಬೇಕೆಂಬುದನ್ನು ಅರಿಯದವನಾಗಿ ಸುಮ್ಮನೆ ಬೊಂಬೆಯಂತೆ ನಿಂತುಬಿಟ್ಟನು.

ಪ್ರಹರಿಯು ಸುಮ್ಮನಿರುವುದನ್ನು ನೋಡಿ ಭಿಲ್ಲನು ಕೋಪದಿಂದ ಹುಂಕರಿಸುತ್ತಾ— ಎಲಾ! ನೀನು ಸುಮ್ಮನೇ ನಿಂತಿರುವುದರ ಅರ್ಥವಾದರೂ ಏನು? ನಿನಗೆ ಕೊಂಚವಾದರೂ ಬುದ್ಧಿಯಿಲ್ಲವೆಂದು ತೋರುವುದು. ಬೇಗನೆ ಹೋಗಿ ವಿಶ್ರಾಂತಿಮಂದಿರದಲ್ಲಿ ದೀಪವನ್ನು ಕಚ್ಚಿಸಿ ಯಜಮಾನನ್ನು ಅಲ್ಲಿಗೆ ಕರೆದುಕೊಂಡು ಬಾ. ಹೊರಡು, ತಡಮಾಡಬೇಡ, ಕಂಡೆಯಾ? ಎಂದುಸುರಿದನು.

ಪ್ರಹರಿಯು ಆಗಂತುಕನ ಠೀವಿಯನ್ನು ನೋಡಿ 'ಈತನಾರೋ ದೊಡ್ಡ ಮನುಷ್ಯನಿರಬೇಕು, ಈತನ ಮಾತಿಗೆ ನಾನು ಗೌರವ ಕೊಡದಿದ್ದರೆ ನಮ್ಮ ಯಜಮಾನರು ಒಂದು ವೇಳೆ ಕೋಪಮಾಡಿದರೂ ಮಾಡಬಹುದು, ಹೊತ್ತು ಗೊತ್ತಿಲ್ಲದೆ ಆತನ ಕೋಪಕ್ಕೆ ನಾವೇಕೆ ಪಾತ್ರವಾಗಬೇಕು' ಎಂದುಕೊಂಡು ಆಗಂತುಕನನ್ನು ವಿಶ್ರಾಂತಿಮಂದಿರಕ್ಕೆ ಕರೆದುಕೊಂಡು ಹೋಗಿ ಒಂದಾಸನದ ಮೇಲೆ ಕುಳ್ಳಿರಿಸಿ ತಾನು ಯಜಮಾನನನ್ನು ಕರೆದುಕೊಂಡು ಬರುವುದಾಗಿ ಹೇಳಿ ಹೊರಟುಹೋದನು. ಪ್ರಹರಿಯು ಹೊರಟುಹೋದ ಬಳಿಕ ತಾಂತಿಯನು ಚಿಂತಿಸಿದನು :—

"ನಾನು ಇಲ್ಲಿಗೆ ಮೊದಲನೆಯ ಸಲ ಬಂದಾಗ ನನ್ನ ವೇಷವೇನು? ನಾನು ಈಗ ಇಲ್ಲಿಗೆ ಬಂದಿರುವಾಗ ನನ್ನ ವೇಷವಾದರೂ ಏನು? ಎಲ್ಲಾ ಅವಸ್ಥೆಗಳೂ ಕಾಲಕ್ಕೆ ತಕ್ಕ ಹಾಗೆಯೇ ಇರಬೇಕಾಗುವುವು. ನನ್ನನ್ನು ನಾನು ನೋಡಿಕೊಂಡರೆ, ನನಗೇ ಆಶ್ಚರ್ಯವಾಗುತ್ತಿರುವುದು.

ಈ ಸೌಭಾಗ್ಯಮಂದಿರದಲ್ಲಿ ಶ್ರೀಕುಮಾರನಂಥವರು ಇನ್ನೆಷ್ಟು ಜನರಿರುವರೋ ಬಲ್ಲವರಾರು? ಒಬ್ಬ ಶ್ರೀಕುಮಾರನನ್ನು ನಿಮಿತ್ತಮಾಡಿಕೊಂಡು ವೈದ್ಯನು ಅಪರಿಮಿತವಾಗಿ ಹಣವನ್ನು ದೋಚಿಕೊಳ್ಳುತ್ತಿರುವನು,— ಎಂದ ಮೇಲೆ, ಇವನಂತಹ ಒಬ್ಬೊಬ್ಬನಿಂದಲೂ ಎಷ್ಟೆಷ್ಟು ಹಣವನ್ನು ಎರಡು ಕೈಗಳಿಂದಲೂ ಬಾಚಿಕೊಳ್ಳುತ್ತಿರುವನೋ ದೇವರೊಬ್ಬನೇ ಬಲ್ಲನು! ನಾನು ಯುಕ್ತಿಯಿಂದ ಈ ಹಣವನ್ನು ವೈದ್ಯನಿಂದ ಸೆಳೆದುಕೊಳ್ಳಲೇ ಬೇಕು. ಕಲ್ಯಾಣಮಲ್ಲನ ಹಣವು ಈತನ ಕೈಸೇರಿತು; ಈತನ ಹಣವು ನನ್ನ ಕೈ ಸೇರಬೇಕಾದುದೇ ಹಣದ ಮರ್ಯಾದೆ. ಕಲ್ಯಾಣಮಲ್ಲನು ಸತ್ತಮೇಲೆ ನನಗೆ ವೈದ್ಯನಲ್ಲದೆ ಮತ್ತಾರು ದಿಕ್ಕು?"

ತಾಂತಿಯನು ಹೀಗೆ ಚಿಂತಿಸುತ್ತಿರುವಷ್ಟರಲ್ಲಿಯೇ ಪ್ರಹರಿಯು ಹಿಂದಿರುಗಿ ಬಂದು— ಸ್ವಾಮಿಾ! ಒಂದು ವಿಷಯವನ್ನು ಕೇಳುವುದಕ್ಕೆ ಮರೆತಿದ್ದೆನು. ಆರು ಬಂದಿರುವರೆಂದು ನಾನು ಯಜಮಾನನಿಗೆ ತಿಳಿಯ ಹೇಳಲಿ, ಎಂದು ಬೆಸಗೊಂಡನು.

ತಾಂತಿಯಾ— ಆತನ ಬಂಧುವಾದ ಸಂಗ್ರಾಮಸಿಂಹನು ಬಂದಿರುವುದಾಗಿ ತಿಳಿಸು.

ಪ್ರಹರಿ— ಅಪ್ಪಣೆ.

ಪ್ರಹರಿಯು ಹೀಗೆ ಹೇಳಿ ಹೊರಟುಹೋದನು. ತಾಂತಿಯನು ತಾನು ತಂದಿದ್ದ ವೃತ್ತ ಪತ್ರಿಕೆಗಳನ್ನು ಹೊರಗೆ ತೆಗೆದು ಅವನ್ನು ಓದುತ್ತಾ ಕುಳಿತನು.

ಸ್ವಲ್ಪ ಹೊತ್ತಿನೊಳಗಾಗಿ ವೈದ್ಯನು ಅಲ್ಲಿಗೆ ಬಂದು ಸಂಗ್ರಾಮಸಿಂಹನನ್ನು ನೋಡಿದ ಕೂಡಲೆ ಅಪ್ರತಿಭನಾಗಿ— ಇದೇನು, ಮಹಾಶಯ! ಅವೇಳೆಯಲ್ಲಿ ಬಿಜಯಮಾಡಿಸೋಣವಾಯಿತು? ಎಲ್ಲವೂ ಮಂಗಳವಷ್ಟೆ? ಎಂದು ಪ್ರಶ್ನೆಮಾಡಿದನು.

ತಾಂತಿಯನು ವೈದ್ಯನನ್ನು ಹತ್ತಿರದಲ್ಲಿ ಕುಳ್ಳಿರಿಸಿಕೊಂಡು ತಾನು ತಂದಿದ್ದ ಸೂರ್ಯ ಪ್ರಕಾಶವೆಂಬ ಪತ್ರಿಕೆಯನ್ನು ಓದುವುದಕ್ಕೆ ಆತನ ಮುಂದಿರಿಸಿದನು. ವೈದ್ಯನು ಏನೋ ಪಿಡುಗು ಬಂದಿತೆಂದು ಹೆದರಿ ಹೆದರಿ ವೃತ್ತಪತ್ರಿಕೆಯಲ್ಲಿ ಆತನು ತೋರಿದ ಶಿರೋನಾಮವನ್ನು ನೋಡಿದನು; ನೋಡಿದ ಕೂಡಲೆಯೇ ಭಯದಿಂದ ಅಸ್ಫುಟಸ್ವರವನ್ನು ಮಾಡುತ್ತಾ ಮುಂದೆ ಮುಂದೆ ಓದಿದನು. ಕ್ರಮಕ್ರಮವಾಗಿ ಅವನ ಮುಖವು ಒಣಗಿಹೋಯಿತು. ಆದರೂ ಆತನು

ಶ್ರಮದಿಂದ ಎಲ್ಲವನ್ನೂ ಓದಿ ನಿಟ್ಟುಸಿರನ್ನು ಬಿಟ್ಟು— ಮಹಾಶಯ ! ಸರ್ವನಾಶ ವಾಗಿಹೋಯಿತು. ಇದರ ಮರ್ಮವೇ ನನಗೆ ಗೊತ್ತಾಗಲಿಲ್ಲವಲ್ಲ ! ಎಂದು ನುಡಿದನು.

ತಾಂತಿಯಾಭಿಲ್ಲನು ಉತ್ತರವಿತ್ತುದು :—

"ನೀವಿಬ್ಬರೂ ಸೇರಿಕೊಂಡು ನನ್ನನ್ನೇ ಧ್ವಂಸಮಾಡಬೇಕೆಂದು ಎಣಿಸಿರ ಲಿಲ್ಲವೇ ? ನಿಮ್ಮಿಬ್ಬರಲ್ಲಿ ಒಬ್ಬನಾದ ಆ ಪಿಶಾಚವು ತನ್ನ ಕೈಯಿಂದಲೇ ಮರಣವನ್ನು ಹೊಂದಿತು. ನನಗೆ ತೊಂದರೆಕೊಟ್ಟವರ ಗತಿಯೆಲ್ಲವೂ ಹೀಗೆಯೇ ಸರಿ. ಇದರ ಮರ್ಮವು ನಿಮಗೆ ಗೊತ್ತಾಗಲಿಲ್ಲವೇನು ? ನಿಮ್ಮ ಕೈಮುರಿದುದೇ ಇದರ ಮರ್ಮವು. ಇದರಲ್ಲಿ ಮತ್ತೇನಿರುವುದು ?

ಈ ಮಾತನ್ನು ಕೇಳಿದ ವೈದ್ಯನ ಮೈ ಬೆವರಿತು. ಕ್ರಮಕ್ರಮವಾಗಿ ವಿವರ್ಣವಾಗುತಲಿದ್ದ ಅವನ ಮುಖದಲ್ಲಿ ಕೋಪವು ಪದಾರ್ಪಣಮಾಡಿತು. ಆತನು ಕೋಪದಿಂದ ಉತ್ತೇಜಿತನಾಗಿ—ನನ್ನನ್ನು ಹೀಯಾಳಿಸುವುದಕ್ಕೆ ನಿಮಗೆ ಇದೇ ಸರಿಯಾದ ಸಮಯವಲ್ಲವೇ ? ಆತನ ಹಣೆಯಲ್ಲಿ ಹೇಗೆ ಬರೆದಿದ್ದಿತೋ ಹಾಗೆ ಆಯಿತು. ಈಗ ಅದರಿಂದ ನಮಗಾಗುವುದೇನು ? ನಾವು ಮುಂದೆ ಬದುಕಿಕೊಳ್ಳುವ ಮಾರ್ಗವನ್ನು ನೋಡಿಕೊಳ್ಳಬೇಕು. ಹೀಗಿರುವಲ್ಲಿ ನೀವೇ ನನ್ನನ್ನು ಹೆದರಿಸುತ್ತಾ ಕುಳಿತಿರುವಿರಲ್ಲಾ ? ಇದರಲ್ಲಿ ನಿಮಗೆ ಭಯವಿಲ್ಲವೆಂದು ತಿಳಿದಿರಾ, ಹೇಗೆ ? ಅರಿಂದಮನ ಅನುಸಂಧಾನದಲ್ಲಿ ನಾವೂ ನೀವೂ ಎಲ್ಲರೂ—

ತಾಂತಿಯನು ಅಡ್ಡಗಿಸಿ—ಆತನು ನಮ್ಮ ಅನುಸಂಧಾನದಲ್ಲಿ ಇನ್ನೂ ತೊಡಗಿಲ್ಲ. ಕಲ್ಯಾಣಮಲ್ಲನ ಅಕಾಲಮರಣದಿಂದ—

ಮಾತು ಮುಗಿಯುವುದರೊಳಗಾಗಿ ವೈದ್ಯನು ತುಟಿಯನ್ನು ಕಚ್ಚುತ್ತಾ ಮೇಜನ್ನು ಗುದ್ದಿ—ಅಯ್ಯಾ ! ನೀವು ಆ ವಿಷಯವನ್ನು ಮಾತನಾಡದಿರಿ. ನಾನು ನಿಮಗೊಂದು ಕಾಗದವನ್ನು ಬರೆದಿದ್ದೆನು. ಅದು ನಿಮ್ಮ ಕೈ ಸೇರಲಿಲ್ಲ ವೇ ? ಅರಿಂದಮನು ನಮ್ಮ ವಿಷಯದಲ್ಲಿ ಗಮನಕೊಡದೇ ಹೋಗಿದ್ದಿದ್ದರೆ, ಆತನ ಸಹಚರನನ್ನು ಇಲ್ಲಿಗೆ ಏಕೆ ಕಳುಹುತ್ತಿದ್ದನು ? ಎಂದನು.

ತಾಂತಿಯಾ—(ವಿಸ್ಮಯದಿಂದ) ಕಾಗದವಾವುದು ಮಹಾಶಯ ! ನನಗಾ ದರೋ ಆವ ಕಾಗದವೂ ಬರಲಿಲ್ಲವಲ್ಲ ! ಹಾಗಾದರೆ ಅರಿಂದಮನ ಸಹಚರನು ಪತ್ತೆಗಾಗಿ ಇಲ್ಲಿಗೆ ಬಂದಿರುವನೇ ? ಇದೇನನ್ಯಾಯ ! ಇದೇನು ಸರ್ವನಾಶ !

ವೈದ್ಯ—ಆತನ ಸಹಚರನು ಬಂದಿರುವುದಾದರೂ ಇನ್ನೂ ಸರ್ವನಾಶವೇನೂ ಆಗಿಲ್ಲ. ತಪ್ಪಿಸಿಕೊಂಡು ಹೋಗದ ಹಾಗೆ, ನಾನು ಆತನನ್ನು ಸರಿಯಾದ ಸ್ಥಳದಲ್ಲಿ ಅವಿತಿಟ್ಟಿರುವೆನು, ಎಂದು ದೇವೇಂದ್ರನ ವಿಷಯದಲ್ಲಿ ತಾನು ಮಾಡಿರುವುದೆಲ್ಲವನ್ನೂ ಆದ್ಯೋಪಾಂತವಾಗಿ ತಿಳಿಸಿದನು.

ತಾಂತಿಯಾ—(ಬಲು ಹೊತ್ತು ಚಿಂತಿಸಿದವನಾಗಿ) ಕಲ್ಯಾಣಮಲ್ಲನು ಈಶ್ವರೀ ದುರ್ಗಕ್ಕೆ ಸರಿಯಾದ ಉತ್ತರಾಧಿಕಾರಿಯಲ್ಲವೆಂಬುದನ್ನು ಅರಿಂದಮನು ಇನ್ನೂ ಅರಿತವನಾಗಿಲ್ಲ. ಅವನಿಗೆ ಗೊತ್ತಾಗಲು ಕಾರಣವೂ ಇಲ್ಲ. ಹೀಗಿರುವಲ್ಲಿ ಆತನು ಅವನ ಸಹಚರನನ್ನು ಇಲ್ಲಿಗೆ ಕಳುಹಲು ಕಾರಣವೇನಿರಬಹುದು? ಇದರಲ್ಲಿ ನನಗೆ ತೋರುವುದೇನೆಂದರೆ-ನೀವು ಈಶ್ವರೀದುರ್ಗಕ್ಕೆ ಬಂದಿದ್ದರಲ್ಲವೇ? ಆಗ ನಿಮ್ಮ ಗುರುತು ಆತನಿಗಾಗದಿರಲು, ನೀವಾರೆಂಬುದನ್ನು ಅರಿವುದಕ್ಕಾಗಿ ಆತನು ದೇವೇಂದ್ರನನ್ನು ತಮ್ಮ ಹಿಂದೆ ಕಳುಹಿರಬೇಕು. ನೀವು ದೇವೇಂದ್ರನನ್ನು ಬಂದಿಯನ್ನಾಗಿ ಮಾಡಿದ ಮೇಲೆ, ತಮ್ಮ ವಿಷಯವು ಅರಿಂದಮನಿಗೆ ಹೇಗೆ ತಾನೇ ಗೊತ್ತಾದೀತು? ದೇವ! ನಾವು ಬದುಕಿಕೊಂಡೆವು.

ವೈದ್ಯ—ನೀವು ಹೇಳುವುದು ಅನುಮಾನವೇ ಹೊರತು ನಿಜವಲ್ಲ. ಅರಿಂದಮನಿಗೆ ಏನಭಿಪ್ರಾಯವಿರುವುದೋ ಬಲ್ಲವರಾರು? ಅದು ದೇವೇಂದ್ರನಿಗಾದರೂ ಗೊತ್ತಿದೆಯೋ ಇಲ್ಲವೋ ತಿಳಿಯದು. ನಾನೂ ಎಷ್ಟೋ ಪ್ರಯತ್ನ ಮಾಡಿನೋಡಿದೆನು. ದೇವೇಂದ್ರನ ಬಾಯಿಂದ ಒಂದು ಮಾತೂ ಹೊರಬೀಳಲಿಲ್ಲ. ಆತನನ್ನು ನಿರ್ಬಂಧಪಡಿಸಿರುವುದರಿಂದ, ನನ್ನ ಮನದಲ್ಲಿ ಶಾಂತಿಯೇ ಇಲ್ಲ. ನಾವು ಇನ್ನು ಇಲ್ಲಿರುವುದು ಸರಿಯಲ್ಲವೆಂದು ತೋರುವುದು. ಆದರೆ ಇವೆಲ್ಲವನ್ನೂ ಬಿಟ್ಟು ಹೋಗುವುದೆಲ್ಲಿಗೆ? ಅಲ್ಲದೆಯೂ ಕಷ್ಟಪಟ್ಟು ಇಷ್ಟೆಲ್ಲವನ್ನೂ ಸಂಪಾದಿಸಿ ಬಿಟ್ಟು ಹೋಗುವುದಕ್ಕೆ ಮನವೂ ಬಾರದು. ನನಗಾದರೋ ಸ್ವಪ್ನಗಳಲ್ಲಿ ಕಾರಾಗೃಹದ ದೃಶ್ಯಗಳೇ ಕಾಣಬರುತ್ತಿರುವುವು. ನನಗೆ ಏನ ಮಾಡುವುದಕ್ಕೂ ದಿಕ್ಕೇ ತೋರದ ಹಾಗಿರುವುದು.

ತಾಂತಿಯಾ—ಮಹಾಶಯ! ಸಿಕ್ಕಿ ಬೀಳುವೆನೆಂಬ ಭಯವಿರುವುದಾದರೆ, ಸಾಧ್ಯವಾದಷ್ಟು ಬೇಗನೆ ತಪ್ಪಿಸಿಕೊಳ್ಳುವುದೇ ಒಳ್ಳೆಯದು.

ನಾನು ಬೇರೊಂದು ಕೆಲಸವನ್ನು ನಿಮಿತ್ತಮಾಡಿಕೊಂಡು ನಿಮ್ಮನ್ನು ನೋಡುವುದಕ್ಕಾಗಿಯೇ ಇಲ್ಲಿಗೆ ಬಂದೆನು. ನಿಮಗೆ ಈ ವ್ಯಾಪಾರದಲ್ಲಿ ತುಂಬಾ ಲಾಭವಿದೆಯೆಂದು ಕೇಳಿ ನನಗೆ ಸಂತೋಷವಾಯಿತು. ನಮಗೆ ಬೇಕಾದವರು ಬೇಕಾದ ಹಾಗೆ ಹಣವನ್ನು ಸಂಪಾದಿಸಿ ಬದುಕಲಿ. ಒಬ್ಬ ಬದುಕಿದರೆ

ಎಲ್ಲರಿಗೂ ಪ್ರಯೋಜನವುಂಟು. ಆದರೆ ಎಲ್ಲರ ಕಣ್ಣಿಗೂ ಮಣ್ಣೆರಚಿ ನೀವು ಹಣವನ್ನು ಸಂಪಾದಿಸುತ್ತಿರುವುದು ನೋಡಿದರೆ ಆರಿಗೆ ತಾನೇ ಹೊಟ್ಟೆಯುರಿಯ ಲಾರದು.

'ತಾಂತಿಯನು ಈ ಮಾತನ್ನಾಡಲು ಕಾರಣವೇನಿರಬಹುದು?' ಎಂದು ಚಿಂತಿಸುತ್ತಾ ವೈದ್ಯನು ತಾಂತಿಯನನ್ನು ದುರದುರನೆ ನೋಡುತ್ತಾ ನಿಂತು ಬಿಟ್ಟನು.

ತಾಂತಿಯನು ವೈದ್ಯನ ಗುಡ್ಡುಬೆದರಿಕೆಗೆ ಕೊಂಚವೂ ಹೆದರದವನಾಗಿ— ಮಹಾಶಯ! ನನ್ನನ್ನು ನೀವು ನುಂಗಿಬಿಡುವಂತೆ ಕಾಣುವುದು. ನೀವು ರೇಗುವುದರಿಂದ ನನಗಾಗುವುದೇನು? ನೀವು ಇಲ್ಲಿಯಾದರೂ ಇರಿ, ಎಲ್ಲಿಗಾದರೂ ಹೋಗಿ. ಇದರಿಂದ ನನಗಾವ ಬಗೆಯ ತೊಂದರೆಯೂ ಇಲ್ಲ. ನೀವು ಮೊದಲು ನನ್ನ ಯೋಗಕ್ಷೇಮವನ್ನು ವಿಚಾರಿಸದೆಯೇ ಕೆಲಸಮಾಡುವುದಾದರೆ, ನಿಮಗೆ ಮಂಗಳವಾಗಲಿಕ್ಕಿಲ್ಲ. ನನ್ನನ್ನು ನೀವು ಕೈ ಬಿಟ್ಟ ಮೇಲೆ ನಿಮ್ಮ ಹಿತಾಹಿತ ಚಿಂತನೆಯಿಂದ ನನಗಾಗಬೇಕಾದುದೇನೂ ಇರಲಾರದು, ಎಂದು ಉಸುರಿದನು.

ವೈದ್ಯ—(ರೋಷಾವೇಶಪರವಶನಾಗಿ) ನಿಮ್ಮ ಅಭಿಪ್ರಾಯವೇ ನನಗೆ ಗೊತ್ತಾಗಲೊಲ್ಲದು.

ತಾಂತಿಯಾ—(ಸಹಜಭಾವದಿಂದ) ನನ್ನ ಅಭಿಪ್ರಾಯವಾದರೋ ಸಹಜವೇ ಆಗಿರುವುದು. ಇದು ನಿಮಗೆ ಗೊತ್ತಾಗದಿರುವುದು ಆಶ್ಚರ್ಯವು. ಸ್ವಪ್ರಯೋಜನವಿದ್ದಲ್ಲಿ ನಿಮಗೆ ಆಗಲೇ ಅರ್ಥವಾಗುತ್ತಿತ್ತು. ಪರಪ್ರಯೋ ಜನದ ವಿಚಾರವು ನಿಮಗೆ ಹೇಗೆ ತಾನೇ ಅರ್ಥವಾದೀತು? ಆದರೂ ಮಿತವಾಗಿ ನನ್ನ ಅಭಿಪ್ರಾಯವನ್ನು ತಿಳಿಯಪಡಿಸುವೆನು.

ನಾನು ಈ ರಾತ್ರಿಯಲ್ಲಿ ವಿಶ್ರಾಂತಿಸುಖವನ್ನು ನಿಮ್ಮಲ್ಲಿಯೇ ಅನುಭವಿಸ ಬೇಕೆಂದು ಬಯಸಿ ಬಂದಿರುವೆನು. ನಾನು ಈ ಮಾತನ್ನು ಹೇಳುವುದರಿಂದ ನೀವು ಹೆದರಬೇಕಾದುದೇನೂ ಇರುವುದಿಲ್ಲ. ನೀವು ದೇವೇಂದ್ರನನ್ನು ಎಲ್ಲಿ ಅವಿತಿಟ್ಟಿರುವಿರೋ ಅದನ್ನು ಅರಿಂದಮನು ಅರಿಯಲಾರನು. ಇದು ಮೊದಲೇ ಅವನಿಗೆ ಗೊತ್ತಿದ್ದಿದ್ದರೆ, ಆತನು ಇಷ್ಟು ತಡಮಾಡಬೇಕಾಗಿರಲಿಲ್ಲ. ನಿಜವಾ ಗಿಯೂ ಅರಿಂದಮನಿಗೆ ಇದಾವುದೂ ಗೊತ್ತಿಲ್ಲ. ಅದುಕಾರಣ ನಾನು ನಿರ್ಭಯ ವಾಗಿ ಈ ರಾತ್ರಿಯನ್ನು ನಿಮ್ಮಲ್ಲಿಯೇ ಕಳೆಯಬೇಕೆಂದಿರುವೆನು. ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದ ಗಾಡಿಯವನು ಇನ್ನೂ ಇಲ್ಲಿಯೇ ಇರುವನು. ನಾನು ಅವನನ್ನು ಹಿಂದಕ್ಕೆ ಕಳುಹಿಸಿ ಬಿಡುವೆನು.

ತಾಂತಿಯಾ ಭಿಲ್ಲನು ಹೀಗೆ ಮಾತನಾಡಿದ ಬಳಿಕ ಹೊರಗೆ ಬಂದು ಬಂಡಿಯವನಿಗೆ ಹೇಳಬೇಕಾದುದನ್ನು ಹೇಳಿ ಮತ್ತೆ ಕೋಣೆಯೊಳಗೆ ಬಂದು ವೈದ್ಯನನ್ನು ಕುರಿತು— ವೈದ್ಯಮಹಾಶಯ! ಇಂದಿನ ನಿಮ್ಮ ಅತಿಥಿಸತ್ಕಾರವು ಆವ ರೀತಿಯಲ್ಲಿರುವುದೋ ನೋಡುವೆನು. ಹಿಂದೊಂದು ದಿನ ಮುದುಕನ ವೇಷದಲ್ಲಿ ಬಂದಿದ್ದ ನನ್ನನ್ನು ಅತಿಶಯವಾಗಿ ಸತ್ಕರಿಸೋಣವಾಯಿತು. ಅದನ್ನು ತಾವು ಮರೆತರೂ ನಾನು ಮರೆಯುವ ಹಾಗಿಲ್ಲ, ಎಂದು ನುಡಿದನು.

ವೈದ್ಯ—(ಹುಸಿ ನಗೆ ನಕ್ಕು) ಆಗ ನಾನು ಮಾಡಿದ ತಪ್ಪನ್ನು ಎಂದಿಗೂ ಮರೆಯುವ ಹಾಗಿಲ್ಲ.

ತಾಂತಿಯಾ—(ಅಟ್ಟಹಾಸದಿಂದ) ಅದರಿಂದ ನನಗೇನೂ ನಷ್ಟವಿಲ್ಲ. ಆ ದಿನ ತಾವು ನನಗೆ ಎಂತಹ ಅಮೂಲ್ಯವಾದ ಪಾನವನ್ನು ಕುಡಿಯುವುದಕ್ಕೆ ಕೊಟ್ಟದ್ದಿರೋ ಅದರ ರುಚಿಯನ್ನು ನಾನು ಇನ್ನೂ ಮರೆತಿಲ್ಲ, ಈಗಲೂ ಆ ಪಾನವನ್ನು ದಯೆಪಾಲಿಸೋಣವಾಗಲಿ, ಮಹಾಶಯ! ಸ್ನೇಹವು ಬಲಿತ ಮೇಲೆ ಉಪಚಾರದ ಮಾತುಗಳಿಂದಾಗುವುದೇನು?

ವೈದ್ಯನು ಕೂಡಲೇ ತಾಂತಿಯನಿಗೆ ಪಾನವನ್ನು ತಂದೊಪ್ಪಿಸಿ—ಮಹಾಶಯ! ತಮ್ಮ ಅಭಿಪ್ರಾಯವು ನನಗೆ ಗೋಚರಿಸಲೊಲ್ಲದು. ತಾವು ಈ ರಾತ್ರಿ ಇಲ್ಲಿಯೇ ಇರುವುದಾಗಿ ಹೇಳಿದ ಮಾತನ್ನು ಕೇಳಿ ನನ್ನ ಮನದಲ್ಲಿ ತೆರ ತೆರನಾದ ದುಶ್ಚಿಂತೆಗಳು ಕಾಣಿಸಿಕೊಳ್ಳುತ್ತಿರುವುವು, ಎಂದು ಕಂಪಿತ ಸ್ವರದಿಂದ ಮಾತನಾಡಿದನು.

ತಾಂತಿಯಾ—ತಮ್ಮ ದುಶ್ಚಿಂತೆಗಳಿಗೆ ಕಾರಣವೇನಿರುವುದು? ಬೆಳಗಾದ ಕೂಡಲೆ ನಿಮ್ಮ ಆಯವ್ಯಯದ ಲೆಕ್ಕಗಳನ್ನು ಪರೀಕ್ಷಿಸಿ ನೋಡುವೆನು. ಈಗ ರಾತ್ರಿಯಲ್ಲಿ ಬಲು ಹೊತ್ತಾಗಿರುವುದರಿಂದ, ನನಗೆ ನಿದ್ದೆಯು ಆವರಿಸಿಕೊಂಡು ಬರುತ್ತಿರುವುದು. ನಾನು ಮಲಗುವಾಗ ನನ್ನ ಪಿಸ್ತೂಲನ್ನು ತಲೆದಿಂಬಿನ ಕೆಳಗಿಟ್ಟು ಮಲಗುವ ಪದ್ಧತಿಯು ಪ್ರಕಾರ, ಇಲ್ಲಿಯೂ ಹಾಗೆ ಮಾಡಬೇಕಾಗಿರುವುದು. ತಾವು ನನಗೆ ಪರಮ ಬಂಧುವಾದುದರಿಂದ, ಈ ವಿಷಯವನ್ನು ತಮ್ಮಲ್ಲಿ ಮೊದಲೇ ಅರಿಕೆಮಾಡಿಕೊಂಡಿರುವೆನು.

ವೈದ್ಯ—ಮಹಾಶಯ! ತಮ್ಮ ಅಭಿಪ್ರಾಯವು ನನಗೆ ಚೆನ್ನಾಗಿಯೂ ಗೊತ್ತಾಯಿತು. ತಾವು ರಾತ್ರಿಯಲ್ಲಿ ನಿಶ್ಚಿಂತರಾಗಿ ನಿದ್ರಿಸಬಹುದು. ತಮ್ಮ ನಿದ್ರಾಭಂಗಕ್ಕೆ ಇಲ್ಲಿ ಆವ ಕಾರಣವೂ ಇರಲಾರದು. ಆದರೆ ಮೊದಲಿನಂತೆ ನನ್ನ ಪೆಟ್ಟಿಗೆಯನ್ನು ತೆಗೆಯುವುದಾಗಲಿ, ನನ್ನ ತಲೆಯನ್ನು ಒಡೆಯುವುದಾಗಲಿ ಮಾಡಬೇಡಿರಿ, ಕಂಡಿರಾ?

ತಾಂತಿಯಾ—(ನಕ್ಕು) ಈಗ ಅಂತಹ ಆವಶ್ಯಕತೆಯೇನೂ ಇರುವುದಿಲ್ಲ. ಈಗ ನಮ್ಮಿಬ್ಬರ ಭಾಗ್ಯವೂ ಒಂದೇ ದಾರದಿಂದ ಪೋಣಿಸಲ್ಪಟ್ಟಿರುವುದು. ಇದನ್ನು ನಾವಿಬ್ಬರೂ ಅರಿತುಕೊಂಡರೆ ಸಾಕು. ಭೋಜನವನ್ನು ಸಿದ್ಧಪಡಿಸುವುದಕ್ಕಾಗಿ ತಾವು ತೆರಳೋಣವಾಗಲಿ.

ತಾಂತಿಯಾಭಿಲ್ಲನು ಹೀಗೆ ಹೇಳಿ ವೈದ್ಯವಾಗೀಶನನ್ನು ಬೇರೊಂದು ಕೆಲಸದ ಮೇಲೆ ಕಳುಹಿಸಿ ಮನದಣಿಯೆ ಮದ್ಯವನ್ನು ಪಾನಮಾಡುತ್ತಾ ಚಿಂತಿಸಿದನು :— "ವಾಗೀಶ ! ನಿನ್ನನ್ನು ಸುಲಿಯುವುದಕ್ಕಾಗಿಯೇ ನಾನು ಬಂದಿರುವುದು. ನಾನು ನಿನ್ನನ್ನು ಸುಲಭವಾಗಿ ಬಿಟ್ಟು ಹೋಗತಕ್ಕವನಲ್ಲ. ಜಿಗಣೆಯಂತೆ ನಿನ್ನ ರಕ್ತವನ್ನು ಹೀರದೆಯೇ ನಾನು ಇಲ್ಲಿಂದ ಕಾಲ್ತೆತ್ತುವುದಿಲ್ಲ. ನೀನು ಹಣವನ್ನು ನನಗೆ ಸಲ್ಲಿಸಲೇ ಬೇಕಾಗಿರುವುದರಿಂದ, ಒಳ್ಳೆಯ ನಡತೆಯಿಂದ ಹಣವನ್ನು ಸಲ್ಲಿಸುವುದಾದರೆ ನಿನಗೇ ಒಳ್ಳೆಯದು. ಕಲ್ಯಾಣಮಲ್ಲನು ಸತ್ತು ಹೋದನು,— ಎಂದ ಮೇಲೆ, ನನಗೆ ನೀನಲ್ಲದೆ ಮತ್ತಾರು ಗತಿ?

---

## ನಾಲ್ಕನೆಯ ವಿಲಾಸ

### ಗುಟ್ಟು ರಟ್ಟಾದುದು

ರಾತ್ರಿ ಕಳೆದು ಬೆಳಗಾಯಿತು. ತಾಂತಿಯಾ ಭಿಲ್ಲನು ಬೆಳಗಿನ ಅಲ್ಪಾಹಾರವನ್ನು ತೆಗೆದುಕೊಂಡು ವೈದ್ಯವಾಗೀಶನ ಆಯವ್ಯಯದ ಲೆಕ್ಕಗಳನ್ನು ಪರೀಕ್ಷೆ ಮಾಡುವುದಕ್ಕೆ ಕುಳಿತನು. ವೈದ್ಯನು ತನ್ನ ಗುಟ್ಟನ್ನು ಬಹಿರಂಗ ಪಡಿಸುವುದಕ್ಕೆ ಇಷ್ಟವಿಲ್ಲದವನಾದರೂ, ತಾಂತಿಯನ ಬಲಾತ್ಕಾರದಿಂದ ತನ್ನ ಲೆಕ್ಕಗಳೆಲ್ಲವನ್ನೂ ಆತನ ಮುಂದಿಡಬೇಕಾಯಿತು. ವೈದ್ಯನು ಕಾಯನ್ನೂ ಕುಡುಗೋಲನ್ನೂ ತಾಂತಿಯನ ಕೈಯಲ್ಲೊಪ್ಪಿಸಿ ಮಣ್ಣುಮುಕ್ಕಿದವನಂತೆ ಬೆಪ್ಪಾಗಿ ಒಂದೆಡೆಯಲ್ಲಿ ನಿಂತುಕೊಂಡಿದ್ದನು. ತಾಂತಿಯನು ಲೆಕ್ಕಗಳೆಲ್ಲವನ್ನೂ ಒಂದೊಂದಾಗಿ ಪರಿಶೀಲಿಸಿ ನೋಡಿದ ಬಳಿಕ ಒಂದು ಕಾಗದದಲ್ಲಿ ವೈದ್ಯನ ಆದಾಯವನ್ನೂ, ಆದಾಯದ ಬೇರೆಬೇರೆಯ ದಾರಿಗಳನ್ನೂ, ವ್ಯಯವನ್ನೂ, ಉಳಿದುದನ್ನು ಆವಾವ ಬ್ಯಾಂಕಿನಲ್ಲಿ ಎಷ್ಟೆಷ್ಟು ಸಂಗ್ರಹಿಸಿಟ್ಟಿರುವನೆಂಬುದನ್ನೂ ಗುರುತುಮಾಡಿಕೊಂಡು ಅದನ್ನು ತನ್ನ ಕಿಸೆಯಲ್ಲಿ ಅಡಗಿಸಿಟ್ಟುಕೊಂಡನು.

ವೈದ್ಯನು ತಾಂತಿಯಾಭಿಲ್ಲನ ಈ ಅತ್ಯಾಚಾರವನ್ನು ನೋಡಿ ಸಹಿಸಲಾರದೆ ಅಂತಸ್ತಾಪದಿಂದ ಸಿಡಿಮಿಡಿಗುಟ್ಟುತ್ತಾ ಯತ್ನವಿಲ್ಲದೆ ಸುಮ್ಮನೆಯೇ ಕುಳಿತು

ಕೊಂಡಿದ್ದನು. ತಾಂತಿಯನು ತನ್ನ ಕೆಲಸವನ್ನು ಮುಗಿಸಿಕೊಂಡು ವೈದ್ಯನ ಕಡೆಗೆ ತಿರುಗಿ—ಮಹಾಶಯ ! ನಿಮ್ಮ ಆಯವ್ಯಯವನ್ನೂ ಬ್ಯಾಂಕುಗಳಲ್ಲಿ ನಿಮ್ಮ ಹೆಸರಿನಲ್ಲಿ ಸಂಗ್ರಹಿಸಲ್ಪಟ್ಟಿರುವ ಹಣದ ಮೊತ್ತವನ್ನೂ ನೋಡಿ ನನಗೆ ತುಂಬಾ ಸಂತೋಷವಾಯಿತು. ತಮಗೆ ಅರಿಂದಮನ ಭಯವೇನಾದರೂ ಇರುವ ಪಕ್ಷದಲ್ಲಿ ಕೆಲವು ಕಾಲದ ಮಟ್ಟಿಗಾದರೂ ದೂರದೇಶಕ್ಕೆ ಹೋಗಿ ತಲೆಯನ್ನು ತಪ್ಪಿಸಿ ಕೊಳ್ಳಿರಿ, ಆಗ ನಾನು ಇಲ್ಲಿ ತಮಗೆ ಪ್ರತಿನಿಧಿಯಾಗಿ ನಿಂತು ಸೌಭಾಗ್ಯಮಂದಿರ ವ್ಯವಹಾರವನ್ನು ಶ್ಲಾಘ್ಯವಾದ ರೀತಿಯಲ್ಲಿಯೇ ನಡೆಯಿಸಿಕೊಂಡು ಬರುವೆನು. ಇದಕ್ಕಾಗಿ ತಾವು ಚಿಂತಿಸಬೇಕಾದುದೇನೂ ಇರುವುದಿಲ್ಲ. ತಾವು ಅಪರಿಮಿತವಾಗಿ ಹಣವನ್ನು ಸಂಪಾದಿಸಿಟ್ಟುಕೊಂಡಿರೋಣವಾಗಿದೆ. ಅದಕ್ಕೆ ಸರಿಯಾದ ವೆಚ್ಚವೇ ಕಂಡು ಬರುತ್ತಿಲ್ಲ, ಎಂದು ನುಡಿದನು.

ಅಷ್ಟು ಹೊತ್ತಿಗೆ ಸರಿಯಾಗಿ ಪ್ರಹರಿಯೊಬ್ಬನು ಬಂದು—ಸ್ವಾಮಿಾ ! ರಾಜನಗರದ ವೈದ್ಯಾಧಿಕರಣದ ಪ್ರಧಾನಾಧಿಕಾರಿಯು ಬಂದು ತಮ್ಮನ್ನು ನೋಡಬೇಕೆಂದು ಬಾಗಿಲಲ್ಲಿ ನಿಂತಿರುವರು, ಎಂದನು.

ವೈದ್ಯನು ಈ ಮಾತನ್ನು ಕೇಳಿದ ಕೂಡಲೆ ಚಕಿತನಾಗಿ ಎದ್ದು ನಿಂತನು ; ತಾಂತಿಯನು ಕುಡಿನೋಟದಿಂದ ವೈದ್ಯನನ್ನು ನೋಡುತ್ತಾ ಕುಳಿತನು.

ವೈದ್ಯ—(ಆಶ್ಚರ್ಯದಿಂದ) ಇದೇನು ! ಸೌಭಾಗ್ಯಮಂದಿರದ ಪರೀಕ್ಷಣ ವಾಗಿ ಇನ್ನೂ ಒಂದು ವಾರವಾಗುವುದಕ್ಕಿಲ್ಲ, ಇಷ್ಟರೊಳಗಾಗಿಯೇ ಮುಖ್ಯಾಧಿ ಕಾರಿಗಳು ಇಲ್ಲಿಗೆ ಬರಲು ಕಾರಣವೇನಿರಬಹುದು ?

ಪ್ರಹರಿ—ಈಗ ಇಬ್ಬರು ಬಂದಿರುವರು. ಮುಖ್ಯಾಧಿಕಾರಿಗಳಾದ ನಾಗೇಂದ್ರಭೂಷಣ ಮಹಾಶಯರು ಅಶ್ವಿನೀಕುಮಾರರೆಂಬ ವೃದ್ಧ ವೈದ್ಯರೊಬ್ಬ ರನ್ನು ಜತೆಯಲ್ಲಿ ಕರೆದುಕೊಂಡು ಬಂದಿರುವರು. ಅವರನ್ನು ವಿಶ್ರಾಂತಿಮಂದಿರ ದಲ್ಲಿ ಕುಳ್ಳಿರಿಸಿ ಬಂದಿರುವೆನು.

ವೈದ್ಯ—ಒಳ್ಳೆಯ ಕೆಲಸ ಮಾಡಿದೆ. ಅವರಿಗೆ ನೆಲಮಾಳಿಗೆಯ ಸುದ್ದಿ ಯನ್ನೇ ತಿಳಿಸಬೇಡ. ಉಳಿದವುಗಳೆಲ್ಲವೂ ತೃಪ್ತಿಕರವಾಗಿರುವುದಷ್ಟೇ ?

ಪ್ರಹರಿ—ಎಲ್ಲವೂ ಸರಿಯಾಗಿಯೇ ಇರುವುದು. ಆ ದೊಡ್ಡ ಮನುಷ್ಯರು ತಮ್ಮನ್ನೇ ಇದಿರುನೋಡುತ್ತಿರುವರು.

ಪ್ರಹರಿಯು ಹೊರಟುಹೋದ ಕೂಡಲೆ, ವೈದ್ಯನು ತಾಂತಿಯನನ್ನು ಕುರಿತು—ಮಹಾಶಯ ! ನೀವೂ ಮರೆಯಾಗಿರುವುದು ಒಳ್ಳೆಯದು. ಅವರು

ಆವ ಉದ್ದೇಶದಿಂದ ಇಲ್ಲಿಗೆ ಬಂದಿರುವರೋ ಗೊತ್ತಿಲ್ಲ. ನನಗೇನೋ ಇದರಿಂದ ಅಮಂಗಳವೇ ತೋರಿಬರುತ್ತಿರುವುದು, ಎಂದು ಭಯಕಂಪಿತಸ್ವರದಿಂದ ಮಾತ ನಾಡಿದನು.

ತಾಂತಿಯಾ—ತಮಗೆ ಭಯಕ್ಕೆ ಕಾರಣವೇನಿರುವುದು? ನಿಮ್ಮ ವ್ಯವ ಹಾರದಲ್ಲಿ ದೋಷವನ್ನು ಕಂಡು ಹಿಡಿಯುವುದಕ್ಕಾಗಿ ಅವರು ಬಂದಿರುವರೇನು? ಅವರಿಗೆ ಈ ಉದ್ದೇಶವಿಲ್ಲವೆಂದು ತೋರುವುದು. ಶ್ರೀಕುಮಾರನನ್ನು ಅವರ ಕಣ್ಣಿಗೆ ಬೀಳದಂತೆ ನೋಡಿಕೊಂಡರಾಯಿತು. ಮಹಾಶಯ! ಆತನನ್ನು ಎಲ್ಲಿ ನಿರ್ಬಂಧಿಸಿರುವಿರಿ?

ವೈದ್ಯ—ನೆಲಮಾಳಿಗೆಯಲ್ಲಿ. ಅಧಿಕಾರಿಗಳು ಅವನನ್ನು ನೋಡುವುದಾ ದರೂ ಚಿಂತೆಯಿಲ್ಲ. ನಾನು ಆತನಿಗೆ ಈ ದಿನವೇ ಹುಚ್ಚಿನ ಮದ್ದನ್ನು ಪ್ರಯೋಗ ಮಾಡಿರುವೆನು. ಹುಚ್ಚು ಹಿಡಿಸುವ ಮದ್ದಿನ ಶಕ್ತಿಯನ್ನು ನೋಡಬೇಕೆಂದು ನಿಮಗೆ ಆಸೆಯಿರುವುದಾದರೆ, ನನ್ನೊಡನೆ ಬರೋಣವಾಗಲಿ, ತೋರಿಸುವೆನು.

ವೈದ್ಯನು ಹೀಗೆ ಹೇಳಿ ತಾಂತಿಯನನ್ನು ಜತೆಯಲ್ಲಿ ಕರೆದುಕೊಂಡು ನೆಲ ಮಾಳಿಗೆಯ ಹತ್ತಿರಕ್ಕೆ ಬಂದು ತಾಂತಿಯನನ್ನು ಕುರಿತು— ಮಹಾಶಯ! ಈ ನೆಲಮಾಳಿಗೆಯಲ್ಲಿರತಕ್ಕ ಮೆಟ್ಟಲುಗಳನ್ನಿಳಿದು ಕೊಂಚ ಬಲಕ್ಕೆ ತಿರುಗಲು ಕೋಣೆಯೊಂದು ಸಿಕ್ಕುವುದು. ಅದರಲ್ಲಿ ಶ್ರೀಕುಮಾರನನ್ನು ನಿರ್ಬಂಧಿಸಿರು ವೆನು. ತಾವು ಅಲ್ಲಿಗೆ ಹೋಗಿ ನೋಡಬಹುದು; ಆದರೆ ಹುಚ್ಚರ ಹತ್ತಿರಕ್ಕೆ ಹೋಗುವುದು ಅಪಾಯಕರವಾದುದು, ಎಂದನು.

ತಾಂತಿಯನು ಅದರಂತೆಯೇ ಹೋಗಿ ನೋಡಲಾಗಿ, ಕೋಣೆಯ ಒಂದೆಡೆ ಯಲ್ಲಿ ಒಬ್ಬಾತನು ತಲೆಯ ಮೇಲೆ ಕೈಗಳನ್ನಿಟ್ಟುಕೊಂಡು ನಿರಾಶೆಯಿಂದ ಬದುಕಿರುವ ಹೆಣದಂತೆ ಕಾಣಿಸಿಕೊಂಡನು. ಈತನೇ ಈಶ್ವರೀದುರ್ಗಕ್ಕೆ ನ್ಯಾಯ ಸಮ್ಮತನಾದ ಉತ್ತರಾಧಿಕಾರಿಯೆನಿಸಿದ ಶ್ರೀಕುಮಾರ ಮಹಾಶಯನು.

ತಾಂತಿಯನು ಕೊಂಚಹೊತ್ತು ಎವೆಯಿಕ್ಕದೆ ಶ್ರೀಕುಮಾರನನ್ನು ನೋಡಿ ದನು. ಆತನು ಮಂಡಿಗಳ ಮೇಲೆ ತಲೆಯನ್ನು ಇಟ್ಟು ಅದನ್ನು ಎರಡು ಕೈಗಳಿಂದಲೂ ಹಿಡಿದು ಕೊಂಡು ಕುಳಿತಿರುವನು. ಆಗ ಇಬ್ಬರು ಪ್ರಹರಿಗಳು ಔಷಧವನ್ನು ತೆಗೆದುಕೊಂಡು ವೈದ್ಯನೊಡನೆ ಅಲ್ಲಿಗೆ ಬಂದರು. ಶ್ರೀಕುಮಾರನು ಇವರು ಬಂದುದನ್ನು ನೋಡಿದ ಕೂಡಲೆ ವಿದ್ಯುದ್ವೇಗದಿಂದ ಎದ್ದು ನಿಂತುಕೊಂ ಡು ದೀನಸ್ವರದಿಂದ— ಅಯ್ಯೋ! ನನಗೆ ಏಕೆ ಹೀಗೆ ಸಂಕಟವನ್ನುಂಟುಮಾಡು ತ್ತಿರುವರು? ಈ ಯಾತನೆಯನ್ನು ನಾನು ತಡೆಯಲಾರೆ. ಕೊಲ್ಲುವುದಾದರೆ,

ಬೇಗನೆ ಕೊಂದುಬಿಡಬಾರದೆ! ಹಾ ದೇವ! ನಾನೆಂತಹ ಪಾಪ ಮಾಡಿದ್ದೆನಾದೀತು! ಎಂದು ಹಂಬಲಿಸಿದನು.

ವೈದ್ಯನು ಆ ಮಾತಿಗೆ ಕಿವಿಗೊಡದೆ ರೋಗಿಯನ್ನು ಎರಡು ಕೈಗಳಿಂದಲೂ ಬಿಗಿಯಾಗಿ ಹಿಡಿದುಕೊಳ್ಳಿರಿ, ಎಂದು ಪ್ರಹರಿಗಳಿಗೆ ಅಪ್ಪಣೆಮಾಡಿದನು.

ಕಟುಕರಾದ ಪ್ರಹರಿಗಳು ಶ್ರೀಕುಮಾರನನ್ನು ನೆಲದ ಮೇಲೆ ಕೆಡಹಿದ ಮೇಲೆ, ಒಬ್ಬನು ಅವನ ಎದೆಯ ಮೇಲೆ ಮಂಡಿಯನ್ನೂರಿಕೊಂಡು ನಿಂತಿರಲು ಮತ್ತೊಬ್ಬನು ಆತನ ಎರಡುಕೈಗಳನ್ನೂ ಅಲುಗಾಡದ ಹಾಗೆ ಬಲವಾಗಿ ಹಿಡಿದು ಕೊಂಡನು. ವೈದ್ಯನು ಔಷಧದಿಂದ ತುಂಬಿದ್ದ ಪಿಚಕಾರಿಯನ್ನು ತೆಗೆದುಕೊಂಡು ಅದರ ಮುಂಗಡೆಯ ಸೂಜಿಯಿಂದ ರೋಗಿಯ ಬಾಹುಮೂಲದಲ್ಲಿ ಆಳವಾಗಿ ನಟ್ಟು ಔಷಧವನ್ನು ರಕ್ತಕ್ಕೆ ಸೇರಿಸಿ ಬಿಟ್ಟನು. ತಾಂತಿಯಾಭಿಲ್ಲನು ಈ ಉಗ್ರ ವಾದ ವ್ಯಾಪಾರವನ್ನು ನೋಡಿದ ಕೂಡಲೆ ಸಂಕಟದಿಂದ ತಲ್ಲಣಿಸಿಹೋದನು.

ವಿಷದ ವೇಗವು ಶರೀರದಲ್ಲಿ ವ್ಯಾಪಿಸಿದ ಕೂಡಲೆ ಶ್ರೀಕುಮಾರನು ಚಳಿ ಬಂದವನಂತೆ ಥರಥರನೆ ನಡುಗುವುದಕ್ಕೆ ಮೊದಲು ಮಾಡಿದನು. ಬಳಿಕ ಹುಚ್ಚ ನಂತೆ ಎರಡು ಕೈಗಳನ್ನೂ ಮೇಲಕ್ಕೆತ್ತಿಕೊಂಡು ಹೋ ಹೋ ಎಂದು ನಗಲಾರಂ ಭಿಸಿದನು. ಆತನ ಕಣ್ಣುಗಳಲ್ಲಿದ್ದ ತೇಜಸ್ಸೇ ಮಂಕಾಗಿ ಹೋಯಿತು, ಮೊದ ಲಿದ್ದ ಆತನ ಮೈಯ ಹೊಳಪು ತಟ್ಟನೆ ಮಾಯವಾಯಿತು. ಶ್ರೀಕುಮಾರನು ಬಾಹ್ಯಜ್ಞಾನ ಶೂನ್ಯನಾಗಿ ಹುಚ್ಚನಂತೆ ಬಾಯಿಗೆ ಬಂದ ಹಾಗೆ ಬಗುಳುವುದಕ್ಕೆ ಪ್ರಾರಂಭಮಾಡಿದನು. ಬಲು ಮಾತೇನು? ಹುಚ್ಚನು ಆವಾವ ಕೆಲಸಮಾಡು ವನೋ ಶ್ರೀಕುಮಾರನೂ ಅದೆಲ್ಲವನ್ನೂ ಮಾಡತೊಡಗಿದನು.

ವೈದ್ಯನು ಕಾರ್ಯಸಿದ್ಧಿಯಾಯಿತೆಂದು ಸಂತೋಷಪಟ್ಟವನಾಗಿ ತಾಂತಿಯ ನನ್ನು ಜತೆಯಲ್ಲಿ ಕರೆದುಕೊಂಡು ಹೊರಗೆ ಹೊರಟನು.

ತಾಂತಿಯನು ವೈದ್ಯನ ಈ ಪೈಶಾಚಿಕವ್ಯಾಪಾರವನ್ನು ನೋಡಿ ಸಹಿಸಲಾರದೆ ನಡುಗಿಹೋದನು. ಆತನು ಕಳ್ಳನಾದರೂ, ಆತನ ಹೃದಯದಲ್ಲಿ ದಯಾಸಂ ಚಾರವಾಗುತ್ತಿದ್ದಿತು. "ವೈದ್ಯನು ಬಲಾತ್ಕಾರ ಪಡಿಸಿ ತನ್ನನ್ನೂ ಶ್ರೀಕುಮಾರನಂ ತೆಯೇ ಮಾಡಿಬಿಡುವುದಾದರೆ, ತನ್ನ ಗತಿಯೇನು" ಎಂದು ತಾಂತಿಯನು ಭಾವಿಸಿ ದುದು ಮಾತ್ರವೇ ಅಲ್ಲದೆ, ಎಂತಹ ಭಯಂಕರವಾದ ಸ್ಥಲದಲ್ಲಿ ಕಾಲಿಟ್ಟೆನು, ಎಂದೂ ಚಿಂತಿಸಿಕೊಂಡನು.

ಇಷ್ಟಾದ ಕೂಡಲೆ ವೈದ್ಯನು ತಾಂತಿಯನಿಗೆ ಒಂದೆಡೆಯಲ್ಲಿ ಅಡಗಿರುವಂತೆ ಹೇಳಿ ಅಧಿಕಾರಿಗಳನ್ನು ನೋಡುವುದಕ್ಕೆ ಹೊರಟನು. ವೈದ್ಯನು ನಾಗೇಂದ್ರ

ಭೂಷಣನನ್ನು ಚೆನ್ನಾಗಿಯೂ ಬಲ್ಲವನಾದುದರಿಂದ ಆತನನ್ನು ಲೆಕ್ಕಿಸದೆ ಆತನ ಜತೆಯಲ್ಲಿ ಬಂದಿರುವ ವೃದ್ಧ ವೈದ್ಯನಾರಿರಬಹುದೆಂದು ಸಂದಿಗ್ಧವಾದ ದೃಷ್ಟಿಯಿಂದ ಬಲು ನೋಡಿದನು.

ನಾಗೇಂದ್ರ—ವಾಗೀಶ ಮಹಾಶಯ ! ತಮ್ಮ ಸೌಭಾಗ್ಯಮಂದಿರದ ಕಾರ್ಯವು ನಿರ್ವಿಘ್ನವಾಗಿ ನಡೆಯುತ್ತಿರುವುದೆಂದು ತೋರುವುದು. ಇಲ್ಲಿರುವ ಐವತ್ತು ಮಂದಿ ಹುಚ್ಚರಿಗೂ ಸರಿಯಾದ ಲಾಲನ ಪಾಲನಗಳು ನಡೆಯುತ್ತಿರುವುವಷ್ಟೆ ?

ವೈದ್ಯ—ಇಲ್ಲಿನ ಕಾರ್ಯಕಲಾಪಗಳು ಸುಮುಖವಾಗಿಯೇ ನಡೆಯುತ್ತಿರುವುವು. ಇಲ್ಲಿನ ಹುಚ್ಚರೆಲ್ಲರೂ ಎಷ್ಟರ ಮಟ್ಟಿಗೆ ರಕ್ಷಿಸಲ್ಪಡುತ್ತಿರುವರೆಂಬುದನ್ನು ನಾನು ತಮಗೆ ವಿಶೇಷವಾಗಿ ತಿಳಿಸಬೇಕಾಗಿಲ್ಲ. ಬುದ್ಧಿಯಿಲ್ಲದವರನ್ನು ಮಕ್ಕಳಂತೆ ಕಾಪಿಡುವುದೇ ನನ್ನ ಜನ್ಮ ವ್ರತವಾಗಿರುವುದು. ಇದಕ್ಕಾಗಿಯೇ ನಾನು ನನ್ನ ಸರ್ವಸ್ವವನ್ನೂ ಸಮರ್ಪಣೆಮಾಡಿರುವೆನು. ತಾವು ಕೃಪೆಯಿಟ್ಟು ಒಂದು ಸಲ ಸೌಭಾಗ್ಯಮಂದಿರದ ಪರ್ಯವೇಕ್ಷಣವನ್ನು ಮಾಡೋಣವಾಗಲಿ, ಮಹಾಶಯ !

ನಾಗೇಂದ್ರ—ಆಗ ಬಹುದು ; ನಾನು ನೋಡುವುದಕ್ಕಾಗಿಯೇ ಇಲ್ಲಿಗೆ ಬಂದುದು. ಈಚೀಚೆಗೆ ಪತ್ರಿಕಾಕರ್ತರು ಹುಚ್ಚರ ವೈದ್ಯಶಾಲೆಗಳ ಮೇಲೆ ಸಲ್ಲದ ಅಪವಾದಗಳನ್ನು ಹೊರಿಸುತ್ತಿರುವರು. ನಾನು ಕಣ್ಣಾರೆ ಅವುಗಳನ್ನು ನೋಡಿ ಆ ಅಪವಾದಗಳನ್ನು ಖಂಡಿಸಿ ಸರಿಯಾದ ಉತ್ತರವನ್ನು ಬರೆಯದೇ ಹೋದರೆ, ಸರಕಾರದವರು ನಮ್ಮ ಮೇಲೆ ಆಗ್ರಹಮಾಡುವರು. ಅದಕ್ಕಾಗಿಯೇ ನಾನು ಹೊರಟಿರುವೆನು.

ವೈದ್ಯ—ಪತ್ರಿಕಾಕರ್ತರಿಗೆ ಇನ್ನೇನು ಕೆಲಸವಿದ್ದೀತು? ಸುಳ್ಳೋಪೊಳ್ಳೋ ಬರೆದರಲ್ಲವೇ ಅವರ ಹೊಟ್ಟೆ ತುಂಬುವುದು. ಮಹಾಶಯ ! ತಾವು ಒಳಗೆ ಬಿಜಯಮಾಡಿಸಿ ತಮ್ಮ ಇಷ್ಟವಿರುವಂತೆ ಸೌಭಾಗ್ಯಮಂದಿರವನ್ನು ಪರೀಕ್ಷಿಸಬಹುದು.

ನಾಗೇಂದ್ರ ಭೂಷಣನು ಅಶ್ವಿನೀಕುಮಾರನನ್ನು ಜತೆಯಲ್ಲಿ ಕರೆದುಕೊಂಡು ವೈದ್ಯನ ಹಿಂದೆ ಹಿಂದೆಯೇ ಹೊರಟನು. ಅರಿಂದಮನು ವೈದ್ಯನ ಸ್ಥಿರಸ್ವಭಾವವನ್ನು ನೋಡಿ ವಿಸ್ಮಿತನಾಗಿ ಹೋದನು. ತಾನು ಬಂದ ಕೆಲಸವು ಕೈಗೂಡುವುದೋ ಇಲ್ಲವೋ ಎಂಬ ಬಲವತ್ತರವಾದ ಆಶಂಕೆಯು ಆತನ ಮನವನ್ನಾವರಿಸಿ ಅರಿಂದಮನನ್ನು ಅಧೀರನನ್ನಾಗಿ ಮಾಡಿಬಿಟ್ಟಿತು. ಅಲ್ಲದೆಯೂ ಈ ಸ್ಥಳದಲ್ಲಿ ದೇವೇಂದ್ರವಿಜಯನನ್ನು ಕಂಡುಹಿಡಿವ ಬಗೆ ಹೇಗೆಂಬ ಚಿಂತೆಯೂ ಆತನನ್ನು ತಳಮಳಗುಟ್ಟಿಸಿತು.

ನಾಗೇಂದ್ರನು ಒಂದೊಂದು ಕೋಣೆಯಾಗಿ ಪರೀಕ್ಷೆಮಾಡತೊಡಗಿದನು. ಹುಚ್ಚರ ಸ್ಥಿತಿಗತಿಗಳೆಲ್ಲವೂ ನಿರೀಕ್ಷಿಸಿದುದಾಯಿತು. ಬಳಿಕ ವೈದ್ಯನು ಅಧಿಕಾರಿಯನ್ನು ಮತ್ತೊಂದು ಕೋಣೆಗೆ ಕರೆದುಕೊಂಡು ಹೋಗಿ ತೋರಿ ಇದೇ ಕೊನೆಯ ಕೋಣೆಯೆಂದು ತಿಳಿಸಿದನು. ನಾಗೇಂದ್ರನು ಅದನ್ನೂ ಪರೀಕ್ಷಿಸಿಕೊಂಡು ಹಿಂದಿರುಗುತ್ತಿರಲು, ಅರಿಂದಮನು ನಾಗೇಂದ್ರನ ಕಿವಿಯಲ್ಲಿ—ಮಹಾಶಯ! ಲೆಕ್ಕದಲ್ಲಿ ೪೯ ಮಂದಿ ಹುಚ್ಚರಿರುವಂತೆ ತೋರಿಬರುವುದು. ಈಗ ನಾವು ೪೮ ಮಂದಿಗಳನ್ನು ಮಾತ್ರವೇ ಪರೀಕ್ಷಿಸಿದುದಾಯಿತು. ಮತೊಬ್ಬನೆಲ್ಲಿ ? ಎಂದು ಮೂಲಮಂತ್ರೋಪದೇಶಮಾಡಿದನು.

ಅರಿಂದಮನು ಈ ಮಾತನ್ನು ನಾಗೇಂದ್ರನ ಕಿವಿಯಲ್ಲಾಡಿದರೂ, ವೈದ್ಯನು ಅದನ್ನು ಅರಿತಕೂಡಲೆ ಅವನ ಮುಖವು ಕಂಗೆಟ್ಟಿತು. ಆದರೂ ಆತನು ತನ್ನ ಮನೋಭಾವವನ್ನು ಅಡಗಿಸಿಕೊಂಡವನಾಗಿ 'ತಾವು ೪೮ ಮಂದಿಗಳನ್ನೇ ಪರೀಕ್ಷೆಮಾಡಿದುದು. ಮತ್ತೊಬ್ಬನು ಮಿತಿಮಿಾರಿದ ಹುಚ್ಚಾಗಿರುವುದರಿಂದ, ಆತನನ್ನು ನೆಲಮಾಳಿಗೆಯಲ್ಲಿ ನಿರ್ಬಂಧಿಸಿರುವೆನು. ಈ ಸಮಯದಲ್ಲಿ ಆತನ ವಿಷಯವು ಜ್ಞಾಪಕಕ್ಕೆ ಬರಲಿಲ್ಲ. ಒಂದೆರಡು ಗಂಟೆಗಳ ಹಿಂದೆ ಆತನ ಹಾವಳಿಯು ತಡೆಯುವುದಕ್ಕೆ ಅಸಾಧ್ಯವಾಗಿದ್ದಿತು. ಈಗ ಆತನು ಹೇಗಿರುವನೋ ಗೊತ್ತಿಲ್ಲ. ಆತನಾದರೋ ಭಯಂಕರನಾದ ಹುಚ್ಚನಾಗಿರುವನು. ಆತನನ್ನು ನೋಡುವುದು ಕೂಡ ವಿಪಜ್ಜನಕವಾಗಿರುವುದು,' ಎಂದು ಚಾತುರ್ಯದ ಮಾತನಾಡಿದನು.

ಅಶ್ವಿನೀಕುಮಾರ—ಆದರೂ ಆತನನ್ನು ನಾವು ನೋಡಬೇಕಾದುದು ಆವಶ್ಯಕವಲ್ಲವೇ? ಆತನ ಸ್ಥಿತಿಗತಿಗಳನ್ನು ನೋಡದ ಮೇಲೆ ಪರ್ಯವೇಕ್ಷಣ ಕಾರ್ಯವು ಪೂರ್ಣವೆನಿಸಿಕೊಳ್ಳಲಾರದಷ್ಟೆ?

ವೈದ್ಯ—ತಮ್ಮ ಅಭಿಪ್ರಾಯವು ಹೀಗಿರಬಹುದು. ಅಂತಹ ದುರ್ದಾಂತನಾದ ಹುಚ್ಚನನ್ನು ತಮ್ಮಂಥವರು ನೋಡಬಾರದೆಂದೇ ನನ್ನ ಅಭಿಮತವು.

ಅಶ್ವಿನೀಕುಮಾರ—ಇಂಥವರನ್ನು ವೈದ್ಯರಲ್ಲದೆ ಮತ್ತಾರು ನೋಡುವುದಕ್ಕೆ ತಕ್ಕವರು? ಆದರೂ ನೋಡಿ ಬರುವ, ತೆರಳೋಣವಾಗಲಿ.

ವೈದ್ಯನು ಬೇರೆಯ ಉಪಾಯವನ್ನು ಕಾಣದವನಾಗಿ, ಆವ ಸ್ಥಳದಲ್ಲಿ ತಾಂತಿಯಾ ಭಿಲ್ಲನು ಅಡಗಿದ್ದನೋ ಆ ಸ್ಥಳಕ್ಕೆ ಅಧಿಕಾರಿಗಳಿಬ್ಬರನ್ನೂ ಕರೆದುಕೊಂಡು ಹೋದನು. ಅಧಿಕಾರಿಗಳಿಬ್ಬರೂ ನೆಲಮಾಳಿಗೆಯಲ್ಲಿನ ಮೆಟ್ಟಲುಗಳನ್ನಿಳಿದು ಹುಚ್ಚನಿದ್ದ ಕೋಣೆಗೆ ಬಂದು ನೋಡಿದರು. ಹುಚ್ಚನು ಮುಖವನ್ನು

ಮುಚ್ಚಿಕೊಂಡು ಒಂದೆಡೆಯಲ್ಲಿ ಕುಳಿತಿದ್ದನು. ಜನರು ಬಂದುದನ್ನು ನೋಡಿ, ಆತನು ತಲೆಯೆತ್ತಿ ನೋಡಿದನು. ಅರಿಂದಮನು ಆತನನ್ನು ತೀಕ್ಷ್ಣದೃಷ್ಟಿಯಿಂದ ಚೆನ್ನಾಗಿ ಪರಿಶೀಲಿಸಿ ನೋಡಿದನು.

ಆಹಾರ ವ್ಯವಹಾರಗಳಲ್ಲಿ ನಿಯಮವಿಲ್ಲದಿರುವುದರಿಂದಲೂ, ಅತ್ಯಾಚಾರದಿಂದಲೂ, ಯಾತನೆಯಿಂದಲೂ ಶ್ರೀಕುಮಾರನ ಆಕೃತಿಯಲ್ಲಿ ವಿಶೇಷವಾಗಿ ವ್ಯತ್ಯಾಸವು ಕಂಡು ಬರುತ್ತಿದ್ದಿತು. ಆತನ ದೇಹವು ಕೃಶವಾಗಿ ಮೂಳೆಗಳು ಕಾಣಿಸುತ್ತಿದ್ದುವು, ಕಣ್ಣುಗಳು ಗುಳಿಬಿದ್ದಿದ್ದುವು. ಆತನ ಮುಖದಲ್ಲಿ ಕ್ಷೋಭೆಯೂ ವಿಷಾದವೂ, ನಿರಾಶೆಯೂ ಸ್ಪಷ್ಟವಾಗಿ ತೋರಿಬರುತ್ತಿದ್ದುವು, ದೃಷ್ಟಿಯಲ್ಲಿ ತೇಜಸ್ಸಿರಲಿಲ್ಲ, ಹಾಗೂ ಆವ ಭಾವವೂ ತೋರಿಬರುವಂತಿರಲಿಲ್ಲ. ಕಣ್ಣುಗಳಲ್ಲಿನ ಕರಿಯ ಗುಡ್ಡುಗಳು ತೇಲಾಡುವಂತೆ ತೋರಿಕೊಳ್ಳುತ್ತಿದ್ದುವು. ಅರಿಂದಮನು ಈತನನ್ನು ನೋಡಿದ ಕೂಡಲೆ, ಭಾವಚಿತ್ರದ ವ್ಯಕ್ತಿಯು ಆತನ ಸ್ಮೃತಿಪಥಕ್ಕೆ ಬಂದಿತು. ಅರಿಂದಮನು ಕೊಂಚಹೊತ್ತು ನೋಡಿದ ಮೇಲೆ ಈತನೇ ಶ್ರೀಕುಮಾರನೆಂದು ನಿರ್ಧರಿಸಿಕೊಂಡನು. ಬಳಿಕ ಸಂಕಟದಿಂದ ನಾಗೇಂದ್ರನನ್ನು ಉದ್ದೇಶಿಸಿ—ಮಹಾಶಯ ! ಈ ವ್ಯಕ್ತಿಯನ್ನು ನೋಡೋಣವಾಯಿತೇ ? ಈತನ ಅವಸ್ಥೆಯು ಬಲು ಶೋಚನೀಯವಾಗಿರುವುದು. ಈತನನ್ನು ನೋಡಿದರೆ, ಹಿಂದಣ ವೃತ್ತಾಂತವೊಂದು ಜ್ಞಾಪಕಕ್ಕೆ ಬರುತ್ತಿರುವುದು. ಅನೇಕ ವರ್ಷಗಳ ಹಿಂದೆ ಬೈರಾಗಿಯೊಬ್ಬನು ನನ್ನ ಬಳಿಗೈತಂದು ಮೂಲಿಕೆಗಳಲ್ಲಿರುವ ಅದ್ಭುತ ಶಕ್ತಿಯನ್ನು ನನಗೆ ತೋರಿಸುವುದಾಗಿ ಹೇಳಿದನು. ಬಳಿಕ ಆತನು ನನ್ನ ಶಿಷ್ಯನಾದ ದೇವೇಂದ್ರನನ್ನು ಕರೆದು ಒಂದು ಮೂಲಿಕೆಯ ರಸವನ್ನು ಅವನ ಬಾಯಲ್ಲಿ ಹಿಂಡಲು, ದೇವೇಂದ್ರನು ಈ ಹುಚ್ಚನ ಅವಸ್ಥೆಯನ್ನೇ ತಾಳಿಬಿಟ್ಟನು. ಅದನ್ನು ನೋಡಿ ನನಗೆ ತುಂಬಾ ಭಯವಾಯಿತು. ಬೈರಾಗಿಯು ನನ್ನ ದುರವಸ್ಥೆಯನ್ನು ನೋಡಿ, ಮತ್ತೊಂದು ಮೂಲಿಕೆಯ ರಸವನ್ನು ಅವನ ಬಾಯಲ್ಲಿ ಹಿಂಡಿದ ಕೂಡಲೆ ದೇವೇಂದ್ರನು ಮೊದಲಿನಂತಾಗಿಬಿಟ್ಟನು, ಎಂದು ನುಡಿದನು.

ವೈದ್ಯನು ಈ ಕಥೆಯನ್ನು ಕೇಳಿದ ಕೂಡಲೆ ಅಪ್ರತಿಭನಾಗಿ ಬುದ್ಧಿಯಿಲ್ಲದವನಂತೆ ಬೆಪ್ಪಾಗಿ ನಿಂತನು. ವೈದ್ಯನು ಆವ ಮಾತನಾಡುವುದಕ್ಕೂ ಬಾಯಿಬರದವನಾಗಿ ಕೊಂಚ ಹೊತ್ತು ಸುಮ್ಮನಿದ್ದ ಬಳಿಕ—ಮಹಾಶಯ ! ತಾವು ಹೇಳಿದ ಕಥೆಯು ಆಶ್ಚರ್ಯಕರವಾಗಿರುವುದು. ಸರಿಯಾಗಿರುವ ಮನುಷ್ಯನನ್ನು ಹುಚ್ಚನನ್ನಾಗಿ ಮಾಡುವ ಔಷಧಗಳು ಬೈರಾಗಿಗಳಿಗೆ ಗೊತ್ತಿರುವುದಲ್ಲವೇ ? ಮೂಲಿಕೆಗಳ ಶಕ್ತಿಯು ಅಪಾರವೆಂದೇ ಹೇಳಬೇಕು, ಎಂದು ತಿಪ್ಪೆಸಾರಿಸುವ ಮಾತನ್ನಾಡಿದನು.

ಅಶ್ವಿನೀಕುಮಾರ—ಭಗವಂತನ ಸೃಷ್ಟಿಯಲ್ಲಿ ಎಂಥೆಂಥ ಚಮತ್ಕಾರಗಳು ಅಡಗಿರುವುವೋ ಬಲ್ಲವರಾರು ? ವಾಗೀಶಮಹಾಶಯ ! ಈತನ ಸಹಜವಲ್ಲದ ದುರವಸ್ಥೆಯನ್ನು ನೋಡಿ ನನಗೆ ತುಂಬಾ ಸಂಕಟವಾಗುತ್ತಿರುವುದು. ನಾವಿನ್ನು ತಮ್ಮ ಅಧಿಕಾರಮಂದಿರಕ್ಕೆ ಹೋಗೋಣ. ಅಲ್ಲಿ ಶ್ರೀಯುತ ನಾಗೇಂದ್ರ ಭೂಷಣಮಹಾಶಯರು ಪರ್ಯವೇಕ್ಷಣ ಪುಸ್ತಕದಲ್ಲಿ ತಮ್ಮ ಅಭಿಪ್ರಾಯವನ್ನು ಬರೆದು ಮುಂದೆ ತೆರಳುವವರಾಗಿರುವರು.

ಈ ಮಾತನ್ನು ಕೇಳಿದ ಬಳಿಕ ವೈದ್ಯನು ಅಧಿಕಾರಿಗಳನ್ನು ಜತೆಯಲ್ಲಿ ಕರೆದುಕೊಂಡು ತನ್ನ ಅಧಿಕಾರ ಮಂದಿರಕ್ಕೆ ಬಂದನು. ಅಲ್ಲಿ ಎಲ್ಲರೂ ಕುಳಿತ ಬಳಿಕ ಅಶ್ವಿನೀಕುಮಾರನು ವೈದ್ಯನನ್ನು ಕುರಿತು—ಮಹಾಶಯ ! ಈಗ ನಾವು ನೋಡಿದ ಹುಚ್ಚನ ಅಶನ ವಸನಾದಿಗಳಿಗೆ ತಗಲುವ ವೆಚ್ಚವು ತಮಗೆ ಎಲ್ಲಿಂದ ಸಂದಾಯವಾಗುತ್ತಿರುವುದು ? ಎಂದು ಪ್ರಶ್ನೆಮಾಡಿದನು.

ವೈದ್ಯ—(ಮುಗುಳುನಗೆಯಿಂದ) ಈತನ ಚರಿತ್ರೆಯು ವಿಲಕ್ಷಣವಾದುದು. ಈ ವ್ಯಕ್ತಿಯು ಕೆಲವು ದಿನಗಳ ಹಿಂದೆ ಈಶ್ವರೀದುರ್ಗದ ಶಿವಪ್ರಾಸಾದದಲ್ಲಿ ಕಳ್ಳತನಕ್ಕೆ ಹೋಗಿ ಸಿಕ್ಕಿಕೊಂಡನು. ಜಹಗೀರುದಾರನು ಈತನನ್ನು ಹುಚ್ಚನೆಂದು ಸಿದ್ಧಾಂತ ಪಡಿಸಿಕೊಂಡು ಈ ಸೌಭಾಗ್ಯಮಂದಿರಕ್ಕೆ ಕಳಿಹಿಸಿಕೊಟ್ಟನು. ಗತಿಸಿದ ಜಹಗೀರುದಾರನು ಪರದುಃಖದುಃಖಿತನಾದ ಉದಾರಿಯಾಗಿದ್ದುದರಿಂದ ಈ ಹುಚ್ಚನ ವ್ಯಯವೆಲ್ಲವನ್ನೂ ತಾನೇ ವಹಿಸುವುದಾಗಿ ತಿಳಿಸಿದನು. ಅಂದಿನಿಂದಲೂ ಜಹಗೀರಿಯಿಂದಲೇ ಈತನ ಯೋಗಕ್ಷೇಮಕ್ಕಾಗಿ ಹಣಕಾಸುಗಳು ಬರುತ್ತಿರುವುವು. ಈತನ ಹೆಸರು ನನಗೆ ಗೊತ್ತಿಲ್ಲವಾದುದರಿಂದ, ನಾನು ಈತನನ್ನು ' ೪ನೇ ನಂಬರು ' ಎಂದು ಕರೆಯುತ್ತಿರುವೆನು.

ಅಶ್ವಿನೀಕುಮಾರ—ಒಳ್ಳೆಯ ನಾಮಕರಣವನ್ನೇ ಮಾಡಿದಂತಾಯಿತು. ತಮಗೆ ಆತನ ಹೆಸರು ಗೊತ್ತಾಗದಿದ್ದರೂ, ನನಗೆ ಆತನನ್ನು ನೋಡಿದ ಕೂಡಲೆ, ಆತನಾರೆಂಬುದು ಗೊತ್ತಾಯಿತು. ಆತನ ಹೆಸರು ಶ್ರೀಕುಮಾರ ಮಹಾಶಯ.

ವೈದ್ಯ—(ತೊದಲ್ನುಡಿಯಿಂದ) ಇಲ್ಲ, ಮಹಾಶಯ ! ಆತನ ಹೆಸರು ಅದಿರಲಿಕ್ಕಿಲ್ಲ, ತಾವು ವೃದ್ಧಮಹಾಶಯರು. ಈತನನ್ನು ನೋಡಿ ಆರನ್ನೋ ಜ್ಞಾಪಿಸಿಕೊಂಡಂತಿದೆ.

ವೈದ್ಯನು ಮುಂದಾವ ಮಾತನ್ನೂ ಆಡದೆ ತಲೆಯನ್ನು ತಗ್ಗಿಸಿಕೊಂಡು ಕುಳಿತಿರಲು, ಅರಿಂದಮನು ವೈದ್ಯನ ಬಳಿಗೈತಂದು ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ವೈದ್ಯನ ಕೈಗೆ ಬೇಡಿಗಳನ್ನು ತೊಡಿಸಿದ್ದನು. ದುರ್ದಾಂತನಾದ

ವೈದ್ಯವಾಗೀಶನು ಇತಿಕರ್ತವ್ಯತಾ ಮೂಢನಾಗಿ ಬಲು ಹೊತ್ತು ಆವ ಮಾತನ್ನೂ ಆಡದೆ ಕುಳಿತಿದ್ದು ಬಳಿಕ ಕ್ರಮಕ್ರಮವಾಗಿ ಚೇತರಿಸಿಕೊಂಡು ಕ್ಷೀಣಸ್ವರದಿಂದ— ಮಹಾಶಯ ! ತಾವು ಇದೆಂತಹ ದೊಡ್ಡತನವನ್ನು ತೋರ್ಪಡಿಸೋಣವಾಯಿತು ? ತಾವು ಹೇಳಿದ ಮಾತಿಗೂ ಮಾಡಿದ ಕೆಲಸಕ್ಕೂ ಪ್ರಮಾಣವೇನಿರುವುದು ? ನನ್ನಂತಹ ದೊಡ್ಡಮನುಷ್ಯನನ್ನು ನಿಷ್ಕಾರಣವಾಗಿ ತಾವು—

ಅರಿಂದಮ—(ಅಡ್ಡಗಿಸಿ) ಶಾಂತರಾಗಿರಿ, ವಾಗೀಶ ಮಹಾಶಯ ! ಶಾಂತರಾಗಿರಿ. ತಮ್ಮಂತಹ ದೊಡ್ಡಮನುಷ್ಯರನ್ನು ನಿಷ್ಕಾರಣವಾಗಿ ದಸ್ತಗಿರಿ ಮಾಡುವುದು ನಮ್ಮ ಅಭ್ಯಾಸದಲ್ಲಿಲ್ಲ. ಈಗ ಇಲ್ಲಿ ಎಲ್ಲವೂ ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂಬ ಗಾದೆಗೆ ಅನುಸಾರವಾಗಿಯೇ ನಡೆಯುವುದು. ತಾವು ಎಲ್ಲವನ್ನೂ ತಮ್ಮ ಕಣ್ಣಿನಿಂದಲೇ ನೋಡಿ ಸಂತೋಷಪಡೋಣವಾಗಲಿ. ಶ್ರೀಕುಮಾರನ ಹೆಂಡಿತಿಯು ಈಗ ಬದುಕಿರುವಳು. ಆಕೆಯಾದರೂ ತನ್ನ ಗಂಡನನ್ನುಗುರುತಿಸಬಲ್ಲಳೋ ಇಲ್ಲವೋ ನೋಡುವ. ಈಗಲೇ ಆಕೆಗೆ ತಂತಿಯ ಸಮಾಚಾರವನ್ನು ಕಳುಹಿಸಿ, ಆಕೆಯನ್ನು ಇಲ್ಲಿಗೆ ಬರಮಾಡಿಕೊಳ್ಳುವೆನು.

ವೈದ್ಯ—(ಹತಾಶನಾಗಿ) ನೀವು ಹೇಳುವ ಮಾತು ನಂಬುಗೆಗೆ ತಕ್ಕುದಲ್ಲ. ನಿಮ್ಮ ಮಾತು ಅಸಂಭವವಾದುದು. ಎಲ್ಲವೂ ಸುಳ್ಳು. ವಿರುದ್ಧಾಚರಣೆಯಿಂದ ನನಗೆ ತೊಂದರೆ ಪಡಿಸುವುದಕ್ಕಾಗಿ ತಾವು ಇಲ್ಲಿಗೆ ಬಂದಂತಿದೆ. ತಾವಾರು ?

ಅರಿಂದಮನು ಅಶ್ವಿನೀಕುಮಾರನ ವೇಷವನ್ನು ಕಿತ್ತುಹಾಕಿ—ಮಹಾಶಯ ! ಈಗಲಾದರೂ ಕಣ್ಣುಬಿಟ್ಟು ನೋಡೋಣವಾಗಲಿ. ನಾನಾರೋ ಗೊತ್ತಾಗುವುದು. ಇದೆಲ್ಲಾ ಹಾಗಿರಲಿ. ನನ್ನ ದೇವೇಂದ್ರನನ್ನು ಎಲ್ಲಿ ಅವಿತಿಟ್ಟಿರುವೆ. ಬೇಗ ತಿಳಿಸೋಣವಾಗಲಿ, ಕಲಿತ ಹರಟೆಯನ್ನು ತೋರುತ್ತಾ ತಡಮಾಡುವುದಾದರೆ, ಈ ಛಡಿಯಿಂದ ನಿನ್ನ ಮೈಯ ಚರ್ಮವನ್ನು ಸುಲಿದುಬಿಡುವೆನು. ಎಲೋ ಭೂತ ! ಆರೊಡನೆ ನಿನ್ನ ಚಾತುರ್ಯವನ್ನು ತೋರುವೆ ? ನಮ್ಮ ದೇವೇಂದ್ರನನ್ನು ಬೇಗ ತೋರು, ಎಂದಬ್ಬರಿಸಿದನು.

ವೈದ್ಯವಾಗೀಶನು ಸೊಕ್ಕಿ ಸೊರಗಿ ಬಸವಳಿದುಬಿದ್ದುಬಿಟ್ಟನು. ಅಪರಾಧಿಗಳು ಆವಾಗಲೂ ಪುಕ್ಕಲು ಸ್ವಭಾವದವರು. ಛಡಿಯ ಏಟೆಂಬುದನ್ನು ಕೇಳಿದ ಕೂಡಲೇ ಆತನು ಥರಥರನೆ ನಡುಗಿದವನಾಗಿ ಪ್ರಹರಿಯನ್ನು ಕರೆದು ದೇವೇಂದ್ರನನ್ನು ಬಿಟ್ಟುಬಿಡುವಂತೆ ಅಪ್ಪಣೆಮಾಡಿದನು.

ಅರಿಂದಮ—ಎಲಾ ದುರಾತ್ಮನಾದ ವಾಗೀಶ! ಸೂತ್ರಸ್ಥಾನದಿಂದ ಅನೇಕಮಂದಿ ಪೋಲೀಸಿನವರು ಬಂದು ನಿನ್ನ ಸೌಭಾಗ್ಯಮಂದಿರದ ಸುತ್ತಲೂ

ಸುತ್ತಿಕೊಂಡಿರುವರು. ನಿನ್ನ ಕಡೆ ಆರಾದರೂ ತಪ್ಪಿಸಿಕೊಂಡು ಓಡಿಹೋಗುವ ಯತ್ನಮಾಡುವುದಾದರೆ, ಗುಂಡಿನಿಂದ ಸುಟ್ಟುಬಿಡುವರು, ಎಚ್ಚರಿಕೆ!

ಇದಾದ ಐದು ನಿಮಿಷಗಳೊಳಗಾಗಿ, ದೇವೇಂದ್ರನು ಅರಿಂದಮನ ಇದಿರಿನಲ್ಲಿ ಬಂದು ನಿಂತನು. ವೈದ್ಯನ ದುರಾಚಾರಗಳಿಂದ ಆತನು ನೋಡುವುದಕ್ಕೆ ಭಯಂಕರನಾಗಿ ಹೋಗಿದ್ದನು. ಅರಿಂದಮನು ಸಂತೋಷದಿಂದ 'ಮಗು ಬದುಕಿರುವೆಯಾ?' ಎಂದು ಆತನನ್ನು ಅಪ್ಪಿಕೊಂಡನು.

ದೇವೇಂದ್ರ—(ಕ್ಷೀಣಸ್ವರದಿಂದ) ಈ ಪಿಶಾಚನು ನನಗೆ ಇಲ್ಲಿ ನರಕ ಯಾತನೆಯನ್ನೇ ಉಂಟುಮಾಡಿದನು. ತಾವು ಈ ದಿನ ಇಲ್ಲಿಗೆ ಬರದೇ ಇದ್ದಲ್ಲಿ, ಔಷಧದ ಪ್ರಯೋಗದಿಂದ ನನ್ನನ್ನೂ ಹುಚ್ಚನನ್ನಾಗಿ ಮಾಡಿಬಿಡುತ್ತಿದ್ದನು. ಗುರುದೇವ! ತಾಂತಿಯನು ಕೈಗೆ ಸಿಕ್ಕಿದನೇ?

ಅರಿಂದಮ—ಇನ್ನೂ ಇಲ್ಲ, ಮಗು! ಆತನ ವಿಷಯದಲ್ಲಿ ನನಗೆ ಕೊಂಚವಾದರೂ ಚಿಂತೆಯಿಲ್ಲ. ಗುಟ್ಟೆಲ್ಲವೂ ರಟ್ಟಾಗಿರುವುದು. ಕಲ್ಯಾಣ ಮಲ್ಲನು ಆತ್ಮಹತ್ಯೆಮಾಡಿಕೊಂಡು ಬದುಕಿಕೊಂಡನು. ಶ್ರೀಕುಮಾರನ ಪತ್ತೆಯಾಯಿತು. ಈ ಭೂತನಾದ ವೈದ್ಯನ ಕೈಗೆ ಬಳೆಗಳನ್ನು ತೊಡಿಸಿರುವೆನು. ಈತನ ಪಾಪಗಳಿಗೆ ಸರಿಯಾದ ಪ್ರಾಯಶ್ಚಿತ್ತವನ್ನು ಏರ್ಪಡಿಸಿರುವೆನು. ನಾನು ಸರ್ವಮಂಗಳೆಯನ್ನು ಇಲ್ಲಿಗೆ ಬರಮಾಡಿಕೊಳ್ಳುವುದಕ್ಕಾಗಿ ಈ ತಂತಿಯ ಸಮಾಚಾರವನ್ನು ಕಳುಹಬೇಕೆಂದಿರುವೆನು. ನೀನು ಬೇಗನೇ ಹೋಗಿ ಹೊಗೆ ಬಂಡಿಯ ನಿಲ್ದಾಣದಲ್ಲಿ ಇದನ್ನು ಕೊಟ್ಟು ಬಾ. ಆಕೆಬಂದ ಕೂಡಲೆ, ಎಲ್ಲವೂ ಸಿದ್ಧಾಂತವಾಗುವುದು.

ದೇವೇಂದ್ರನು ತಂತಿಯ ಸಮಾಚಾರದ ಕಾಗದವನ್ನು ತೆಗೆದುಕೊಂಡು ಹೊರ ಹೊರಟನು. ನಾಗೇಂದ್ರಭೂಷಣನು ಬಲು ಹೊತ್ತು ಆವ ಮಾತನ್ನೂ ಆಡದೆ ಎಲ್ಲವನ್ನೂ ನೋಡುತ್ತಾ ಕುಳಿತಿದ್ದನು. ಬಳಿಕ ಆತನು ಅರಿಂದಮನನ್ನು ನೋಡಿ—ಮಹಾಶಯ! ತಮ್ಮ ಶಕ್ತಿಯು ಅತ್ಯದ್ಭುತವಾದುದು. ಈದಿನ ನೀವು ನಮ್ಮಗಳ ಮಾನವನ್ನು ಕಾಪಿಡೋಣವಾಯಿತು. ನನ್ನ ಕಣ್ಣೆದಿರಿನಲ್ಲಿಯೇ ಇಂತಹ ಪೈಶಾಚಿಕವ್ಯಾಪಾರವು ನಡೆಯುವುದೆಂದು ನಾನು ಸ್ವಪ್ನದಲ್ಲಿಯೂ ತಿಳಿದಿರಲಿಲ್ಲ, ಎಂದು ನುಡಿದನು.

ಅರಿಂದಮ—ಪೂಜ್ಯಮಹಾಶಯ! ಇಹ ಸಂಸಾರದಲ್ಲಿ ಇಂತಹ ಎಷ್ಟೋ ಜನ ನರಪಿಶಾಚರು ಸ್ವದೇಶ ಹಿತೈಷಿಗಳೆಂಬ ಮೊಗವಾಡಗಳನ್ನು ಹಾಕಿಕೊಂಡು ಏನನ್ನೂ ಅರಿಯದ ಪ್ರಜೆಗಳನ್ನು ವಂಚಿಸಿ ತಮ್ಮ ಹಾಳ ಹೊಟ್ಟೆಗಳನ್ನು

ಹೊರೆದುಕೊಳ್ಳುತ್ತಿರುವರು. ಯತ್ನಮಾಡಲಿಕ್ಕಾಗಿ ಇಂದು ಈ ಪಿಶಾಚವು ಬಯಲಿಗೆ ಬಿದ್ದಿತು. ಇದಕ್ಕಾಗಿಯೇ ಕುಳಿತುಕೊಂಡರೆ ಎಂತೆಂತಹ ಗೋಮುಖ ವ್ಯಾಘ್ರಗಳೂ ನರಪಿಶಾಚರೂ ಹೊರಬೀಳುವರೋ, ಅವುಗಳಿಗೆ ಲೆಕ್ಕವೇನು? ನಮ್ಮವರೇ ನಮಗೆ ಮೃತ್ಯುಗಳು. ಇದೇ ನಮ್ಮ ದೇಶಕ್ಕೆ ಬಂದಿರುವ ಅಪರಿಹಾರ್ಯವಾದ ಕಳಂಕವು. ಎಲ್ಲಿಯ ವರೆಗೂ ಸ್ವದೇಶಾಭಿಮಾನವೂ ಸ್ವಜನಾನುರಾಗವೂ ಇಲ್ಲವೋ, ಅಲ್ಲಿಯ ವರೆಗೂ ಏಳಿಗೆಯಿಲ್ಲ.

---

## ಐದನೆಯ ವಿಲಾಸ

### ಉಪಸಂಹಾರ

ಹಿಂದಣ ವಿಲಾಸದಲ್ಲಿ ಆವ ದಿನದ ಘಟನಾವಿಶೇಷವನ್ನು ಅವಲಂಬಿಸಿಕೊಂಡು ಉಲ್ಲೇಖಿಸಲು ನಾವು ಉದ್ಯುಕ್ತರಾಗಿದ್ದೆವೋ, ಅದೇ ದಿನದ ಮಧ್ಯಾಹ್ನದ ಮೂರುಗಂಟೆಯ ಹೊತ್ತಿನಲ್ಲಿ ಬಂಡಿಯೊಂದು ಸೌಭಾಗ್ಯಮಂದಿರದ ಬಾಗಿಲಲ್ಲಿ ಬಂದು ನಿಂತಿತು. ನಿತ್ಯಮಂಗಳೆಯು ಬಂಡಿಯಿಂದಿಳಿದು ಮಂದಿರದೊಳಗೆ ಪ್ರವೇಶಮಾಡುವುದರೊಳಗಾಗಿ, ಅರಿಂದಮನು ಹೊರಗೆ ಬಂದು ಆಕೆಯನ್ನು ಇದಿರುಗೊಂಡನು. ತನ್ನ ತಂತಿಯ ಸಮಾಚಾರಕ್ಕೆ ಪ್ರತ್ಯುತ್ತರವಾಗಿ ನಿತ್ಯಮಂಗಳೆಯೇ ಬಂದು ಬಿಡುವಳೆಂದು ಅರಿಂದಮನು ಸಿದ್ಧಾಂತಮಾಡಿಕೊಂಡಿದ್ದನು. ಅದರಂತೆಯೇ ನಿತ್ಯಮಂಗಳೆಯೂ ಬಂದುಬಿಟ್ಟಳು.

ನಿತ್ಯಮಂಗಳೆಯು ಅರಿಂದಮನ ಪರಮಮಿತ್ರನ ಮನೆಯಲ್ಲಿ ಪರಿಪಾಲಿತೆಯಾಗಿದ್ದಳೆಂಬುದು ನಮ್ಮ ಪ್ರಿಯಪಾಠಕ ಮಹಾಶಯರಿಗೆ ಇನ್ನೂ ಜ್ಞಾಪಕದಲ್ಲಿರುವುದು. ಅರಿಂದಮನು ತನ್ನ ಪರಮ ಮಿತ್ರನಿಗೆ ಈಕೆಯ ಪೂರ್ವೋತ್ತರಗಳೆಲ್ಲವನ್ನೂ ತಿಳಿಸಿದ್ದುದರಿಂದ, ಆ ಮಿತ್ರನು ಈಕೆಯನ್ನು ಪುತ್ರವಾತ್ಸಲ್ಯದಿಂದ ಸಲಹುತ್ತಿದ್ದನು. ಆದರದಿಂದಲೂ, ಒಳ್ಳೆಯ ಭೋಜನೋಪಚಾರಗಳಿಂದಲೂ, ದುಶ್ಚಿಂತೆಗೆ ಅವಕಾಶವಿಲ್ಲದಿದ್ದುದರಿಂದಲೂ ನಿತ್ಯಮಂಗಳೆಯು ಸರ್ವಮಂಗಳೆಯಂತೆ ಶೋಭಿಸುತ್ತಿದ್ದಳು. ಈಕೆಯನ್ನು ನೋಡಿದವರೆಲ್ಲರಿಗೂ, ಈಕೆಯ ವಿಷಯದಲ್ಲಿ ಭಯಭಕ್ತಿಗಳುಂಟಾಗುತ್ತಿದ್ದುವು. ಈಕೆಯ ದೇವತಾಯೋಗ್ಯವಾದ ರೂಪವನ್ನು ನೋಡಿದವರೆಲ್ಲರೂ, ಭಗವಂತನ ಸೃಷ್ಟಿಚಮತ್ಕಾರವನ್ನು ಕೊಂಡಾಡಿದರೇ ಹೊರತು, ಕಾಮವಾಸನೆಯಿಂದ ಆರೂ ಈಕೆಯನ್ನು ನೋಡಲಿಲ್ಲ.

ಅರಿಂದಮನು ನಿತ್ಯಮಂಗಳೆಯನ್ನು ನೋಡಿ—ತಾಯೇ! ಎಲ್ಲವೂ ಮಂಗಳವಷ್ಟೆ? ಎಂದು ಕುಶಲಪ್ರಶ್ನೆಮಾಡಿದನು.

ನಿತ್ಯಮಂಗಳಾ—ತಂದೆಯೇ! ತಮ್ಮ ಅಭಿಮಾನದಿಂದ ಎಲ್ಲವೂ ಮಂಗಳವು. ಇಷ್ಟು ಹಠಾತ್ತಾಗಿ ತಂತಿಯ ಸಮಾಚಾರವನ್ನು ಕೊಟ್ಟು ನನ್ನನ್ನು ಕರೆಯಿಸಿಕೊಳ್ಳಲು ಕಾರಣವೇನು ?

ಅರಿಂದಮ—ಕಾರಣಸಿರುವುದಮ್ಮ! ನಿನ್ನ ಯಜಮಾನನಿರುವ ಸ್ಥಲವನ್ನು ನಾನು ಪತ್ತೆ ಮಾಡಿರುವೆನು. ಆತನು ಇಲ್ಲಿಯೇ ಇರುವನು. ಇಷ್ಟರಲ್ಲಿಯೇ ನೀನು ಆತನನ್ನು ನೋಡುವೆ. ಆತನು ಅನೇಕ ಕಷ್ಟಗಳಿಗೆ ಸಿಕ್ಕಿ ಕಂಗೆಟ್ಟು ಹೋಗಿರುವನು. ಆದರೂ ನೀನು ಆತನನ್ನು ನೋಡಿದ ಕೂಡಲೆ ಭಯಪಡಬೇಕಾದ ಕಾರಣವೇನೂ ಇರುವುದಿಲ್ಲ. ಈ ಹುಚ್ಚರ ವೈದ್ಯಶಾಲೆಯ ಅಧ್ಯಕ್ಷನಾದ ವೈದ್ಯವಾಗೀಶನೆಂಬುವನು ಈ ದಿನದ ಪ್ರಾತಃಕಾಲದಲ್ಲಿ ನಿನ್ನ ಯಜಮಾನನಿಗೆ ಔಷಧಪ್ರಯೋಗಮಾಡಿ ಹುಚ್ಚುಹಿಡಿಸಿರುವನು. ಔಷಧದ ವೇಗವು ಕಡಮೆಯಾದ ಕೂಡಲೆ ಹುಚ್ಚು ಇಳಿದು ಹೋಗುವುದು. ಇದರಿಂದ ಮತ್ತೇನೂ ಅಪಾಯವಿಲ್ಲ. ಈಗ ನನ್ನೊಡನೆ ಬಾರಮ್ಮ.

ನಿತ್ಯಮಂಗಳೆಯು ಅರಿಂದಮನನ್ನು ಅನುಸರಿಸಿದಳು. ಸೂತ್ರಸ್ಥಾನದ ಅಧಿಕಾರಿಯೊಬ್ಬನು ಅರಿಂದಮನೊಡನೆ ಬಂದು ಹೊರಗೆ ನಿಂತಿದ್ದನು. ಆತನು ಅರಿಂದಮನ ಅಪ್ಪಣೆಯ ಮೇರೆ ವೈದ್ಯವಾಗೀಶನನ್ನು ಬಂದಿಯನ್ನಾಗಿ ಮಾಡಿಕೊಂಡು ಪೋಲೀಸಿನವರನ್ನು ಮಂದಿರದ ಸುತ್ತಲೂ ಕಾವಲಿಟ್ಟಿದ್ದನು. ಮಂದಿರದಿಂದ ಓಡಿಹೋಗಲು ಆರಿಗೂ ಸಾಧ್ಯವಿರಲಿಲ್ಲ. ವೈದ್ಯವಾಗೀಶನು ದಸ್ತಗಿರಿಯಾದನೆಂದು ಕೇಳಿ ಆತನ ಕಡೆಯವರೆಲ್ಲರೂ ಭಯದಿಂದಲೂ ಚಿಂತೆಯಿಂದಲೂ ನಡುಗಿಹೋದರು.

ಅರಿಂದಮನು ನಿತ್ಯಮಂಗಳೆಯನ್ನು ಕರೆದುಕೊಂಡು ವೈದ್ಯನ ಅಧಿಕಾರ ಮಂದಿರಕ್ಕೆ ಬಂದನು. ಅಲ್ಲಿ ನಿತ್ಯಮಂಗಳೆಯು ಅರಿಂದಮನನ್ನು ಕುರಿತು—ತಂದೆಯೇ! ನನ್ನ ಯಜಮಾನರನ್ನು ಈ ಜನ್ಮದಲ್ಲಿ ಮತ್ತೆ ನೋಡುವ ಆಸೆಯನ್ನೇ ತ್ಯಾಗಮಾಡಿದ್ದೆನು. ತಮ್ಮ ಅನುಗ್ರಹದಿಂದ ನನ್ನ ಮನೋರಥವು ಈಡೇರಿದುದು. ಅವರು ಜೀವಂತರಾಗಿರುವರೆಂಬುದನ್ನು ಕೇಳಿಯೇ ನನಗೆ ಪರಮಾನಂದವಾಗಿ ಹೋಗಿರುವುದು, ಎಂದು ಮಿದುನುಡಿಗಳನ್ನಾಡಿದಳು.

ದೇವೇಂದ್ರನು ಗುರುವಿನ ಇಂಗಿತವನ್ನು ಅರಿತುಕೊಂಡು ಶ್ರೀಕುಮಾರನನ್ನು ಕರೆತರಲು ಹೊರಟನು. ಕೊಂಚಹೊತ್ತಿನೊಳಗಾಗಿ ದೇವೇಂದ್ರನು ಶ್ರೀಕುಮಾರನನ್ನು ಜತೆಯಲ್ಲಿಯೇ ಕರೆದುಕೊಂಡು ಅರಿಂದಮನಿದ್ದಲ್ಲಿಗೆ ಬಂದನು. ನಿತ್ಯಮಂಗಳೆಯು ಪ್ರಾಣನಾಥನ ದುರವಸ್ಥೆಯನ್ನು ನೋಡಿ ತಡೆಯಲಾರದವ

ಳಾಗಿ ಧಾರಾಕಾರವಾಗಿ ಕಣ್ಣೀರ ಸುರಿಸಿದಳು. ಬಳಿಕ ಪ್ರಿಯನನ್ನು ಕುರಿತು—ಪ್ರಾಣಾಧಿಕ! ನೀನು ಎಂತಹ ಅಸಹ್ಯಕರವಾದ ಯಾತನೆಯನ್ನು ಅನುಭವಿಸುತ್ತಿರುವೆ! ನಿನ್ನ ಯಾತನೆಯನ್ನು ನೋಡಿ ನನ್ನ ಹೃದಯವು ಚೂರುಚೂರಾಗಿ ಹೋಗುತ್ತಿರುವುದಲ್ಲಾ! ಎಂದು ಸಂಕಟಪಟ್ಟುಕೊಂಡಳು.

ಶ್ರೀಕುಮಾರನಿಗೆ ಔಷಧದ ವೇಗವು ಇನ್ನೂ ಇಳಿದಿರಲಿಲ್ಲವಾಗಿ, ಆತನು ಶೂನ್ಯದೃಷ್ಟಿಯಿಂದ ನೋಡುತ್ತಾ—ನೀನಾರು! ನನ್ನ ಹೆಂಡಿತಿಯೇ? ನೀನು ಇಲ್ಲಿಗೇಕೆ ಬಂದೆ? ನಿನಗೂ ಹುಚ್ಚುಹಿಡಿಯಿತೇನು? ಹುಚ್ಚನ ಹೆಂಡಿತಿ ಹುಚ್ಚಿ, ಎಂದು ಕೈಗಳನ್ನು ತಟ್ಟಿಕೊಂಡು ಅರಚಿದನು.

ಅರಿಂದಮ—ತಾಯಿ! ಔಷಧದ ವೇಗವು ಇನ್ನೂ ಕಡಿಮೆಯಾಗಿಲ್ಲ. ಇದಕ್ಕಾಗಿ ನೀನು ಚಿಂತಿಸಬೇಕಾದುದಿಲ್ಲ. ನೀನು ಈಗಲೇ ನಿನ್ನ ಗಂಡನನ್ನು ಜತೆಯಲ್ಲಿಯೇ ಕರೆದುಕೊಂಡು ರಾಜನಗರಕ್ಕೆ ತೆರಳು. ನಾನು ಇಲ್ಲಿನ ಕೆಲಸಗಳೆಲ್ಲವನ್ನೂ ಮುಗಿಸಿಕೊಂಡು ಅಲ್ಲಿಗೆ ಬಂದು ನಿನ್ನನ್ನು ನೋಡುವೆನು. ಮುಂದಣ ಸಂಗತಿಗಳೆಲ್ಲವೂ ನನಗಿರಲಿ.

ಶ್ರೀಕುಮಾರನು ಒಂದೆರಡು ಹಜ್ಜೆಗಳು ಮುಂದಕ್ಕೆ ಸರಿದು ಬಂದು ಹೆಂಡಿತಿಯನ್ನು ಬಲವಾಗಿ ಅಪ್ಪಿಕೊಂಡನು. ನಿತ್ಯಮಂಗಳೆಯು ಶ್ರೀಕುಮಾರನ ಬಾಹುಪಂಜರದಲ್ಲಿ ಆಬದ್ಧೆಯಾಗಿದ್ದುಕೊಂಡೆ ಆನಂದಾಶ್ರುವನ್ನು ಸುರಿಸಿದ ತರುವಾಯ, ಅರಿಂದಮನನ್ನು ಕುರಿತು—ಶ್ರೀಮದರಿಂದಮ ಮಹಾಶಯ! ತಮ್ಮ ಈ ಋಣವನ್ನು ನಾನು ಎಂದೆಂದಿಗೂ ತೀರಿಸಿಕೊಳ್ಳಲಾರೆನು. ತಾವು ನನ್ನ ಈ ಮೃತದೇಹದಲ್ಲಿ ಪ್ರಾಣವನ್ನರ್ಪಿಸೋಣವಾಯಿತು. ನನಗೆ ದುಃಖದ ದಿನಗಳು ಕಳೆದು ಸುಖದ ದಿನಗಳು ಪ್ರಾರಂಭವಾದುವೆಂದು ತೋರಿಬರುತ್ತಿರುವುದು, ಎಂದು ತನ್ನ ಸಂತೋಷವನ್ನು ಮಿತವಾಗಿ ತೋರ್ಪಡಿಸಿಕೊಂಡಳು.

ಅರಿಂದಮ—ತಾಯಿ! ನೀನು ಎಷ್ಟರ ಮಟ್ಟಿಗೆ ಸುಖವನ್ನು ಬಯಸುತ್ತಿದ್ದಿಯೋ, ಅದಕ್ಕಿಂತಲೂ ಶತಾಧಿಕವಾಗಿ, ಸಹಸ್ರಾಧಿಕವಾಗಿ ಸುಖಪರಂಪರೆಯನ್ನೇ ಅನುಭವಿಸುವೆ. ಈ ಪಾಪಮಂದಿರದಲ್ಲಿ ನೀನು ಇನ್ನಿರುವುದು ಮಂಗಳಕರವಲ್ಲ. ಈಗಲೇ ನಿನ್ನ ಪತಿಯನ್ನು ಕರೆದುಕೊಂಡು ರಾಜನಗರಕ್ಕೆ ತೆರಳು. ನನ್ನ ಶ್ರಮವು ಫಲಿಸಿತು. ಇದೇ ನನಗೆ ಯಥೇಷ್ಟವಾದ ಪುರಸ್ಕಾರವು. ನೀನು ನನಗೆ ಕೃತಜ್ಞತೆಯನ್ನು ತೋರಿಸಬೇಕಾದುದೇನೂ ಇರುವುದಿಲ್ಲ. ನಾಳೆ ಬೆಳಗಾಗುವುದರೊಳಗಾಗಿ ನಿನ್ನ ಸ್ವಾಮಿಯು ಆರೋಗ್ಯಭಾಗ್ಯವನ್ನು ಹೊಂದುವನು. ಆಹಾ! ಎಂತಹ ಭಯಂಕರವಾದ ಶೀತವು ನಡುಗಿಸುತ್ತಿರುವುದು. ನನ್ನ ಈ ಶಾಲನ್ನು ಆತನಿಗಾದರೂ ಹೊದ್ದಿಸುವೆನು.

ಅರಿಂದಮನು ಹೀಗೆ ಹೇಳಿ ಶ್ರೀಕುಮಾರನಿಗೆ ತನ್ನ ಶಾಲನ್ನು ಹೊದ್ದಿಸುವುದಕ್ಕೆ ಹೋದನು. ಆಸಮಯದಲ್ಲಿ ಶ್ರೀಕುಮಾರನು ತನ್ನ ಮುಖವನ್ನು ಬೇರೆಯ ಕಡೆಗೆ ತಿರುಗಿಸಿಕೊಂಡನು. ಅರಿಂದಮನು ಶ್ರೀಕುಮಾರನ ಎರಡು ಕೈಗಳನ್ನೂ ಹಿಡಿದುಕೊಂಡು ಆತನ ಎದೆಯ ಮೇಲೆ ಒಂದು ಬಲವಾದ ಒದೆಯನ್ನು ಒದೆದು ಆತನನ್ನು ನೆಲದ ಮೇಲೆ ಕೆಡಹಿಕೊಂಡು ಆತನ ಮೂಗಿನ ಮೇಲೆ ರಪ್ ಎಂದು ಮುಷ್ಟಿಯಿಂದ ಗುದ್ದಿದನು. ಆ ಕೂಡಲೆಯೇ ರಕ್ತವು ಚಿಮ್ಮಿಕ್ಕಿತು. ಇದನ್ನು ನೋಡಿ ಎಲ್ಲರೂ ಹೆದರಿ ದೂರ ಸರಿದು ನಿಂತರು. ಹುಚ್ಚರ ವೈದ್ಯಶಾಲೆಯ ಮಹಿಮೆಯಿಂದ ಅರಿಂದಮನಿಗೂ ಹುಚ್ಚು ಹಿಡಿಯಿತೆಂದು ಎಲ್ಲರೂ ತಿಳಿದು ಮೂಗಿನ ಮೇಲೆ ಬೆಟ್ಟಿಟ್ಟುಕೊಂಡು ಮುಂದೇನಾಗುವುದೋ ಎಂದು ಎವೆಯಿಕ್ಕದೆ ನೋಡುತ್ತಾ ನಿಂತುಬಿಟ್ಟರು.

ನಿತ್ಯಮಂಗಳೆಯು ತನ್ನ ಸ್ವಾಮಿಯ ವಿಷಯದಲ್ಲಿ ನಡೆಯಿಸಿದ ಅತ್ಯಾಚಾರವನ್ನು ನೋಡಿ ವ್ಯಾಕುಲೆಯಾಗಿ ಅರಿಂದಮನನ್ನು ಕುರಿತು—ಮಹಾಶಯ ! ತಾವು ಏನು ಕೆಲಸಮಾಡೋಣವಾಯಿತು? ನನ್ನ ಸ್ವಾಮಿಯನ್ನು ಹೀಗೆ ಹೊಡೆದು ಕೊಂದು ಹಾಕುವುದಕ್ಕೆ ಮುಂದುವರಿದು ಬಂದಿರುವಿರಲ್ಲಾ ! ನನ್ನ ಸ್ವಾಮಿಯನ್ನು ಬಿಟ್ಟು ಕೊಡೋಣವಾಗಲಿ. ಈತನ ಅಪರಾಧವಾದರೂ ಏನು ? ರೋಗಿಯನ್ನು ತಾವು ಇಷ್ಟು ಹಿಂಸಿಸುವುದು ನನ್ನ ಕರುಳನ್ನು ಕೀಳುತ್ತಿರುವುದು, ಎಂದು ಹೇಳಿ ಅರಿಂದಮನನ್ನು ಬೇರೊಂದು ಕಡೆಗೆ ಕರೆದುಕೊಂಡು ಹೋಗುವುದಕ್ಕೆ ಯತ್ನಮಾಡತೊಡಗಿದಳು.

ಅರಿಂದಮನು ಇಂಗಿತದಿಂದಲೇ ಪೋಲೀಸಿನವನ ಕೈಯಿಂದ ಬೇಡಿಗಳನ್ನು ತೆಗೆದುಕೊಂಡು ನೆಲದ ಮೇಲೆ ಬಿದ್ದಿದ್ದ ಹುಚ್ಚನ ಕೈಗೆ ತೊಡಿಸಿದನು. ಇದಾದ ಮೇಲೆ ಅರಿಂದಮನು ನಿತ್ಯಮಂಗಳೆಯನ್ನು ಕುರಿತು—ತಾಯಿ ! ನೀನು ಹೆದರಲು ಕಾರಣವಿಲ್ಲ. ನಾನು ನಿನ್ನ ಸ್ವಾಮಿಗೆ ಪ್ರಹಾರಮಾಡುವಷ್ಟು ಹೇಡಿಯಲ್ಲ. ಈ ಪಿಶಾಚನು ನಿನ್ನ ಸ್ವಾಮಿಯಲ್ಲ. ಈತನು ನಿನ್ನ ಸ್ವಾಮಿಯ ವೇಷವನ್ನು ಧರಿಸಿದ ದುರಾತ್ಮನಾದ ಕಳ್ಳನು. ಈತನೇ ತಾಂತಿಯಾ ಭಿಲ್ಲನೆಂಬುವನು. ಈತನು ಇಲ್ಲಿಂದ ತಪ್ಪಿಸಿಕೊಂಡು ಓಡಿಹೋಗುವುದಕ್ಕಾಗಿ ನಿನ್ನ ಸ್ವಾಮಿಯ ವೇಷವನ್ನು ತಾಳಿಕೊಂಡು ಎಲ್ಲರ ಕಣ್ಣಿಗೂ ಮಣ್ಣು ತೂರುವುದರಲ್ಲಿದ್ದನು. ಈ ವೇಷದಿಂದ ಈತನು ಶ್ರೀಕುಮಾರನೆಂದೇ ನಾನು ಮೊದಲು ತಿಳಿದುಕೊಂಡಿದ್ದೆನು. ನನ್ನ ಶಾಲನ್ನು ಹೊದ್ದಿಸುವುದಕ್ಕೆ ಆತನ ಹತ್ತಿರಕ್ಕೆ ಹೋದಾಗ ಆತನಾರೆಂಬುದು ಗೊತ್ತಾಯಿತು. ಇಲ್ಲವಾದರೆ ಆತನು ಮಾಯವಾಗಿಬಿಡುತ್ತಿದ್ದನು. ದೇವರೇ ಈ ಕಷ್ಟದಿಂದ ಉದ್ಧಾರಮಾಡಿದನು, ಎಂದು ನುಡಿದನು.

ತಾಂತಿಯಾ ಭಿಲ್ಲನು ಪೋಲೀಸಿನವರ ಕೈಯಲ್ಲಿ ಸಿಕ್ಕಿಕೊಂಡು ಹುಲಿಯಂಥವನು ಬೋನಿನಲ್ಲಿ ಸಿಕ್ಕಿದ ಇಲಿಯಂತಾಗಿ ರೇಗಿ ರೇಗಿ ಬೀಳುತ್ತಾ, ಅರಿಂದಮನನ್ನು ಬಾಯಿಗೆ ಬಂದ ಹಾಗೆಲ್ಲಾ ಬೈಯುವುದಕ್ಕೆ ಪ್ರಾರಂಭಮಾಡಿದನು. ನಿತ್ಯಮಂಗಳೆಯು ದಿಕ್ಕುತೋರದವಳಾಗಿ—ಅರಿಂದಮ ಮಹಾಶಯ! ಇದೇನು ಮೋಸ, ಇದೇನು ಸರ್ವನಾಶ! ಹಾಗಾದರೆ ನನ್ನ ಸ್ವಾಮಿಯು ಎಲ್ಲಿರುವನು? ಕೃಪೆಯಿಟ್ಟು ತೋರಿಸೋಣವಾಗಲಿ, ಎಂದಳು.

ಅರಿಂದಮ—ಹೆದರ ಬೇಡವಮ್ಮ, ಹೆದರ ಬೇಡ. ನಿನ್ನ ಸ್ವಾಮಿಯು ಇಲ್ಲಿಯೇ ಇರುವನು. ನಾನು ಈಗಲೇ ಆತನನ್ನು ಇಲ್ಲಿಗೆ ಕರೆಯಿಸುವೆನು. ನೀನು ಶಾಂತಳಾಗು.

ಅರಿಂದಮನು ಹೀಗೆ ಹೇಳಿ ಪ್ರಹರಿಯನ್ನು ಕರೆದು—ಎಲಾ! ತಾಂತಿಯಾ ಭಿಲ್ಲನು ಸಿಕ್ಕಿರುವನು ಎಂದು ಹೇಳಿ ಹೊರಗಿರುವ ಪೋಲೀಸಿನ ಅಧಿಕಾರಿಯನ್ನು ಬೇಗನೆ ಕರೆದುಕೊಂಡು ಬಾ, ಹೊರಡು, ಎಂದನು.

ತಾಂತಿಯನು ಸಿಕ್ಕಿದನೆಂದು ಕೇಳಿದ ಆ ಅಧಿಕಾರಿಯ ಸಂತೋಷಕ್ಕೆ ಪಾರವೇ ಇರಲಿಲ್ಲ. ಸೌಭಾಗ್ಯಮಂದಿರದ ಒಬ್ಬೊಬ್ಬನನ್ನೂ ದಸ್ತಗಿರಿ ಮಾಡುವುದರಲ್ಲಿ ನಿಯುಕ್ತನಾಗಿದ್ದ ಅಧಿಕಾರಿಯು ಈ ಸುದ್ದಿಯನ್ನು ಕೇಳಿದ ಕೂಡಲೆ ಅರಿಂದಮನಿದ್ದಲ್ಲಿಗೆ ಓಡಿಬಂದು ಸೇರಿದನು. ಅರಿಂದಮನು ತಾಂತಿಯಾ ಭಿಲ್ಲನನ್ನು ಆತನ ಸ್ವಾಧೀನ ಪಡಿಸಿ, ನಿತ್ಯಮಂಗಳೆಯನ್ನು ಜತೆಯಲ್ಲಿ ಕರೆದುಕೊಂಡು ಸೌಭಾಗ್ಯಮಂದಿರದೊಳಗೆ ಪ್ರವೇಶಮಾಡಿದನು. ಹುಡುಕುತ್ತಿರುವಲ್ಲಿ ನಿಜವಾದ ಶ್ರೀಕುಮಾರನಿದ್ದ ಸ್ಥಳವು ಗೋಚರಿಸಿತು. ಅರಿಂದಮನೂ ನಿತ್ಯಮಂಗಳೆಯೂ ಆ ಕೋಣೆಯೊಳಗೆ ನುಗ್ಗಿದರು. ಔಷಧದ ವೇಗದಿಂದ ಶ್ರೀಕುಮಾರನು ಹುಚ್ಚನಂತಾಗಿದ್ದರೂ ತನ್ನ ಹೆಂಡಿತಿಯನ್ನು ಕಂಡ ಕೂಡಲೇ ವಿಲಕ್ಷಣವಾದ ಆನಂದವನ್ನು ತೋರ್ಪಡಿಸಿಕೊಂಡನು.

ಸಂಧಾನದಿಂದ ಅರಿಂದಮನು ತಿಳಿದುದೇನೆಂದರೆ—

"ವೈದ್ಯವಾಗೀಶನಿಗೆ ದಸ್ತಗಿರಿಯಾಯಿತೆಂದು ತಿಳಿದ ಕೂಡಲೆ, ತಾಂತಿಯನು ಓಡಿಹೋಗುವುದಕ್ಕೆ ಆಲೋಚಿಸಿದನು. ಆದರೆ ಸುತ್ತಲೂ ಪೋಲೀಸಿನವರು ಕಾದುಕೊಂಡಿದ್ದುದರಿಂದ, ಆತನು ಓಡಿಹೋಗುವುದಕ್ಕೆ ಸಾಹಸವುಳ್ಳವನಾಗಲಿಲ್ಲ. ಆಗ ಒಂದು ಉಪಾಯವು ಅವನ ತಲೆಯಲ್ಲಿ ಹೊಳೆಯಿತು. ಆ ಉಪಾಯದಿಂದ ಆತನು ದಡ ಬಡನೆ ಶ್ರೀಕುಮಾರನಿದ್ದಲ್ಲಿಗೆ ಹೋಗಿ ಆತನ ವೇಷವನ್ನು ತಾನು ಹಾಕಿಕೊಂಡು ತನ್ನ ವೇಷವನ್ನು ಆತನಿಗೆ ತೊಡಿಸಿ ಆತನನ್ನು

ಬೇರೊಂದು ಕೋಣೆಯಲ್ಲಿ ಬಿಟ್ಟು ತಾನು ಆತನ ಕೋಣೆಯಲ್ಲಿ ಹುಚ್ಚನಂತೆ ಕುಳಿತುಕೊಂಡನು. ದೇವೇಂದ್ರನು ಆತುರತೆಯಿಂದ ಇವನನ್ನೇ ಶ್ರೀಕುಮಾರನೆಂದು ಭಾವಿಸಿ ನಿತ್ಯಮಂಗಳೆಯ ಇದಿರಿನಲ್ಲಿ ಕರೆತಂದು ನಿಲ್ಲಿಸಿದನು. ನಿತ್ಯಮಂಗಳೆಯೊಡನೆ ರಾಜನಗರಕ್ಕೆ ಹೊರಡುವನಂತೆ ನಟಿಸಿ ದಾರಿಯಲ್ಲಿ ತಪ್ಪಿಸಿಕೊಳ್ಳಬೇಕೆಂದು ತಾಂತಿಯನು ಆಲೋಚಿಸಿದ್ದನು. ಅವನ ಉದ್ದೇಶವಾವುದೂ ನೆರವೇರದೇ ಹೋದುದು.”

ಅರಿಂದಮನು ನಿತ್ಯಮಂಗಳೆಯನ್ನು ಶ್ರೀಕುಮಾರನ ಹತ್ತಿರ ಬಿಟ್ಟು ಅಧಿಕಾರ ಮಂದಿರಕ್ಕೆ ಬಂದು ನೋಡಿದನು. ಅಲ್ಲಿ ಪೋಲೀಸು ಅಧಿಕಾರಿಯು ತಾಂತಿಯಾ ಭಿಲ್ಲನನ್ನು ಹಿಡಿದುಕೊಂಡು ಕುಳಿತಿದ್ದನು. ಅವನ ಸುತ್ತಲೂ ಪೋಲೀಸಿನವರು ಶಸ್ತ್ರಪಾಣಿಗಳಾಗಿ ನಿಂತಿದ್ದರು.

ಅರಿಂದಮನು ಅಧಿಕಾರಿಯನ್ನು ನೋಡಿ—ಮಹಾಶಯ! ನೀನು ಈ ಸೌಭಾಗ್ಯಮಂದಿರವನ್ನು ಕಾದುಕೊಂಡಿರು. ನಾನು ತಾಂತಿಯಾ ಭಿಲ್ಲನನ್ನು ರಾಜನಗರಕ್ಕೆ ಕರೆದುಕೊಂಡು ಹೋಗಿ ಬಿಟ್ಟುಬರುವೆನು, ಎಂದು ನುಡಿದನು.

ಅಧಿಕಾರಿ—(ತಲೆಯನ್ನು ಅಲುಗಾಡಿಸುತ್ತಾ) ಹಾಗೆಂದರೇನು, ಮಹಾಶಯ! ಅದಾಗಲಾರದು. ಅಪರಾಧಿಯನ್ನು ಕರೆದುಕೊಂಡು ಹೋಗುವುದು ನಮ್ಮಗಳ ಕರ್ತವ್ಯವು. ನಾನು ಬಂಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ಈತನೊಡನೆ ನಾನೂ ರಾಜನಗರದ ಪೋಲೀಸು ಠಾಣ್ಯಕ್ಕೆ ಹೋಗುವೆನು. ತಾವು ಇಲ್ಲಿನ ಉಳಿದ ಕೆಲಸಗಳನ್ನು ಸಾಂಗವಾಗಿ ನೆರವೇರಿಸಿದ ಬಳಿಕ ಹೊರಟುಬರಬಹುದು.

ಅರಿಂದಮ—(ನಕ್ಕು) ನಿನ್ನ ಇಷ್ಟದಂತೆಯೇ ಆಗಲಿ, ತಾಂತಿಯಾ ಭಿಲ್ಲನು ಸಾಧಾರಣಮನುಷ್ಯನಲ್ಲ. ನೀನು ಕೊಂಚ ವ್ಯಮರೆತರೂ ಕೆಲಸವೇ ತೀರಿಹೋಗುವುದು. ಬಳಿಕ ಆತನು ನಿನ್ನ ಕೈಗೆ ಸಿಕ್ಕನು. ಇದುಮಟ್ಟಿಗೆ ಚೆನ್ನಾಗಿ ಜ್ಞಾಪಕದಲ್ಲಿರಲಿ. ನಾನು ಇಲ್ಲಿಯೇ ಇದ್ದು ಉಳಿದ ಕೆಲಸವನ್ನು ನೆರವೇರಿಸುವೆನು.

ಅಧಿಕಾರಿ—(ಅಹಂಕಾರದಿಂದ) ಈ ಬಿಕಾರಿಯು ನನ್ನ ಕೈಯಿಂದ ತಪ್ಪಿಸಿಕೊಂಡು ಹೋಗಬಲ್ಲನೇ? ಆತನಿಗೆ ಎಷ್ಟು ಧೈರ್ಯವಿರಬೇಕು. ಈ ವಿಷಯದಲ್ಲಿ ತಾವು ಚಿಂತಿಸಬೇಕಾದುದಿಲ್ಲ. ನಾನಿನ್ನೂ ಹುಡುಗನಲ್ಲ. ಸರಕಾರದ ಕೆಲಸದಲ್ಲಿ ನನ್ನ ತಲೆಯ ಕೂದಲೆಲ್ಲವೂ ಬೆಳ್ಳಗಾಗಿ ಹೋಗಿರುವುದು, ಮಹಾಶಯ!

ಅರಿಂದಮನು ಮುಂದೆ ಮತ್ತಾವ ಮಾತನ್ನೂ ಆಡಲಿಲ್ಲ. ಅರ್ಧಘಂಟೆ ಯಾದ ಬಳಿಕ ಅಧಿಕಾರಿಯು ಬಂಡಿಯೊಂದನ್ನು ಬಾಡಿಗೆಗೆ ತರಿಸಿಕೊಂಡು ಅದರಲ್ಲಿ ತಾಂತಿಯನನ್ನು ಕುಳ್ಳಿರಿಸಿ ಅವನ ಪಕ್ಕದಲ್ಲಿಯೇ ತಾನೂ ಕುಳಿತುಕೊಂಡು ಮೈಗಾವಲಿಗಾಗಿ ಒಬ್ಬಿಬ್ಬ ಪೋಲೀಸಿನವರನ್ನು ಜತೆಯಲ್ಲಿಟ್ಟುಕೊಂಡು ರಾಜನಗ ರಾಭಿಮುಖವಾಗಿ ತೆರಳಿದನು. ಮತ್ತೊಂದು ಗಂಟೆಯಾದ ಮೇಲೆ ನಿತ್ಯಮಂಗ ಳೆಯು ತನ್ನ ಗಂಡನನ್ನು ಕರೆದುಕೊಂಡು ರಾಜನಗರಕ್ಕೆ ಪಯಣಮಾಡಿದಳು. ಅರಿಂದಮನು ದೇವೇಂದ್ರನನ್ನು ಜತೆಯಲ್ಲಿಟ್ಟುಕೊಂಡು ಸೌಭಾಗ್ಯಮಂದಿರವನ್ನು ಕಾಯಲಾರಂಭಿಸಿದನು. ಈತನ ಪ್ರಯತ್ನ ಬಲದಿಂದ ಆರೂ ತಪ್ಪಿಸಿಕೊಂಡು ಹೋಗುವುದಕ್ಕೆ ಸಾಧ್ಯವಾಗದೇ ಹೋಯಿತು.

ಅರಿಂದಮನು ವಾಗೀಶನ ಲೆಕ್ಕದ ಬುಕ್ಕನ್ನೂ ಹಾಗೂ ಉಳಿದ ಪತ್ರ ಗಳನ್ನೂ ಪರೀಕ್ಷಿಸತೊಡಗಿದನು. ಅದರಿಂದ ತೆರತೆರನಾದ ಆಶ್ಚರ್ಯವನ್ನುಂಟು ಮಾಡುವ ರಹಸ್ಯಗಳು ಹೊರಬಿದ್ದುವು. ಮತ್ತಾವಾವ ರಹಸ್ಯಗಳು ಗೋಚರ ವಾಗುವುವೋ ಎಂದು ಅರಿಂದಮನು ಆದರದಿಂದ ಬುಕ್ಕುಗಳನ್ನು ಹುಡುಕುತ್ತಿರು ವಲ್ಲಿ, ಮಂದಿರದ ಹಜಾರದಲ್ಲಿ ಚಿಟ್ಟೆಂದು ಚೀತ್ಕಾರ ಧ್ವನಿಯು ಎಲ್ಲರ ಹೃದಯ ವನ್ನೂ ಭೇದಿಸಿಬಿಟ್ಟಿತು. ಅರಿಂದಮನು ವ್ಯಸ್ತನಾಗಿ ಮತ್ತೇನು ಪಿಡುಗು ಬಂದಿತೋ ಎಂದು ನೋಡುತ್ತಿರುವಲ್ಲಿ, ಶ್ರೀಕುಮಾರ ನಿತ್ಯಮಂಗಳೆಯರು ಪೋಲೀಸಿನ ಅಧಿಕಾರಿಯನ್ನು ಹಿಡಿದುಕೊಂಡು ಒಳಗೆ ಬರುತ್ತಿದ್ದರು. ಅಧಿ ಕಾರಿಯ ತಲೆಯು ಒಡೆದುಹೋಗಿ ರಕ್ತವು ದರದರನೆ ಸುರಿಯುತ್ತಿದ್ದಿತು. ಆತನ ಮುಖವು ಒಣಗಿಹೋಗಿ ಮೈಯೆಲ್ಲವೂ ನಡುಗುತ್ತಿದ್ದಿತು.

ಅರಿಂದಮ—(ಬೆರಗಾಗಿ) ಇದೇನು ?

ಅಧಿಕಾರಿ—(ಗದ್ಗದ ಸ್ವರದಿಂದ) ಮಹಾಶಯ! ಸರ್ವನಾಶವಾಗಿ ಹೋಯಿತು. ಅಪರಾಧಿಯು ಕೈತಪ್ಪಿದನು.

ಅರಿಂದಮ—(ಕೋಪದಿಂದ ರೇಗಿದವನಾಗಿ) ಏನ ಮಾತನಾಡುವೆ ? ಅಪರಾಧಿಯು ಕೈ ತಪ್ಪಿದನೇ ?

ಅಧಿಕಾರಿಯು ನಿಂತಿರಲು ಶಕ್ತಿಸಾಲದವನಾಗಿ ಒಂದು ಚೌಪದಿಯ ಮೇಲೆ ಕುಳಿತುಕೊಂಡು ಮಾತನಾಡಿದನು :—

“ಮಹಾಶಯ! ನಾನು ನಡೆದುದನ್ನು ನಡೆದ ಹಾಗೆಯೇ ಹೇಳುವೆನು. ನಾನು ಗಾಡಿಯಲ್ಲಿ ತಾಂತಿಯಾ ಭಿಲ್ಲನನ್ನು ನನ್ನ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡಿ

ದ್ದೆನು. ಉಳಿದವರೆಲ್ಲರೂ ಅವರವರ ಸ್ಥಾನದಲ್ಲಿಯೇ ಕುಳಿತುಕೊಂಡು ಬಾಯಿಗೆ ಬಂದಹಾಗೆ ಮಾತನಾಡಿಕೊಳ್ಳುತ್ತಿದ್ದರು. ಬಂಡಿಯು ಭೂತನ ಕಣಿವೆಯ ಮಾರ್ಗವಾಗಿ ಹೋಗುತ್ತಿರುವಲ್ಲಿ, ತಾಂತಿಯನು ಕೈಬೇಡಿಗಳನ್ನು ಮುರಿದುಹಾಕಿ ವಿದ್ಯುದ್ಯಾನದ ಯಂತ್ರವನ್ನು ಸಡಲಿಸಿ ಎಲ್ಲಿಯೋ ಮಾಯವಾಗಿಬಿಟ್ಟನು. ಗಾಡಿಯು ದಾಯತಪ್ಪಿ ಕೊರಕಲಲ್ಲಿ ಬಿದ್ದಿತು. ಮುಂದೇನಾದುದೋ ನನಗೆ ತಿಳಿಯದು. ನನಗೆ ಜ್ಞಾನೋದಯವಾದಾಗ ಬಂಡಿಯವನು ಮೂರ್ಛೆಹೋಗಿ ಒಂದೆಡೆಯಲ್ಲಿ ಬಿದ್ದಿದ್ದನು. ಅವನ ದೇಹದಲ್ಲಿ ಪ್ರಾಣವಿದ್ದಿತೋ ಇಲ್ಲವೋ ಗೊತ್ತಿಲ್ಲ. ಉಳಿದವರಿಬ್ಬರೂ ಬಂಡಿಯ ಕೆಳಗೆ ಸಿಕ್ಕಿಕೊಂಡು ಮಾಂಸದ ಮುದ್ದೆಯಾಗಿಹೋಗಿದ್ದರು. ಇದಾದ ಅರ್ಧಘಂಟೆಯ ಮೇಲೆ ಶ್ರೀಕುಮಾರನ ಬಂಡಿಯು ಆ ಮಾರ್ಗವಾಗಿಯೇ ಬಂದಿತು. ಶ್ರೀಕುಮಾರನು ನನ್ನ ದುರವಸ್ಥೆಯನ್ನು ನೋಡಿ ತನ್ನ ಬಂಡಿಯಲ್ಲಿ ನನ್ನನ್ನು ಕೂರಿಸಿಕೊಂಡು ತಮ್ಮಲ್ಲಿಗೆ ಕರೆತಂದನು. ಇದೇ ನಡೆದ ವಿದ್ಯಮಾನವು.

ಅರಿಂದಮನು ಇದನ್ನು ಕೇಳಿ ರೇಗಿ ರೇಗಿ ಬಿದ್ದವನಾಗಿ ಹಲ್ಲುಗಳನ್ನು ಕಟಕಟನೆ ಕಡಿಯುತ್ತಾ—ಎಲಾ ಮೂರ್ಖ! ನಾನು ಎಚ್ಚರಿಕೆ ಎಂದು ಹೇಳಿದಾಗ ನೀನು ಅಹಂಕಾರದಿಂದ ಮೆರೆದು ಬಾಯಿಗೆ ಬಂದಹಾಗೆಲ್ಲಾ ಮಾತನಾಡಿದೆಯಲ್ಲಾ ? ಯೋಗ್ಯತೆಯಿದ್ದರೆ ಕೆಲಸಮಾಡಬೇಕು. ನಿಮ್ಮಂತಹ ಕೀಟಗಳಿಂದ ತಾಂತಿಯಾ ಭಿಲ್ಲನನ್ನು ಹಿಡಿದು ನಿಲ್ಲಿಸುವುದು ಸಾಧ್ಯವಲ್ಲವೆಂದು ತಿಳಿದೇ ನಾನು ಹೇಳಿದುದು. ಮುಟ್ಠಾಳ! ಮುಟ್ಠಾಳ! ಕೆಲಸವನ್ನು ಹಾಳುಮಾಡಿದೆಯಲ್ಲೋ! ಎಂದು ಬಾಯಿಗೆ ಬಂದ ಹಾಗೆ ಬೈದನು.

ಅಧಿಕಾರಿ—(ನುಡುಗುತ್ತಾ) ಮಹಾಶಯ! ನನ್ನ ದುರ್ಯೋಗವನ್ನು ಎಷ್ಟು ಹೀಯಾಳಿಸಿದರೂ ಸಾಲದು. ಇನ್ನು ನನ್ನ ಜೀವನದ ಬಾಯಿಗೆ ಮಣ್ಣು ಬಿದ್ದುಹೋಗುವುದು. ಮುಂದೇನು ಗತಿ? ಆತನನ್ನು ಹೇಗಾದರೂ ಮಾಡಿ ಹಿಡಿಯದೇ ಹೋದರೆ, ನನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ.

ಅರಿಂದಮ—ಕೈಗೆ ಸಿಕ್ಕಿಬಿದ್ದವನನ್ನು ಬಿಟ್ಟುಕೊಟ್ಟು ಮತ್ತೆ ಹುಡುಕುವುದೆಂದರೇನು? ಆತನು ಮತ್ತೆ ಆರ ಕೈಗೂ ಸಿಕ್ಕನು. ನೀನು ಈ ಆಸೆಯನ್ನು ಬಿಟ್ಟು ತಲೆಯಮೇಲೆ ಮುಸುಕನ್ನು ಹಾಕಿಕೊಂಡು ಮನೆಗೆ ಹೊರಟುಹೋಗು. ನಿನ್ನಂಥವರು ಸರಕಾರದಲ್ಲಿ ಕೆಲಸಮಾಡಬಾರದು. ನಿನ್ನಂಥವರಿಂದ ಸರಕಾರಕ್ಕೆ ಲಾಭವಿಲ್ಲ, ಗೌರವವು ಮೊದಲೇ ಇಲ್ಲ. ನಿನ್ನ ದಡ್ಡತನದಿಂದ ನನ್ನ ಕೆಲಸವೆಲ್ಲವೂ ಹಾಳಾಗಿಯೇ ಹೋಯಿತು. ನನಗೆ ಇದಕ್ಕಿಂತಲೂ ಅಪಮಾನವೇನಿರುವುದು ?